# ಆತ್ಮಾರ್ಪಣೆ

(ಚಾರಿತ್ರಿಕ ಹಿನ್ನೆಲೆಯ ಕಾದಂಬರಿ)

*

ಲೇಖಕರು :

ಪ. ಸು. ಭಟ್ಟ, ಎಂ. ಎ.

*



ಪ್ರಕಾಶಕರು :

[illegible]ಯು ಭಾರತಿ ಪ್ರಕಾಶನ

ನೆಹರೂ ನಗರ, ಬೆಂಗಳೂರು

# ಆತ್ಮಾರ್ಪಣೆ




A. Srinivasa Murthy. D.COM.

*

ಲೇಖಕರು :

ಪ. ಸು. ಭಟ್ಟ

*




ಪ್ರಕಾಶಕರು :

ವಿಜಯ ಭಾರತಿ ಪ್ರಕಾಶನ

ನೆಹರೂ ನಗರ, ಬೆಂಗಳೂರು

ವಿಜಯ ಭಾರತಿ ಪ್ರಕಾಶನ
ನೆಹರೂ ನಗರ, ಬೆಂಗಳೂರು



ಪ್ರಥಮ ಮುದ್ರಣ: 1966
ದ್ವಿತೀಯ ಮುದ್ರಣ: 1967



ಬೆಲೆ: 3 ರೂಪಾಯಿ



ಮುದ್ರಕರು:
ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ನಿಯಮಿತ
ಚಾಮರಾಜಪೇಟೆ, ಬೆಂಗಳೂರು-18

# ಮೊದಲ ಮಾತು

ಭಾರತದ ಸ್ವಾತಂತ್ರ್ಯ ಸಂಗ್ರಾಮದ ವೀರ ಕತೆಯೊಂದರ ಸುತ್ತುಮುತ್ತು ಈ ಕಾದಂಬರಿಯನ್ನು ಹೆಣೆಯಲಾಗಿದೆ. ವಾಸ್ತವಿಕತೆ ಹಾಗೂ ಚಾರಿತ್ರಿಕ ಆಧಾರಗಳೇ ಇದರ ಮುಖ್ಯ ತಳಹದಿ. ಕ್ರಾಂತಿಕಾರರೊಬ್ಬನ ಹೋರಾಟದ ಈ ಕತೆಯಲ್ಲಿ ಆಗಿನ ಕಾಲದ ಸ್ವಾತಂತ್ರ್ಯ ಸಂಗ್ರಾಮದ ಕತೆಯನ್ನು ಹೆಣೆಯಲಾಗಿದೆ. ದೇಶದ ಸ್ವಾತಂತ್ರ್ಯಕ್ಕಾಗಿ ಆತ್ಮಾರ್ಪಣೆ ಮಾಡಿದ ಮಹಾವೀರರ, ತ್ಯಾಗಿಗಳ ಈ ನೆನಪು ನಮ್ಮ ದೇಶದ ಜನ ಮನದ ಮೇಲೆ ಹಚ್ಚ ಹಸುರಾಗಿ, ಚಿರಸ್ಮರಣೆಯಾಗಿ ನಿಲ್ಲುವಂತಾದರೆ ದೇಶದ ಬದುಕು ಬಂಗಾರವಾಗುತ್ತದೆ. ಈ ಅಸಂಖ್ಯಾತ ಸ್ತ್ರೀ-ಪುರುಷರ ತ್ಯಾಗ ಹಾಗೂ ಮಾಡಿದ ಮಹಾ ತಪಸ್ಸು ಭಾರತದ ಒಂದು ಅಮರಗೀತವಾಗಿದೆ. ಇದನ್ನು ಬರೆಯಲು ಅನೇಕ ಚಾರಿತ್ರಿಕ ಗ್ರಂಥಗಳು, ಭಗತ್‌ಸಿಂಗ್‌ರ ಅನುಯಾಯಿಗಳ ಬರಹಗಳು, ದಿನಚರಿಗಳು ಹಾಗೂ ಆಗಿನ ಕಾಲದಲ್ಲಿ ಪ್ರಕಟವಾದ ಅನೇಕ ಲೇಖನ ಹಾಗೂ ಗ್ರಂಥಗಳನ್ನು ಬಳಸಿಕೊಳ್ಳಲಾಗಿದೆ. ಅವರಿಗೆಲ್ಲ ನನ್ನ ಕೃತಜ್ಞತೆಗಳು.

ಈ ಹೊತ್ತಿಗೆ ಬರೆಯಲು ಸಲಹೆ, ಸಹಕಾರಗಳನ್ನು ಕೊಟ್ಟ ಗೆಳೆಯರಾದ ಶ್ರೀ ನಿರಂಜನ ಹಾಗೂ ಶ್ರೀ ಕುಮಾರ ವೆಂಕಣ್ಣನವರಿಗೆ, ಹೊತ್ತಿಗೆಯನ್ನು ಸಕಾಲದಲ್ಲಿ ತರಲು ಸಹಾಯಕರಾದ ಶ್ರೀ ಹನುಮಂತೇಗೌಡರಿಗೆ ನನ್ನ ನೆನಹುಗಳು.

ಆಗಸ್ಟ್ ೧೫, ೧೯೬೬

**ಪ. ಸು. ಭಟ್ಟ**

## ಕೃತಜ್ಞತೆ

ಬೆಂಗಳೂರು ವಿಶ್ವವಿದ್ಯಾನಿಲಯದ ಪಠ್ಯ ಪುಸ್ತಕ ಸಮಿತಿಯವರು ಈ ಹೊತ್ತಿಗೆಯನ್ನು ಪ್ರಿ-ಯೂನಿವರ್ಸಿಟಿಗೆ ೧೯೬೭-೬೮ ರ ಸಾಲಿಗೆ ಪಠ್ಯ ಪುಸ್ತಕವನ್ನಾಗಿ ಆರಿಸಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಬೆಂಗಳೂರು
ಜೂನ್ ೧, ೧೯೬೭

**ಪ. ಸು. ಭಟ್ಟ**



# ೧

ಹೋಷಿಯಾರ್ !

ನೀರವದ ಇರುಳಿನಲ್ಲಿ, ಆಗೊಮ್ಮೆ ಈಗೊಮ್ಮೆ ಎಚ್ಚರಿಕೆಯ ಕೂಗು. ಜೊತೆಗೆ ಕಾವಲುಗಾರರೊಡನೆ ಪರಸ್ಪರ ಸಂಪರ್ಕ ಸ್ಥಾಪಿಸುವ ಶಿಳ್ಳಿನ ಕರೆ.

ಹೋಷಿಯಾರ್......

ಮೈಯೆಲ್ಲ ಕಣ್ಣಾಗಿ ಅಜಯ ದೃಷ್ಟಿಸಿದ. ದೂರ – ಬಲು ದೂರ. ಆದರೆ ಗಾಢಾಂಧಕಾರವೇ ಸುತ್ತಲೂ ಕವಿದಿದೆ. ಯಾವ ಬೆಳಕೂ ಇಲ್ಲ.

ಸುಮಾರು ನಾಲ್ಕಡಿ ಅಗಲದ, ಆಳುದ್ದದ ಕತ್ತಲ ಕೋಣೆ, ಒಂದು ಬದಿಗೆ ಬರಿ ಮಣ್ಣಿನ ದಿಣ್ಣೆ ; ಅದೇ ಆತನ ಮಲಗುವ ಮಂಚ. ಮೂಲೆಯಲ್ಲಿ ಒಂದು ನೀರಿನ ಮಡಿಕೆ. ಮೂರು ಕಡೆಗೂ ಗೋಡೆ. ಒಂದೇ ಒಂದು ಬಾಗಿಲು. ಹುಲಿಯ ಬೋನು! ಅದೇ ಮಾದರಿಯಿಂದ ರಚಿಸಿದಂತಿದೆ ಕಾರಾಗೃಹದ ಆ ಕೋಣೆ. ಬೋನಿನ ಮಾದರಿಯನ್ನು ಹೋಲುವ ಕಬ್ಬಿಣದ ಸರಳುಗಳು. ಆದರೆ ಹುಲಿ ಹೊರಗಡೆಯಾದರೂ ದೃಷ್ಟಿ ಹರಿಸಬಹುದು. ಬಂಧನದಲ್ಲಿಲ್ಲದವನನ್ನು ನೋಡಿ ಕೆಂಗಣ್ಣು ಹರಿಸಬಹುದು. ಗುರಗುಟ್ಟಿ ಆರ್ಭಟಿಸಬಹುದು. ಆದರೆ ಇಲ್ಲಿ ಹೊರಗೆ ಇಣಕಿ ಕೂಡ ನೋಡದಂತೆ ಹಳೆಯ ತಗಡುಗಳಿಂದ ಅದನ್ನು ಮುಚ್ಚಲಾಗಿದೆ. ಕೆಳಗಡೆಗೆ ನೆಲದಿಂದ ಒಂದು ಅಡಿಯಷ್ಟು ಅಂತರ ಮಾತ್ರ ತಗಡಿನ ರಕ್ಷಣೆ ಇಲ್ಲ. ಅದೇ ಗಾಳಿ – ಬೆಳಕಿನ ಹಾದಿ.

ಉಸಿರು ಬಿಗಿಯುವ ಈ ಕೋಣೆಯಲ್ಲಿ ಅಜಯ ಯೋಚಿಸುತ್ತಿದ್ದಾನೆ. ಹಗಲು – ರಾತ್ರಿ ಎಲ್ಲಾ ಆತನಿಗೆ ಒಂದೇ. ಆದರೆ ಬೆಳಕು ಹರಿದಾಗ ಮತ್ತೆ ಯಾವ ಘಟನೆ ಜರಗುವುದೋ ? ಯಾವ ದಿವಸ ಭಾರತದ ಪುಣ್ಯಭೂಮಿಯಲ್ಲಿ ಸ್ವಾತಂತ್ರ್ಯ ಸೂರ್ಯೋದಯವಾಗುವದೋ ? ದಾಸ್ಯದ ಸಂಕೋಲೆಯನ್ನು ಬಿಗಿದು ನಿಶ್ಚೇಷ್ಟಿತವಾಗಿದ್ದ ಜನಕೋಟಿ ಎಂದು ನವಚೇತನದ ಉತ್ಸಾಹವನ್ನು ಹೊಂದುವದೋ ?

ಭಾರತ ವರ್ಷ – ಭಾರತಮಾತೆ.

ಒಂದು ಕಾಲದಲ್ಲಿ ಪೃಥ್ವಿಗೇ ಮಾರ್ಗದರ್ಶನವಾಗಿದ್ದ ಮಹಾನ್‌ರಾಷ್ಟ್ರ. ಯುಗಯುಗಾಂತರಗಳಿಂದ ದಿವ್ಯ ಸಂಸ್ಕೃತಿಯ ಸುಗಂಧ ಸುವಾಸನೆಯ ಕಂಪನ್ನು ಬೀರಿದ ರಾಷ್ಟ್ರ. ವಿಶ್ವಕ್ಕೆ ಕರುಣೆಯ ಜಲಸೇಚನ ಮಾಡಿ ಸತ್ಯ, ಶಾಂತಿ, ಅಹಿಂಸೆಯ ಮಹಾ ತತ್ವಗಳನ್ನು ಬೋಧಿಸಿದ ದಿವ್ಯಾತ್ಮ ಭಗವಾನ್ ಬುದ್ಧನು ಆಗಿಹೋದ ಮಹಾ ದೇಶ. ಧರ್ಮ ಸಾಮ್ರಾಜ್ಯವನ್ನೇ ಸೃಷ್ಟಿಸಿದ ಅಶೋಕ ಚಕ್ರವರ್ತಿ ಹೆಮ್ಮೆಯಿಂದ ಆಳಿದ ಭಾರತ ದೇಶ...

ಮಹಾನ್ ಋಷಿಗಳ, ಪವಿತ್ರ ಗ್ರಂಥಗಳ ಹಾಗೂ ವಿಶ್ವವ್ಯಾಪಿ ಮತಗಳ ತವರೂರು.

'ಹಿಮಮಯದ ಪುಣ್ಯಾಚಲ, ತಲೆ ಎತ್ತಿತ್ತು ನಮ್ಮೀ ನೆಲ' ಎಂದು ಆ ಕಾಲದಲ್ಲಿ ಹಾಡಿದ ಪುಣ್ಯ ಭೂಮಿ ಭಾರತ.

ಉತ್ತರಕ್ಕೆ ಹಿಮಾಚ್ಛಾದಿತವಾಗಿ ಗಡಿ ರಕ್ಷಕವಾಗಿ ನಿಂತಿರುವ ಹಿಮವತ್ ಪರ್ವತಾವಳಿಗಳು. ಮೂರು ದಿಕ್ಕುಗಳನ್ನು ಸುತ್ತಿ ನಿಂತಿರುವ ಕಡಲು. ಶತಮಾನಗಳಿಂದ ಹರಿಯುತ್ತಿರುವ ಗಂಗಾನದಿ, ದೇಶದಾದ್ಯಂತ ತುಂಬಿ ತುಳುಕುತ್ತ ಹರಿಯುವ ನದಿಗಳು. ಎಲ್ಲಿ ನೋಡಿದರತ್ತ ಹಸಿರು ಸಿರಿಯನ್ನು ಹೊತ್ತ ನೆಲ, ಭಾರತದ ಪುಣ್ಯ ನೆಲ!

ಅಂತಹ ದೇಶಕ್ಕೆ ಎಂತಹ ಪರಿಸ್ಥಿತಿ ಬಂತು. 'ಏಳು ಮಹಾ ನದಿಗಳ, ಏಳು ಮಹಾ ಪರ್ವತಗಳ' ಈ ಬೃಹತ್ ರಾಷ್ಟ್ರದ ವೈವಿಧ್ಯಮಯ ಬದುಕಿನ ಮೇಲೆ ಪರದೇಶದ ಕರಿ ನೆರಳು ಬಿತ್ತು. ಭವ್ಯ ಪರಂಪರೆಯ ನಾಡು ಪಾರತಂತ್ರ್ಯದ ಸಂಕೋಲೆಯಿಂದ ಬಂಧಿತವಾಯಿತು. ದುರಂತ ನಾಟಕದ ಮೊದಲ ಅಂಕ ಆರಂಭವಾಯಿತು.

ಸ್ವಾತಂತ್ರ್ಯದ ಮರವನ್ನು ಕಡಿದೊಗೆದಿದ್ದರು ಆಂಗ್ಲರು. ಆದರೆ ಮಣ್ಣಿನಲ್ಲಿದ್ದ ಬೇರು ಕಿತ್ತೊಗೆಯಲಾಗಲಿಲ್ಲ. ನೆಲದ ಸತ್ವವನ್ನು ಹೀರಿ ಬೇರು ಮತ್ತೆ ಚಿಗುರಿತು. ಮೊಳಕೆ ಮೇಲೆ ಬಂತು. ಸ್ವಾತಂತ್ರ್ಯದ ಮಹಾ ಹೋರಾಟ ಆರಂಭವಾಯಿತು.

ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಜಾಗೃತಿಯ ಚಿಹ್ನೆ ಮೂಡಿಬಂತು. ಆಕಾಶದಲ್ಲಿ 'ಬೆಳ್ಳಿ' ಮೂಡಿತು. ರಣಕಹಳೆ ಮೊಳಗಿತು.

ಈ ದೇಶಕ್ಕಾಗಿ, ಈ ನೆಲಕ್ಕಾಗಿ, ಭಾರತ ಮಾತೆಯ ವಿಮೋಚನೆಗಾಗಿ ನಮ್ಮ ದೇಹ ಮುಡಿಪು. ದೇಹದಲ್ಲಿ ಉಸಿರು ಇರುವವರೆಗೂ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಛಲ ಜನರಲ್ಲಿ ಮೂಡಿ ಬಂತು. 'ವಂದೇ ಮಾತರಂ' ಘೋಷ ಮುಗಿಲು ಮುಟ್ಟಿತು.

ವಂದೇ ಮಾತರಂ!

ಉಸಿರು ಬಿಗಿಯುವ ಆ ಕತ್ತಲೆಯ ಕೋಣೆಯಲ್ಲಿಯೂ ಅಜಯನ ಮೈಯಲ್ಲಿ ಹೊಸ ಉತ್ಸಾಹ ಉಕ್ಕಿಬಂತು. ನರನಾಡಿಗಳಲ್ಲಿ ಚೈತನ್ಯದ ಬುಗ್ಗೆ ಚಿಮ್ಮಿತು.

ಇಂದಲ್ಲ—ನಾಳೆ!

ನಾಳೆಯ ದಿವಸ ಆ 'ಬೆಳಕು' ಮೂಡಿ ಬರಬಹುದು. ದಾಸ್ಯದ ಶೃಂಖಲೆಯನ್ನು ಹರಿದೊಗೆದು ಬ್ರಿಟಿಷರ ಕಪಿ ಮುಷ್ಟಿಯಿಂದ ಪಾರಾಗಿ ಅಜಯ ಎಲ್ಲರಂತೆ ತಲೆ ಎತ್ತಿ ನಡೆಯುತ್ತಾನೆ.

ಟಪ್...ಟಪ್...ಟಪ್...

ಹೋಷಿಯಾರ್......

ಶ್ಲೀ......ಶಿಳ್ಳು

ಒಮ್ಮೊಮ್ಮೆ ರಾತ್ರೆ ನಿದ್ರೆ ಮಾಡಲೂ ಅವಕಾಶವಿಲ್ಲ, ರಾತ್ರೆ ಪಾಳೆಗಾರರ ಸದ್ದು. ಯಾರು ನಿದ್ರಿಸಿದರೂ ರಾತ್ರೆ ಪಾಳೆಗಾರರು ನಿದ್ರಿಸುವಂತಿಲ್ಲ, ಅದಕ್ಕೇ 'ಹೋಷಿಯಾರ್' ಎಂಬ ಕೂಗು ಇರಬೇಕು. ಬಹುಶಃ ತಮ್ಮನ್ನೇ ತಾವು ಎಚ್ಚರಿಸಿಕೊಳ್ಳುವ ಕರೆ ಇರಬಹುದು. ಅಜಯನ ಪಕ್ಕದ ರೂಮಿನ ಕೈದಿ ಮರಣ ದಂಡನೆಗೋ, ದೀರ್ಘಾವಧಿ ಶಿಕ್ಷೆಗೋ ಗುರಿಯಾದವನಿರಬೇಕು. ಯಾಕೆಂದರೆ ಕಾವಲುಗಾರ ಸರದಿಯಂತೆ ಅಲ್ಲಿ ಬಂದಾಗಲೆಲ್ಲ ಅವನು ಟಪ್... ಟಪ್ ಮಾಡಿದಾಗಲೆಲ್ಲ ಅವನು ಓ ಗೊಡಬೇಕು. ಜಾವಕ್ಕೊಮ್ಮೆ ಕಾವಲುಗಾರ ತನ್ನ ಬಡಿಗೆಯಿಂದ ಖೈದಿಗಳ ಕೋಣೆಯ ಬಾಗಿಲು ಬಡಿಯುತ್ತಾನೆ. ಪ್ರತಿಯೊಬ್ಬನೂ ಪರಿಚಿತನೆಂಬಂತೆ ಕರೆಯುತ್ತಾನೆ.

ಸತ್—ಶ್ರೀ...ಅಕಾಲ್...

ಖೈದಿಯಿಂದ ಮರುತ್ತರ ಪಡೆದೇ ಅವನ ಮುನ್ನಡೆ.

"ಅಲ್ಲಾ...ಹೋ...ಅಕ್ಬರ್..."

" ರಾಮ್......ರಾಮ್."

ಸಿಖ್, ಮುಸ್ಲಿಂ ಅಥವ ಹಿಂದು ಯಾರಾದರೇನು ? ಭಾರತದ ಪಾರತಂತ್ರ್ಯದ ಶೃಂಖಲೆ ಎಲ್ಲರನ್ನು ಬಿಗಿದಿದೆಯಲ್ಲವೇ ? ಅಜಯ ಯೋಚಿಸುತ್ತಾನೆ. ಇವರೆಲ್ಲರೂ ಕೂಡಿಕೊಂಡೇ ಅಲ್ಲವೇ ತಾವು ಮಹಾ ಕ್ರಾಂತಿಗಾಗಿ ದೇಶದಾದ್ಯಂತ ಸಂಘಟನೆ ನಡೆಸಿದ್ದು ?

ಜೇಲಿನ ವಾತಾವರಣ ನಿಜವಾಗಿಯೂ ಉಸಿರು ಕಟ್ಟುವ ವಾತಾವರಣ. ಉತ್ಸಾಹವನ್ನು, ಶಕ್ತಿಯನ್ನು ಉಡುಗಿಸಲು ಸಾಮ್ರಾಜ್ಯಶಾಹಿಗಳು ಹಾಕಿದ ಸಂಚು. ಮನುಷ್ಯನನ್ನು ನಿ ಜಿ ರ್ ೯ ೀ ವ ವಾ ಗಿ ಮಾಡಬಹುದು. ಆದರೆ ಒಳಗಿನ ಜಾಗೃತವಾದ ಅವನ ಅಂತಃಶಕ್ತಿ ದಬ್ಬಾಳಿಕೆಗೆ ಮಣಿದೀತೇ ? ಜೇಲಿನಲ್ಲಿಯ ಸೊಳ್ಳೆಗಳನ್ನು ನೋಡಿದಾಗಲೆಲ್ಲ ಅಜಯ ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ನೆನೆಯುತ್ತಾನೆ. ಯಾವುದೇ ಭೀತಿ ಇಲ್ಲದ ಸಮ್ರಾಟರಂತೆ ಹಾರಾಡಿ ಮೆರೆದು ಅವು ಸೆರೆಯಾಳುಗಳ ರಕ್ತವನ್ನು ಹೀರಿ ಯಥೇಷ್ಟವಾಗಿ ಕೊಬ್ಬಿವೆ. ಸಾಮ್ರಾಜ್ಯಶಾಹಿಗಳೂ ಇವುಗಳಂತೆ ಜನತೆಯ ರಕ್ತ ಹೀರಿ ಕೊಬ್ಬಿವೆ.

'ಕೊಬ್ಬಿದ ಸೊಳ್ಳೆಗಳನ್ನು ಒಂದೊಂದಾಗಿ ಹಿಡಿದು ಪಾದದಡಿಯಲ್ಲಿ ತುಳಿದು ಹಾಕುವಂತೆಯೇ ಈ ಸಾಮ್ರಾಜ್ಯಶಾಹಿಯ ಹುಟ್ಟಡಗಿಸಬೇಕು.' ಅಜಯ ಈ ಮಾತು ನೆನೆದಾಗ ಮುಷ್ಟಿ ಬಿಗಿಯುತ್ತಾನೆ. ಆದರೆ ಅದಕ್ಕಾಗಿ ಏನು ಮಾಡಬೇಕು ? ಇಡೀ ದೇಶ ಎದ್ದು ನಿಲ್ಲಬೇಕು. ಸಿಂಹದಂತೆ ಘರ್ಜಿಸಿ ಎದ್ದು ನಿಲ್ಲಬೇಕು. ಈ ದೇಶದ ಅವನತಿಗೆ ಕಾರಣರಾದವರ ವಿರುದ್ಧ ಸೆಟೆದು ಎದ್ದು ನಿಲ್ಲಬೇಕು. ಕ್ರಾಂತಿಯ ಕಹಳೆಯೂದಬೇಕು.

ಕ್ರಾಂತಿಯ ಕಹಳೆ ಮೊಳಗಿತು.

ಬೂದಿ ಮುಚ್ಚಿದ ಕೆಂಡದಂತಿದ್ದ ದೇಶದ ಜನತೆಯ ಸ್ವಾತಂತ್ರ್ಯ ಪ್ರೇಮ ಜ್ವಲಿಸಲಾರಂಭಿಸಿದೆ. ಇಡಿಯ ದೇಶವೇ ಜ್ವಾಲಾಮುಖಿಯಾಗಿದೆ.

ಸಾಮ್ರಾಜ್ಯಶಾಹಿಗಳೂ ಜಾಗೃತರಾಗಿ ಒಬ್ಬೊಬ್ಬರನ್ನಾಗಿ ಜೇಲಿನಲ್ಲಿ ಸೇರಿಸ ಹತ್ತಿದ್ದಾರೆ. ಜಾಗೃತ ಜನತೆಯನ್ನು ಸದೆ ಬಡಿಯಲು ಉದ್ಯುಕ್ತರಾಗಿದ್ದಾರೆ. ಕೆಲವರಿಗೆ ಲಾಠಿಗಳಿಂದ ಹೊಡೆತ, ಇನ್ನು ಕೆಲವರಿಗೆ ದೀರ್ಘಾವಧಿ ಶಿಕ್ಷೆ. ಇನ್ನು ಕೆಲವರ ಕೊರಳಿಗೆ ಉರುಳು !

ಬೆಳಕು ಹರಿದರೆ ಯಾರ ಕೊರಳಿಗೆ ಉರುಳು ಕಾದಿರುವದೋ ? ಸಂದೇಹದ ತೂಗುಯ್ಯಾಲೆಯಲ್ಲಿ, ಪಾರತಂತ್ರ್ಯದ ಕತ್ತಲು ಗವಿಯಲ್ಲಿ, ಕ್ರಾಂತಿಕಾರ ಅನುಭವಿಸಬೇಕಾದುದು ನರಕ ಜೀವನ. ಆ ಕೋಣೆಯೊಳಗೇ ಉಗುಳಬೇಕು. ಹಾಗಾಗಿ ನಿದ್ರೆಯಾದರೂ ಎಲ್ಲಿ ಬರಬೇಕು ?

ಈ ದುರಂತದಿಂದಾಗಿ ನಾಲ್ಕಾರು ದಿನ ನಿದ್ರೆ ಬಾರದೆ ತಳಮಳಿಸಿದರೂ, ಯಾರೇ ಆಗಲಿ ಆ ಬಳಿಕ ನಿದ್ರೆಗೆ ಸೋಲಲೇಬೇಕು. ಹಾಗೆ ಬಲವತ್ತರವಾಗಿ ಬಂದ ನಿದ್ರೆಗೆ ಬಲಿಯಾದರೂ ಕಾವಲಿನವರು ಎಚ್ಚರಿಸುವದನ್ನು ನಿಲ್ಲಿಸುವುದಿಲ್ಲ.

" ಹೋಷಿಯಾರ್..."

ಈ ಎಚ್ಚರಿಕೆಯ ಕೂಗಿಗೆ ಮಾತ್ರ ಚ್ಯುತಿ ಇಲ್ಲ. ಅದು ತಪ್ಪುವುದಿಲ್ಲ.

ಜೇಲಿನಲ್ಲಿ ಗಂಟೆ ಬಾರಿಸಿ, ನೌಕರರನ್ನು ನಿದ್ರಿಸದಂತೆ ತಡೆದು, ತನ್ನ ನಿದ್ರೆಯನ್ನು ದೂರ ಮಾಡುವ ಗಂಟೆಯಾಳು ಎಣಿಕೆ ಮರೆಯಬಹುದು. ಜಾವಕ್ಕೊಮ್ಮೆ ಕೂಗುವ ಕೋಳಿ ಎಚ್ಚರ ತಪ್ಪಬಹುದು. ಆದರೆ, ಜಾವಕ್ಕೊಮ್ಮೆ ಖೈದಿಗಳನ್ನು ಎಚ್ಚರಿಸಿ, ಎಲ್ಲ ಭೀಕರ ಖೈದಿಗಳೂ ಬದುಕಿದ್ದಾರೆ ಎಂದು ಖಚಿತ ಪಡಿಸಿಕೊಳ್ಳುವ ಕಾವಲುಗಾರ ಮಾತ್ರ ತನ್ನ ಕರ್ತವ್ಯ ಮರೆಯಲಾರ.

ಖೈದಿಗಳನ್ನು ತುಂಬುವ ಈ ಗೂಡುಗಳಂತಿರುವ ಕೋಣೆಗಳು ಸಾಲು ಸಾಲಾಗಿ ಇವೆ. ಆದರೆ, ಯಾರೂ ಪರಸ್ಪರ ನೋಡಲೂ, ಮಾತನಾಡಲೂ ಸಾಧ್ಯವಾಗದಂತಿದೆ. ಕೊಲೆಪಾತಕಿಗಳಾದರೂ ಪರಸ್ಪರ ಕಲೆತು ತಮ್ಮ ಕಥೆಗಳನ್ನು ಹೇಳಿಕೊಳ್ಳಬಹುದು. ಆದರೆ, ರಾಜಕೀಯ ಖೈದಿಗಳೆನಿಸಿದ ಕ್ರಾಂತಿಕಾರರಿಗೆ ಅಂಥ ಅವಕಾಶವೂ ಇಲ್ಲ. ಒಂದೇ ಕಡೆ ಒಂದೇ ಸಾಲಿನ ಕೋಣೆಗಳಲ್ಲೂ ಅವರಿಗೆ ಆಶ್ರಯ ಸಿಗದು. ಅಲ್ಲೊಂದು ನಾಲ್ಕು ಮಂದಿ, ಇಲ್ಲೊಂದು ನಾಲ್ಕು ಮಂದಿ. ಹೀಗಿ ಕೂಗಿದರೆ ಧ್ವನಿಯೂ ಕೇಳಿಸದಷ್ಟು ದೂರ ದೂರ ಅವರ ಸವತಿ. ವಸತಿ

ಪ್ರತಿದಿನ ಮುಂಜಾನೆ ಒಂದು ಘಂಟೆ ಕಾಲ ಖೈದಿಗಳನ್ನು ಗೂಡಿನಿಂದ ಬಿಡುಗಡೆ ಮಾಡುತ್ತಾರೆ. ಪ್ರಾತರ್ವಿಧಿಗಳನ್ನು ಪೂರೈಸಿ ಅವರೆಲ್ಲ ತಮ್ಮ ಗೂಡುಗಳ ಮುಂದೆ ಸಿದ್ಧವಾಗಬೇಕು. ಆಗ ತೋಟಿ ಬಂದು ಕೋಣೆಗಳನ್ನು ಗುಡಿಸಿ ಶುಚಿಗೊಳಿಸುತ್ತಾನೆ. ಊಟವೆನ್ನಲಾದ ರೊಟ್ಟಿಯೂ ಆಗ ಅತ್ತ

ಬರುತ್ತದೆ. ಈ ಅವಧಿಯಲ್ಲೇ ಪರಸ್ಪರ ಗೆಳೆಯರೊಡನೆ ಅಥವಾ ಇತರ ಖೈದಿಗಳೊಡನೆ ಮಾತುಕತೆಗೆ ಅವಕಾಶ. ರೊಟ್ಟಿ ದೊರೆಯಿತೆಂದೊಡನೆಯೇ ಕೋಣೆಗಳೊಳಗೆ ಹೋಗಬೇಕು. ಒಡನೆಯೇ ಕಾವಲುಗಾರ, ಬಾಗಿಲು ಭದ್ರ ಪಡಿಸುತ್ತಾನೆ. ಖೈದಿ ತನ್ನ ಕೋಣೆಯೊಳಗೆ ತನ್ನ ಪಾಲಿನ ರೊಟ್ಟಿಯನ್ನು ಸ್ವತಂತ್ರನಾಗಿ ತಿಂದು ನೀರು ಕುಡಿಯಬಹುದು.

ಒಂದು...ಎರಡು...ಮೂರು......

ಹೀಗೆ ದಿನಗಳು ಕಳೆಯುತ್ತಿದ್ದಂತೆ ಎಂಥ ಸ್ವಚ್ಛಂದ ಜೀವಿಯೂ ಜೇಲಿನ ನಿತ್ಯದ ನಿಯಮಗಳಿಗೆ ಹೊಂದಿಕೊಳ್ಳುತ್ತಾನೆ. ಪ್ರತಿ ದಿನವೂ ಎಳ್ಳಷ್ಟೂ ಬದಲಾಗದ ನಿಯಮ, ನಿಬಂಧನೆಗಳು, ಕೊಂಚ ವ್ಯತ್ಯಾಸವಾದರೂ ಸಾಕು ಜೇಲಿನಲ್ಲಿ ಮಹಾಕ್ರಾಂತಿಯೇ ನಡೆಯಿತೆಂದು ತಿಳಿದು ವರ್ತಿಸುವ ಅಧಿಕಾರಿ ಗಳು ನೌಕರರು.

ಇಲ್ಲಿ "ಜೇಲಿನ ನ್ಯಾಯ" ದಲ್ಲಿ ಮನುಷ್ಯನೆಂಬುವನು ಯಂತ್ರದ ಒಂದು ಕೀಲಿ. ಆತ ಜೇಲಿನ ಅಚಲ ನಿಯಮಾವಳಿಗಳಿಗೆ ಹೊಂದಿಕೊಂಡಿದ್ದರೇ ಬಾಳು, ಬದುಕು. ಆ ನಿಯಮಗಳಂತೆ ಒಬ್ಬ ಖೈದಿ ಇನ್ನೊಬ್ಬನೊಡನೆ ಮಾತನಾಡಕೂಡದು. ಕೊಟ್ಟುದನ್ನು ತಿನ್ನಬೇಕು. ಎಂಥ ಹಿಂಸೆ ದೊರೆತರೂ ವಿರೋಧಿಸಲಾಗದು. ಗಟ್ಟಿಯಾಗಿ ಮಾತನಾಡಕೂಡದು, ಹಾಡಕೂಡದು. ಗೊರಕೆ ಹೊಡೆಯಲೂಕೂಡದು. ನಗುವ ಅಧಿಕಾರವೇ ಇಲ್ಲ. ಒಂದೇ ಬಗೆಯ ನಿರ್ದಿಷ್ಟ ಉಡಿಗೆ ತೊಡಲೇಬೇಕು. ಹೇಳಿದ ಕೆಲಸ ಮಾಡಬೇಕು. ಒಟ್ಟಿನಲ್ಲಿ ಖೈದಿಯ ಉಡಿಗೆ, ಆಹಾರ, ನಿದ್ರೆ, ಮಾತು, ಕೆಲಸ, ಚಲನ ಹಾಗೂ ಪ್ರತಿ ಯೊಂದೂ ನಿರ್ದಿಷ್ಟವಾಗಿ ಜೇಲಿನ ನಿಯಮಗಳಿಗೆ ಒಳಗಾಗಿವೆ. ಅವನ ರೂಪ, ವಿಚಾರಧಾರೆ, ಭಾವನೆ, ಹೃದಯ, ಬಯಕೆ, ಬೇಕುಗಳನ್ನೂ ಅದು ಅಮುಕಿ ಹಿಡಿಯುತ್ತದೆ. ಇಂಥ ಪರಿಸ್ಥಿತಿಯಲ್ಲಿ ಈ ನಿಯಮಗಳನ್ನು ಮೀರುವುದು ಅಚ್ಚರಿಯಲ್ಲ. ಆದರೆ, ಅದರಿಂದಾಗಿ ಖೈದಿಯ ಬದುಕು ನರಕವೇ ಆಗುತ್ತದೆ.

ಇನ್ನೂ ವಿಚಾರಣೆಯ ಹಂತದಲ್ಲೇ ಇರುವವರು ತಮ್ಮ ಉಡಿಗೆಯನ್ನು ಮಾತ್ರ ಧರಿಸಬಹುದು. ಅದು ಸ್ವಾತಂತ್ರ್ಯದಿಂದ ದಾಸ್ಯದೆಡೆಗೆ ಸಾಗುವ ಹಾದಿ. ಇತರ ನಿಯಮಗಳ ಸಡಿಲಿಕೆ ಇಲ್ಲ.

ರಾಜಕೀಯ ಖೈದಿಗಳಂತೂ "ದೆವ್ವ" ಗಳೆಂಬ ಭಾವನೆ ಜೇಲಿನ ಎಲ್ಲ ನೌಕರರಲ್ಲೂ ಇದೆ. ಅವರ ಬಗೆಗೆ ಅಷ್ಟು ಭೀತಿ, ಅಷ್ಟು ಕ್ರೌರ್ಯ, ಹಾಗೂ ಸದಾ ಅವರ ಮೇಲೆಯೇ ದೃಷ್ಟಿ.

ರಾಜಕೀಯ ಖೈದಿ ಮಾತ್ರ ಇಲ್ಲಿ ಹೆಚ್ಚಿನ ಮಹತ್ವ ಪಡೆಯುತ್ತಾನೆ. ಅವನ ಗೌರವ, ಘನತೆ, ಸ್ವಾತಂತ್ರ್ಯಗಳಿಗೆ ಮಾನ್ಯತೆ ಇಲ್ಲವಾದರೂ, ಜೇಲಿನ ಉನ್ನತಾಧಿಕಾರಿಯಿಂದ ತೊಡಗಿ ಕಟ್ಟಕಡೆಯ ಪಂಚರಂಗಿಯವರೆಗೂ ಎಲ್ಲರಿಗೂ ಅವನ ಕಡೆಗೇ ಕಣ್ಣು. ಈ ಕ್ರಾಂತಿಕಾರ ಜೇಲಿನಲ್ಲಿ ಅನಾಯಕತ್ವ ಹರಡಿ, ಗಲಭೆ ಹುಟ್ಟಿಸಿ, ಪ್ರಕ್ಷೋಭೆಯುಂಟು ಮಾಡಬಹುದೆಂಬ ಭೀತಿ.

ಅರ್ಧ ಬೆಂದ ಅನ್ನ, ತರಕಾರಿ, ಹುಳುಹುಪ್ಪಟೆ, ಪ್ರಾಣಿಗಳ ಹಿಚಿಕೆ, ಜಿರಳೆ, ಕೂದಲುಗಳಿಂದ ತುಂಬಿದ ಆಹಾರ ನೀರು, ಹೊಲಸು ಗಾಳಿ, ಕಾಣದ ಬೆಳಕು, ಬೆಳಕು ನೀಡದ ದೀಪ. ಇವೆಲ್ಲವುಗಳ ಬಗೆಗೆ ಯಾವ ಖೈದಿಯೂ ಪ್ರತಿಭಟಿಸಿದಾಗ, ಅಂಥ ಪ್ರತಿಭಟನೆ ರಾಜಕೀಯ ಖೈದಿ ಆರಂಭಿಸಬಹುದೆಂಬ ಭಯ ಅಧಿಕಾರಿಗಳಿಗೆ.

ರಾಜಕೀಯ ಖೈದಿಗಳು ತಮ್ಮ ಗೂಡುಗಳಿಂದ ಹೊರಗೆ ಕಾಲಿಟ್ಟರೆ ಸಾಕು, ಕಾವಲಿನವರು ಅವರ ನೆರಳಾಗಿ ಸಂಚರಿಸುತ್ತಾರೆ. ಎಲ್ಲೆಡೆಗೂ ಬರುತ್ತಾರೆ, ಯಾರೊಡನೆಯೂ ಮಾತನಾಡದಂತೆ ಕಾವಲಿರುತ್ತಾರೆ.

ಆದರೆ ಕೆಲವೊಮ್ಮೆ ಖೈದಿಗಳೂ ಜೇಲಿನ ಸಹಾಯಕರಾಗಬಹುದು. ಜೇಲಿನಲ್ಲಿ ದೀರ್ಘಾವಧಿ ಶಿಕ್ಷೆಗೆ ಒಳಗಾದವರು, ಜೇಲಿನ ಅಧಿಕಾರಿಗಳಿಂದ ಉತ್ತಮ ನಡತೆಗೆ 'ಪ್ರಶಸ್ತಿ' ದೊರಕಿಸಿಕೊಂಡವರು 'ಪಂಚರಂಗಿ' ಗಳೆಂದು ಕರೆಯಿಸಿಕೊಂಡು ಸಹಾಯಕರಾಗಿ ಕೆಲಸ ಮಾಡುತ್ತಾರೆ. ಖೈದಿಗಳನ್ನು ಪೀಡಿಸಲು ಪಂಚರಂಗಿಗಳ ಪಾತ್ರವೂ ಮುಖ್ಯ.

ಹೀಗೆ ನಾನಾ ಮುಖವಾದ ಕಾವಲಿನ ನಡುವೆ, ಹದ್ದಿನ ಕಣ್ಣುಗಳ ನಡುವೆ ಖೈದಿ ಬಾಳಬೇಕು.

ಆದರೂ ಕ್ರಾಂತಿಕಾರಿ ಇವೆಲ್ಲ ನಿರ್ಬಂಧಗಳನ್ನು ಮುರಿದು ಜೇಲಿನಿಂದ ಪಾರಾಗಿ ಹೋಗಿದ್ದಾನೆ. ಹೋಗಬೇಕು. ಅಜಯ ಯೋಚಿಸುತ್ತಾನೆ: ತಾನೂ ಸಹಿತ ಈ ಬಂಧನವನ್ನು ಹರಿದೊಗೆದು ಹೋಗಬಲ್ಲೆನೆ?

ಜೇಲಿನಲ್ಲಿ ಬಹುಶಃ ಮಾನವತೆ ಅನ್ನುವದೇ ಇರಲಿಕ್ಕಿಲ್ಲವೆಂದು ಅದೆಷ್ಟೋ ಸಲ ಅಜಯನಲ್ಲಿ ವಿಚಾರ ಮೂಡಿ ಬರುತ್ತದೆ.

ಜೇಲು ಒಂದು ಕೊಳೆತ ಹಣ್ಣಿನ ಬುಟ್ಟಿ. ಇಲ್ಲಿನ ನಿಯಮಗಳೆಲ್ಲ ಮಾನವತೆಯನ್ನು ಅಳಿಸಲು ನೆರವಾಗುತ್ತಿವೆ. ಆದರೂ ಒಮ್ಮೊಮ್ಮೆ ಕಾವಲುಗಾರನಲ್ಲಿಯೂ ಮಾನವತೆ ಎದ್ದು ಕಾಣುತ್ತದೆ. ಮಾನವತೆಯನ್ನು ನೆನೆದಾಗಲೆಲ್ಲ ಅಜಯನಿಗೆ ರಂಜಾನ್‌ನ ನೆನಪು ಬರುತ್ತದೆ.

ರಂಜಾನ್......

ಹಕ್ಕಿಗಳ ಚಿಲಿಪಿಲಿ ಧ್ವನಿಗಳ ಜತೆಯಲ್ಲಿಯೇ 'ಅಲ್ಲಾ ಹೋ ಅಕ್ಬರ್' ಎಂದು ರಂಜಾನ್ ಖೈದಿಗಳ ಕೋಣೆಗಳ ಮುಂದೆ ಹಾದು ಹೋಗುವಾಗ ಹೇಳುವ ಘೋಷಣೆ ಕೇಳಿಸುತ್ತದೆ. ಅಜಯ ಜೇಲು ಸೇರಿದಾಗಿನಿಂದ ಅನುಕಂಪದ ಮಾತು ಬಂದುದು ಅವನೊಬ್ಬನಿಂದಲೇ. ಜೇಲಿನ ಒಳಗಡೆಯ— ಹೊರಗಡೆಯ ಏನಾದರೂ ಬಿಸಿ ಸುದ್ದಿ ಅವನಿಂದ ಬರಬೇಕು.

ಸ್ಥಿತ ಪ್ರಜ್ಞೆಗೆ ಇನ್ನೊಂದು ಹೆಸರು ರಂಜಾನ್ ಎಂದಿರಬೇಕು. 'ಕಳೆದ ಇಪ್ಪತ್ತು ವರುಷಗಳಿಂದ ಅವನು ಆ ಜೇಲಿನಲ್ಲಿ ದುಡಿಯುತ್ತಿದ್ದಾನೆ.

ನೂರಾರು ಮಂದಿಯ ಫಾಶಿ ಶಿಕ್ಷೆಯನ್ನು ಅವನು ಕಣ್ಣಾರೆ ನೋಡಿದ್ದಾನೆ. ಫಾಶಿ ಕಂಬಗಳ ಕಡೆಗೆ ಮರಣ ದಂಡನೆಗೆ ಗುರಿಯಾದ ಖೈದಿಯನ್ನು ಒಯ್ದು, ಅವನ ಕೊನೆಯ ನಿಮಿಷಗಳನ್ನು ಕಂಡಿದ್ದಾನೆ.

ಖೈದಿಯ ಕೋಣೆಗೆ ಬಂದು ಅವನನ್ನು ಎಚ್ಚರಿಸಿ, ನಿತ್ಯ ಕ್ರಿಯೆ ಪೂರೈಸಿದ ಬಳಿಕ, ಕರಿಯ ಬಣ್ಣದ ಬಟ್ಟೆ ತೊಡಿಸಿ, ನೇಣುಗಂಬದ ಬಳಿಗೆ ಒಯ್ಯುವುದು. ಅಲ್ಲಿ ಕಂಬದ ಪಕ್ಕದಲ್ಲಿ, ಉರುಳಿನ ಕೆಳಗೆ ನಿಲ್ಲಿಸಿ, ಕೊನೆಯ ಮಾತುಗಳನ್ನಾಡಲು ಅವಕಾಶ ನೀಡುವುದು. ಕರಿಯ ಟೊಪ್ಪಿಗೆಯಿಂದ ಖೈದಿಯ ಮುಖವನ್ನು ಮುಚ್ಚಿ, ಉರುಳನ್ನು ಕತ್ತಿಗೆ ಹೊಂದಿಸುವುದು. ಎಲ್ಲವೂ ಸಿದ್ಧವಾಯಿತೆಂದರೆ, ಖೈದಿಯ ಕಾಲಡಿಯಲ್ಲಿನ ಹಲಿಗೆಯನ್ನು ಸರಿಸಿ ಬಿಡುವುದು.

ನಿಮಿಷಾರ್ಧದಲ್ಲಿ ಖೈದಿಯ ಪ್ರಾಣವನ್ನು ಉರುಳು ಬಿಗಿದು ಎಸೆಯುತ್ತದೆ.

ಇಷ್ಟು ರಂಜಾನ್‌ನ ಕೆಲಸ.

ಅದನ್ನು ಆತ ನಿರ್ವಿಕಲ್ಪ ಭಾವನೆಯಿಂದ, ಸ್ಥಿತ ಪ್ರಜ್ಞನಂತೆ ಕಳೆದ ಇಪ್ಪತ್ತು ವರ್ಷಗಳಿಂದಲೂ ನಡೆಸಿಕೊಂಡು ಬಂದಿದ್ದಾನೆ.

ಸಾವನ್ನು ಯಾರು ಹೇಗೆ ಅಪ್ಪುತ್ತಾರೆ ಎಂಬುದನ್ನು ಸ್ವಾರಸ್ಯವಾಗಿ ಆತ ವಿವರಿಸಬಲ್ಲ. ಧೈರ್ಯದಿಂದ ನೇಣುಗಂಬದ ನೆರವು ಪಡೆಯುವವರ ಬಗೆಗೆ ಅವನಿಗೆ ತುಂಬ ಅಭಿಮಾನವಿದೆ.

ಆದರೆ, ಧೈರ್ಯಶಾಲಿಯಾಗಿ ಮರಣವೇ ಮಹಾನವಮಿ ಎಂದು ತಿಳಿದವರೂ ಆ ಕಂಬ, ಆ ಉರುಳನ್ನು ಕಂಡಾಗ ಅಳುಕುತ್ತಾರೆ.

ರಂಜಾನ್ ಅದನ್ನೆಲ್ಲ ನೋಡಿದ್ದಾನೆ. ಆದರೆ, ಜೇಲಿನ ಇತರ ಖೈದಿಗಳಿಗೆ ಆ ಕೊನೆಯ ಯಾತ್ರೆಯನ್ನು ನೋಡುವ ಅವಕಾಶವಿಲ್ಲ. ಅಂಥ ಸಂದರ್ಭದಲ್ಲಿ ಎಲ್ಲರೂ ತಮ್ಮ ಗೂಡುಗಳೊಳಗೆ ಸೇರಬೇಕು. ಅವರನ್ನು ಅಲ್ಲಿ ಭದ್ರಪಡಿಸಲಾಗುವುದು.

ಅವರಿಗೆ ಕೇಳಿಬರುವ ಸದ್ದು ಆ ಹಲಗೆ ಜರಗಿದಾಗ ಆಗಬಹುದಾದ ಸಪ್ಪಳ.

ರಂಜಾನ್ ಪಿಸುಮಾತಿನಲ್ಲಿ ಏನೋ ಒದಗಬಹುದಾದ ಅನಾಹುತದ ಮುನ್ಸೂಚನೆ ಕೊಟ್ಟಿದ್ದ. ' ಏನೋ ಸಧ್ಯದಲ್ಲಿ ಆಗುವದರಲ್ಲಿದೆ. ಸ್ವಾತಂತ್ರ್ಯ ವೀರರು ಅದೆಷ್ಟು ಜನ ಪ್ರಾಣಾರ್ಪಣೆ ಮಾಡಬೇಕಾಗುವದೋ ಯಾರೂ ಅರಿಯರು.

ಹೋಷಿಯಾರ್......

ಮತ್ತೆ ಅದೇ ಕೂಗು. ದಿನ ನಿತ್ಯವೂ ರಾತ್ರೆಯ ಕಾಲ, ಸಂಜೆಯಿಂದ ಮುಂಜಾನೆಯವರೆಗೆ ಕೇಳಿಬರುವ ಎಚ್ಚರಿಕೆಯ ಘೋಷಣೆ. ಅಜಯ ರಾತ್ರಿ ಇಡೀ ' ಹೋಷಿಯಾರ್ ' ಆಗಿಯೇ ಕುಳಿತಿದ್ದಾನೆ. ಹಕ್ಕಿಗಳ ಇಂಚರ ಕೇಳಿಬರುತ್ತಿದೆ.

' ಅಲ್ಲಾ ಹೋ ಅಕ್ಬರ್ ' ರಂಜಾನನ ಕೂಗು. ಹೌದು ರಂಜಾನ ನಡೆದು ಬರುತ್ತಿದ್ದಾನೆ.



೨

ರಂಜಾನ್ ಬೆಳಗಿನ ಮುಂಜಾನೆಯಲ್ಲೇ ಈ ಜೀವಾವಧಿ ಶಿಕ್ಷೆ ಅನುಭವಿಸಿದ ಖೈದಿಗಳ ಕೋಣೆಯ ಹಾದಿಯಾಗಿ ನಡೆದ.

ನಿಧಾನವಾಗಿ, ಗಂಭೀರ ಹೆಜ್ಜೆ ಇರಿಸಿ ನಡೆಯುವ ಈ ಸ್ಥಿತಪ್ರಜ್ಞ ಅದೇಕೋ ಇಂದು ಅವಸರ ಅವಸರವಾಗಿ ನಡೆಯುವಂತೆ ಕೇಳಿಸಿತು.

ಅಭ್ಯಾಸ ಬಲದಿಂದ ಯಾವುದೋ ಕೆಲಸ ಮಾಡುತ್ತಿದ್ದವನು, ಏನೋ ನೆನಪಾಗಿ, ತಡವರಿಸಿ ತಡೆದಂತೆ ತೋರಿಬರುತ್ತಿತ್ತು.

ಅತ, ಮರಣ ದಂಡನೆಗೆ ಗುರಿಯಾದವರು ಸೆರೆಯಲ್ಲಿದ್ದ ನಂಬರ್ ೧೫ ನೇ ವಾರ್ಡ್‌ನ ಕಡೆಗೆ ಹೋದ. ಅಷ್ಟೇ ಅವಸರವಾಗಿ ಹಿಂತಿರುಗಿದ.

ಅವನನ್ನು ಬಲ್ಲ ರಾಜಕೀಯ ಖೈದಿಗಳಿಗೆ ಅವನ ತುರುತು ಗಾಬರಿ ಬಗೆಗೆ ನಗು ಬಂತು.

" ಅದೇಕೆ ಧಾವಿಸಿ ಹೋದವನು ಮರಳಿ ಬಂದೆ ರಂಜಾನ್ ? " ಎಂದು ಪ್ರಶ್ನಿಸಿದ ಅಜಯ.

ಕ್ರಾಂತಿಕಾರಿಗಳಲ್ಲೊಬ್ಬನಾಗಿ ಸೆರೆ ಸೇರಿದ ಅಜಯ ಮತ್ತು ಅವನ ಸಂಗಡಿಗರ ವಿಚಾರಣೆ ಇನ್ನೂ ನಡೆದೇ ಇತ್ತು. ಆಗಲೇ ಆತ ಈ ಜೇಲಿನ ಅತಿಥಿಯಾಗಿ ಎರಡು ತಿಂಗಳು ಸಂದಿದ್ದವು. ವಿಚಾರಣೆಯ ಹಂತದಲ್ಲಿರುವ ಖೈದಿಗಳಿಗಿರುವ ಸಾಮಾನ್ಯ ಸ್ವಾತಂತ್ರ್ಯ ಅವನಿಗಿತ್ತು. ಸಂಜೆಯ ವೇಳೆ, ತನ್ನ ಗೂಡಿನಿಂದ ಹೊರಗಡೆ ಬಂದ ಅಜಯ ತನ್ನ ಗೆಳೆಯರೊಡನೆ ಮಾತುಕತೆ ನಡೆಸುತ್ತಿದ್ದ.

" ಏನೋ ನೆನಪಾಯಿತು, ಹಾಗೇ ಧಾವಿಸಿದೆ."

" ಅರ್ಥವಾಯಿತು ಬಿಡು. ನಾಳೆ ಯಾರೋ ನಿನ್ನ ಆಶೀರ್ವಾದ ಪಡೆಯುತ್ತಾರೆ ! "

" ನನ್ನದೇನು ಆಶೀರ್ವಾದ ಭಾಯಿ..."

"ನೀನೇ ಕಪ್ಪುಟೋಪಿ ಹಾಕಿ ತಲೆಯ ಮೇಲೆ ಕೈಯಿಟ್ಟು ಕಾಣದ ಊರಿಗೆ ಕಳುಹಿಸುತ್ತೀಯಲ್ಲ ರಂಜಾನ್..."

ರಂಜಾನ್ ಈಗ ತಬ್ಬಿಬ್ಬಾದ. ಯಾರಿಗೂ ತಿಳಿಯದಂತಿರಿಸಿ ಗೂಢ ಬಯಲಾಯಿತೇ ಎಂಬ ಭೀತಿ ಮೂಡಿತು ಅವನಿಗೆ.

"ಛೆ ಅದೇನೂ ಇಲ್ಲ. ನಾಳೆ ಯಾರೋ ದೊಡ್ಡ ಆಫೀಸರ್ ಬರುತ್ತಾರೆ. ಬಿಳಿ ಜನ..." ಎಂದು ಗಡಬಡಿಸಿದ.

ಅಷ್ಟರಲ್ಲಿ ಬೂಟಿನ ಸದ್ದು ಕೇಳಿಸಿತು.

ಖೈದಿಗಳೊಂದಿಗೆ ಕಾವಲುಗಾರರಾಗಲೀ, ಪೋಲಿಸರಾಗಲೀ ಮಾತನಾಡುವದೇ ತಪ್ಪು. ಅದರಲ್ಲೂ ಸ್ನೇಹದಿಂದ ವರ್ತಿಸಿದುದು ಗೊತ್ತಾದರೆ, ಜೇಲು ನಿಯಮ ಮುರಿದ ಅಪರಾಧಕ್ಕೆ ಸೂಕ್ತ ಶಿಕ್ಷೆ ಅನುಭವಿಸಬೇಕಾಗುತ್ತದೆ.

ಅನೇಕ ವರ್ಷಗಳ ಅನುಭವ ಗಳಿಸಿದವನಿಗೂ ಶಿಕ್ಷೆ ತಪ್ಪಿದ್ದಲ್ಲ.

ಖೈದಿಗಳನ್ನು ಹೆದರಿಸಿ ಬೆದರಿಸಿ, ಒದೆಯುವುದೇ ಅಲ್ಲಿನ ಎಲ್ಲ ನೌಕರರ ಧರ್ಮ.

ರಂಜಾನ್ ಫಕ್ಕನೆ ಎಚ್ಚರಗೊಂಡು ಅಲ್ಲಿಂದ ಹೊರಟುಹೋದ.

ಯಾವುದೋ ಪುಸ್ತಕವನ್ನೋದುತ್ತ ಅಜಯ ತನ್ನ ಗೂಡಿನ ಬಾಗಿಲಲ್ಲಿ ಕುಳಿತುಕೊಂಡ.

ನಾಳೆ ಯಾವ ಅಧಿಕಾರಿಗಳು ಬರುತ್ತಾರೆ ? ಯಾಕೆ ?

ಕ್ರಾಂತಿಕಾರಿ ರಾಜಕೀಯ ನಾಯಕರ ಮರಣ ದಂಡನೆಯ ಸಂದರ್ಭದಲ್ಲಿ ಉನ್ನತ ಅಧಿಕಾರಿಗಳು ಕೆಲವೊಮ್ಮೆ ಹಾಜರಿರುವುದುಂಟು. ಅಂಥ ಮರಣ ದಂಡನೆಗೆ ಗುರಿಯಾದವರೂ ಈ ಜೇಲಿನಲ್ಲಿ ಕೆಲವರಿದ್ದಾರೆ.

ಮರಣ ದಂಡನೆ ನಡೆಯುವ ಹಿಂದಿನ ದಿನ ಸಂಜೆಗೇ ಅಂಥ ಖೈದಿಯ ಕೋಣೆಯಲ್ಲಿರುವ ಗಡಿಗೆ ಮತ್ತು ತಟ್ಟೆಯನ್ನು ರಂಜಾನ್ ಒಯ್ಯುತ್ತಾನೆ. ಖೈದಿ ಅವುಗಳಿಂದ ಪ್ರಾಣಕ್ಕೆ ಹಾನಿ ತಂದುಕೊಳ್ಳದಂತೆ ಅಧಿಕಾರಿಗಳು ಎಚ್ಚರಿಕೆ ವಹಿಸುತ್ತಾರೆ.

ಹೆಚ್ಚು ಊಟ ಮಾಡಬೇಡ. ಖಾಲಿ ಹೊಟ್ಟೆಯಲ್ಲಿದ್ದರೆ ಚೆನ್ನು. ರಾತ್ರಿ ಚೆನ್ನಾಗಿ ನಿದ್ದೆ ಮಾಡಿ ಅಥವಾ ದೇವರನ್ನು ಬೇಡಿಕೊಳ್ಳಿ—ಎಂದು

ಖೈದಿಗಳಿಗೆ ರಂಜಾನ್ ಉಪದೇಶ ನೀಡುತ್ತಾನೆ. ಅವರಲ್ಲಿ ಧೈರ್ಯ ತುಂಬುತ್ತಾನೆ.

ಆದರೆ ಇಂದು ಅದಾವುದೂ ನಡೆಯಲಿಲ್ಲ. ಮರಣ ದಂಡನೆಗೆ ಒಳಗಾದವರ ವಾರ್ಡ್‌ನಲ್ಲಿ ಯಾವುದೇ ಗಲಭೆ ಇಲ್ಲ. ಮಾತುಕತೆಗಳೂ ಇಲ್ಲ.

ನಿಜ! ರಂಜಾನ್ ಸುಳ್ಳು ಹೇಳಲಾರ.

ಜೇಲಿನಲ್ಲಿರುವ ಯಾರಿಗೂ ಸಂದೇಹ ಉಂಟಾಗಲಿಲ್ಲ. ಎಂದಿನಂತೆ ಎಲ್ಲರೂ ತಮ್ಮ ತಮ್ಮ ಯಾಂತ್ರಿಕ ಜೀವನದಲ್ಲಿ ನಿರತರಾದರು.

ಮತ್ತೆ ಅದೇ ರಾತ್ರಿ.

ಅದೇ ರೀತಿ ಕಾವಲುಗಾರರ ಸಂಚಾರ, ಎಚ್ಚರಿಕೆಯ ಕೂಗು, ಗಂಟೆಯ ಧ್ವನಿ...ನೀರವ...ನಿಶ್ಶಬ್ದ.

ಮುಂಜಾನೆ...ಬೇಗನೆ ಬೆಳಗಾಯಿತು.

ಯಾರೋ ಅಧಿಕಾರಿಗಳು ಬರುತ್ತಾರೆ ಎಂಬ ಸುದ್ದಿ ಮಾತ್ರ ಎಲ್ಲೆಡೆಗೂ ಹರಡಿತ್ತು. ಜಾಡಮಾಲಿಗಳು ಹೆಚ್ಚು ಎಚ್ಚರಿಕೆಯಿಂದ ತಮ್ಮ ಕೆಲಸದಲ್ಲಿ ತೊಡಗಿದ್ದರು.

ರಂಜಾನ್ ಕೂಡಾ ಒಮ್ಮೆ ಅತ್ತ ಸುಳಿದು ಸುತ್ತಲೂ ನೋಡಿ ಹೊರಟುಹೋದ.

ಗೂಡುಗಳಿಂದ ಖೈದಿಗಳನ್ನು ಹೊರಗಡೆ ಬಿಡುಗಡೆ ಮಾಡುವುದು ಕೊಂಚ ತಡವಾಯಿತು. ಎಂದಿನಂತೆ ಹೊರಗಡೆ ಬಂದವರು, ಪ್ರಾರ್ಥವಿಧಿ ನೀರಿಸಿ, ತಮ್ಮ ಪಾಲಿನ ರೊಟ್ಟಿಗಾಗಿ ಸಾಲಾಗಿ ನಿಂತರು. ರೊಟ್ಟಿಯೂ ಬಂತು. ಅದನ್ನೆತ್ತಿಕೊಂಡು ತಮ್ಮ ತಮ್ಮ ಗೂಡುಗಳಿಗೆ ಹಿಂತಿರುಗಿದುದೂ ಆಯಿತು.

ಜೇಲಿನಲ್ಲಿ ಏನೋ ವಿಶೇಷ ಸಂಭ್ರಮ ಇದೆ ಎಂಬ ಕುತೂಹಲ ಮಾತ್ರ ಕೆರಳುತ್ತಿತ್ತು. ಆದರೆ ಯಾರೂ ಅತ್ತ ಬಂದಿಲ್ಲ.

ಮೇಲಧಿಕಾರಿಗಳು ಬಂದಾಗ ಅವರು ಅನೇಕ ವೇಳೆ ಜೇಲರ್‌ರ ಕೋಣೆಯೊಳಗೇ ಕುಳಿತು ಹಿಂತಿರುಗುವುದೂ ಇದೆ. ಅದಕ್ಕೂ ಮುನ್ನಡೆದರೆ, ಖೈದಿಗಳಿಂದ ದುಡಿಸಿ ನಿರ್ಮಿಸಲಾದ ಜೇಲಿನ ಹೂದೋಟ ನೋಡುತ್ತಾರೆ.

ಕೈಗಾರಿಕಾ ವಸ್ತುಗಳನ್ನು ಅವಲೋಕಿಸುತ್ತಾರೆ. ಜೇಲಿನ ಸುತ್ತ ದೃಷ್ಟಿ ಬೀರಿ, ಇದಿರಾದ ಖೈದಿಗಳಿಂದ ಗೌರವಯುತ ವಂದನೆ ಸ್ವೀಕರಿಸಿ ಹಿಂತೆರಳುತ್ತಾರೆ.

ಅಥವಾ ಗಲ್ಲು ಕಂಬವೇರುವ ಕ್ರಾಂತಿಕಾರಿಯನ್ನು ನೋಡಲು, ಅವನ ಅಂತಿಮ ಯಾತ್ರೆ ವೀಕ್ಷಿಸಲು ನಿಲ್ಲುತ್ತಾರೆ.

ಮುಂಜಾವ ಮುಗಿದು, ಮಧ್ಯಾಹ್ನವಾಯಿತು.

ಇಂದು ಯಾರೂ ನೇಣುಗಂಬವನ್ನು ಏರುವುದಿಲ್ಲವೆಂಬ ತೃಪ್ತಿ ರಾಜಕೀಯ ಖೈದಿಗಳಲ್ಲಿ ಮೂಡಿತು. ಆದರೂ ಅದೇಕೋ ಜೇಲಿನಲ್ಲಿ ಎಂದಿನ ಗುಜುಗುಜು ಸದ್ದಿಲ್ಲ. ಸಾಮಾನ್ಯ ಶಿಕ್ಷೆಯ, ಅಥವಾ ದೀರ್ಘಶಿಕ್ಷೆಯ ಸಾಮಾನ್ಯ ಖೈದಿಗಳು ಜೇಲಿನಲ್ಲಿ ಹೆಚ್ಚು ಸ್ವಾತಂತ್ರ್ಯದಿಂದ ಅಡ್ಡಾಡ ಬಹುದು. ಕಳ್ಳತನ, ಮೋಸ, ಅತ್ಯಾಚಾರ, ಕೊಲೆ ಮಾಡಿದವರಿಗೆ ಜೇಲಿನ ಗೋಡೆಯೊಳಗೆ ಅಂಥ ಕಟ್ಟುನಿಟ್ಟಿನ ಬಂಧನಗಳಿಲ್ಲ. ಅವರು ಜೇಲಿನೊಳಗಿನ ವಿವಿಧ ಕೆಲಸ ಕಾರ್ಯಗಳಿಗಾಗಿ, ಕಾವಲಿನವನ ನಾಯಕತ್ವದಲ್ಲಿ ಅತ್ತಿತ್ತ ಹೋಗುತ್ತಿರುತ್ತಾರೆ. ಇಂದು ಅಂಥ ಚಟುವಟಿಕೆಯೂ ಕೇಳಿಬರುತ್ತಿಲ್ಲ.

ದೇಶದ ಸ್ವಾತಂತ್ರ್ಯಕ್ಕಾಗಿ ಕ್ರಾಂತಿಯ ಕಿಡಿಯನ್ನು ಹಾರಿಸಿ ಸೆರೆ ಸೇರಿದವರು ನೂರಕ್ಕೂ ಹೆಚ್ಚು ಮಂದಿ ಈ ಸೆರೆಮನೆಯಲ್ಲಿದ್ದರು. ಹಲವರ ವಿಚಾರಣೆ ಮುಗಿದಿತ್ತು. ಶಿಕ್ಷೆಯನ್ನು ಅನುಭವಿಸುತ್ತಲೂ ಇದ್ದರು. ಇನ್ನು ಕೆಲವರ ವಿಚಾರಣೆ ಸಾಗಿತ್ತು. ಮತ್ತು ಕೆಲವರು ಇದೀಗ ತಾನೇ ಸೆರೆ ಸೇರಿದ್ದಾರೆ. ಅವರ ಮೇಲೆ ಮೊಕದ್ದಮೆ ಹೂಡಿರಲಿಲ್ಲ. ವಿಚಾರಣೆ ಆರಂಭವಾಗಿರಲಿಲ್ಲ.

ಭಾರತದ ಕ್ರಾಂತಿಕಾರಿ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿದೆ ಲಾಹೋರ್.

ಇಲ್ಲಿನ ಬೀದಿಬೀದಿಗಳೂ ಕ್ರಾಂತಿಯ ಕಿಡಿ ಕಂಡಿವೆ. ಕ್ರಾಂತಿಕಾರರ ಸಂಚಾರದಿಂದ ಪವಿತ್ರವಾಗಿದೆ. ಸ್ವಾತಂತ್ರ್ಯಪ್ರೇಮಿಗಳ ನೆತ್ತರು ಸಿಂಪಡಿಸ ಲಾಗಿದೆ.

ಇಂಥ ಗಂಡುಮೆಟ್ಟಿನ ನಗರದ ಜೇಲೂ ಇತಿಹಾಸದಲ್ಲಿ ಅಮರವಾದ ಸ್ಥಾನ ಗಳಿಸಿದೆ.

ಭಾರತ ಸ್ವಾತಂತ್ರ್ಯ ಸಂಗ್ರಾಮದ ಶತಮಾನದ ಆರಂಭಕ್ಕೆ ನಾಂದಿ ಇರಿಸಿದೆ.

ಮಧ್ಯಾಹ್ನದ ಬಿಸಿಲು. ಖೈದಿಗಳ ಕೋಣೆಯೊಳಗಂತೂ ಗಾಳಿ–ಬೆಳಕುಗಳೂ ಇಲ್ಲವಾಗಿ ಎಲ್ಲರ ಉಸಿರೂ ಬಿಗಿಹಿಡಿದಂತಾಗಿತ್ತು. ಇನ್ನೂ ಯಾವ ಪ್ರಮುಖನೂ ಅತ್ತ ಬಂದಿಲ್ಲ. ಪ್ರಾಣಿ ಸಂಗ್ರಹಾಲಯದ ಪ್ರಾಣಿಗಳ ಪರಿಚಯ ಮಾಡಿಸುವಂತೆ ಆತನಿಗೆ ಜೇಲಿನ ಅಧಿಕಾರಿಗಳು ಖೈದಿಗಳನ್ನು ತೋರಿಸಿ ವಿವರ ನೀಡಿಲ್ಲ.

ಜೇಲಿನ ನಿರ್ದಿಷ್ಟ ನಿಯಮಗಳಿಗೆ ಹೊಂದಿಕೊಂಡು, ಭವಿಷ್ಯದ ಬಗೆಗೆ ನಿರಾಶರಾದವರು ಹಾಗೇ ಮುದುರಿ ತೂಕಡಿಸಿದರು. ಆಶಾವಾದಿಗಳು ವಿಚಾರ ಮಗ್ನರಾಗಿ, ಕಣ್ಣು ಮುಚ್ಚಿ ಕುಳಿತು, ಭವಿಷ್ಯದ ಕನಸು ಕಾಣತೊಡಗಿದರು. ಉತ್ಸಾಹಿಗಳು ಮಧ್ಯಾಹ್ನದ ಬಿಸಿಲು ನೀಡಿದ ಬೆಳಕಿನ ಸದುಪಯೋಗ ಮಾಡಿಕೊಂಡು, ಜೇಲಿನ ಅಧಿಕಾರಿಗಳ ಬಲೆಯನ್ನು ಹಾದು ಬಂದ ಪುಸ್ತಕಗಳನ್ನು ಓದತೊಡಗಿದರು.

ಟಿಕ್...ಟಿಕ್...ಟಿಕ್...

ಗಡಿಯಾರ ನಿಮಿಷಗಳನ್ನು ಎಣಿಸುತ್ತಲೇ ಇತ್ತು. ಅದರ ಪೆಂಡುಲಮ್ – ಅತ್ತ ಇತ್ತ – ಸರಿದು ಉಯ್ಯಾಲೆಯಾಡುತ್ತಲಿತ್ತು.

ಸೂರ್ಯ ಮೇಲೇರಿ, ತನ್ನ ಅಧಿಕಾರದ ಪ್ರಭಾವ ಬೀರಿ ಇಳಿಯತೊಡಗಿದ್ದ. ಮೇಲೇರಿದಾಗ ಚಿಕ್ಕವನಿರಬೇಕು ಎಂಬ ಉಪದೇಶವನ್ನು ಮನ್ನಿಸಿದ ಅವನು ಈಗ ಇಳಿಯುತ್ತ ದೊಡ್ಡದಾಗಿ ಬೆಳೆಯುತ್ತಿದ್ದ.

ಬೂಟು ಕಾಲಿನ ಸದ್ದು ಕೇಳಿಸಿತು.

ತಮ್ಮ ಗೂಡುಗಳ ಬಾಗಿಲಿನ ಮರೆಯಿಂದ ಕ್ರಾಂತಿಕಾರರು ಹೊರಗಡೆ ಇಣಿಕಿದರು. ಕಾವಲಿನವರು ಅತ್ತಿತ್ತ ಚಲಿಸುವದು ತೋರಿತು.

ಜೇಲಿನ ಎಲ್ಲ ಖೈದಿಗಳನ್ನೂ ಅವರವರ ಕೋಣೆಗಳಲ್ಲಿ ಸೇರಿಸಿ, ಬಾಗಿಲು ಭದ್ರಪಡಿಸಲಾಯಿತು. ಆರು ಘಂಟೆಗಾಗಬೇಕಾದ ಈ ಕಾರ್ಯ, ಇಂದು ಬೇಗನೇ ನಡೆದಿದೆ. ಗಂಟೆ, ದಿನ, ವಾರ, ತಿಂಗಳುಗಳ ಪರಿವೆಯಾಗಲೀ ಎಣಿಕೆಯಾಗಲೀ ಇಲ್ಲದ ಖೈದಿಗಳಿಗೆ ಇದೇನೂ ಮಹತ್ವವೆನಿಸಲಿಲ್ಲ. ಆದರೆ, ವಿಚಾರಶೀಲರಾದ ರಾಜಕೀಯ ಬಂಧಿಗಳಲ್ಲಿ ಶಂಕೆ ಮೂಡಿಸದಿರಲಿಲ್ಲ.

ಇದಾವ ದಿನ......?

ನಿಜ ! ಮಾರ್ಚಿ ತಿಂಗಳ ೨೩ ನೇ ತಾರೀಖು, ೧೯೩೧.

೧೫ ನೇ ವಾರ್ಡ್‌ನಿಂದ ಯಾರೋ ಕೆಲವರು ನಡೆದು ಹೋದಂತೆ ಭಾಸವಾಯಿತು.

ಯಾರು ? ಏನು ? ಏಕೆ ?

ಬಾಗಿಲಿಗೆ ಅಂಟಿಸಿದ ತಗಡುಗಳ ಬಿರುಕಿನಿಂದ ಕಣ್ಣು ನೋಯುವವರೆಗೂ ಇಣಿಕಿದರು. ಏನೂ ಕಾಣಿಸಲಿಲ್ಲ.

ಸುತ್ತಲೂ ಮತ್ತೆ ಮೌನ...ಸ್ಮಶಾನ ಮೌನ...

ಎಲ್ಲಿಂದಲೋ ಏನೋ ಘೋಷಣೆ ಗಾಳಿಯಲ್ಲಿ ತೇಲಿ ಬಂದಂತಾಯಿತು. ಅದಿನ್ನೂ ಬಿರುಸಾಗಿ ಮತ್ತೆ ಹಾರಿಬಂತು...

" ಇಂಕ್ವಿಲಾಬ್...ಜಿಂದಾಬಾದ್ !"

" ವಂದೇ ಮಾತರಂ !"

ಘೋಷಣೆ ಬಲವಾಗಿ ಎಲ್ಲೆಲ್ಲೂ ಪ್ರತಿಧ್ವನಿಗೊಟ್ಟಿತು. ಹತ್ತಾರು ಬಾರಿ ಕೂಗಿದ ಘೋಷಣೆ ಜೇಲಿನ ಎಲ್ಲರ ಮೇಲೂ ಸಿಡಿಲೆರಗಿದಂತಾಯಿತು.

ಆಕಸ್ಮಿಕವಾದ ಈ ಘಟನೆಯಿಂದ ನಿಮಿಷಾರ್ಧ ತಲ್ಲಣಗೊಂಡ ಕ್ರಾಂತಿಕಾರಿಗಳು ಸಿಡಿದೆದ್ದ ಸಿಂಹಗಳಂತೆ ಮರುತ್ತರ ನುಡಿದರು.

" ಇಂಕ್ವಿಲಾಬ್...ಜಿಂದಾಬಾದ್ !"

ರಾಜಕೀಯ ಖೈದಿಗಳ ಪ್ರತಿಯೊಂದು ಕೋಣೆಯಿಂದಲೂ ಘೋಷಣೆ ಪ್ರತಿಧ್ವನಿಗೊಟ್ಟಿತು.

ತಮ್ಮ ಕೋಣೆಯ ಬಾಗಿಲು ಬಡಿದರು. ಗೋಡೆಗೆ ಅಪ್ಪಳಿಸಿದರು. ಗಂಟಲು ಬಿರಿವಂತೆ ಘೋಷಣೆ ಮಾಡಿದರು. ಕೂಗಿದರು, ಕಿರಿಚಿದರು, ನೆಲವನ್ನೆಲ್ಲ ಒದ್ದರು. ಕುಣಿದು ಕುಪ್ಪಳಿಸಿ ಕಣ್ಣೀರಿಟ್ಟು ಅಳಲಾರಂಭಿಸಿದರು.

ಕ್ರಾಂತಿಯು ಚಿರಾಯುವಾಗಲಿ ಎಂಬ ಘೋಷಣೆಗಳು, ಅವುಗಳನ್ನು ಕೊನೆಗಾಣಿಸುವ ಚಿಹ್ನೆಯಂತೆ ನೇಣುಗಂಬದ ಅಡಿಯಲ್ಲಿನ ಹಲಗೆ ಜಾರಿದ ಸದ್ದು ಅಳಿಯಿತು. ಕ್ರಾಂತಿಕಾರಿಗಳ ಕೋಣೆಯೊಳಗಿನ ಬಿರುಗಾಳಿ, ಬರಸಿಡಿಲು ನಿಂತು ಈಗ ಅಶ್ರುಧಾರೆಯ ಮಳೆ ಹೊಯ್ಯುತ್ತಿತ್ತು. ಬ್ರಿಟಿಷ್ ಸಾಮ್ರಾಜ್ಯ ಶಾಹಿಯನ್ನು ಉರುಳಿಸಲು, ರಕ್ತತರ್ಪಣ ನೀಡಿದ ವೀರಪುಂಗವರು, ನರ

ಕೇಸರಿಗಳು ಕೂಡಾ ತಮ್ಮ ಬಂಧುಗಳ ಅಗಲುವಿಕೆಗಾಗಿ ಮಕ್ಕಳಂತೆ ಮರುಗಿದರು.

ಭಾರತದ ವೀರಶ್ರೀ ಮೈವೆತ್ತು ಬಂದಂತಿದ್ದ ಮೂವರು...

ಲಾಹೋರ್ ಸೆರೆಮನೆಯಲ್ಲಿ...

ಸಂಜೆಯ ಸೂರ್ಯ ಇಳಿಯುತ್ತಿದ್ದಂತೆ, ಅಂಧಕಾರ ಧರೆಯೆಡೆಗೆ ಧಾವಿಸುತ್ತಿದ್ದಂತೆ, ಹಿಂಸಾತ್ಮಕ ಕ್ರಾಂತಿಗೇ ಮೋಡ ಮುಸುಕಿದಂತೆ, ಮೂವರು ನೇಣುಗಂಬವನ್ನೇರಿ ನಿಂತರು. ಈ ಭಾರತದ ಸ್ವಾತಂತ್ರ್ಯ ಸಾಧನೆಗಾಗಿ, ಭಾರತದ ಭವಿತವ್ಯದ ಕೋಟಿ ಕೋಟಿ ಜನತೆ ಸ್ವತಂತ್ರರಾಗಲೆಂದು, ತಮ್ಮನ್ನು ತಾವೇ ಮಾತೆಯ ಪದತಲದಲ್ಲಿ ಬಲಿಗೊಟ್ಟರು.

ಭಗತ್‌ಸಿಂಗ್...

ಶಿವರಾಮ ರಾಜಗುರು...

ಶುಕದೇವ್...

ತಮ್ಮನ್ನು ತನ್ನ ಮಡಿಲಲ್ಲಿರಿಸಿದ ಜೇಲಿನ ಕೋಣೆಗೆ ವಂದಿಸಿ ಆ ಮೂವರೂ ಗಾರ್ಡ್ ರಂಜಾನ್ ಮತ್ತಿತರ ಹತ್ತಾರು ಮಂದಿ ಪೋಲಿಸರ ಜತೆಗೆ ನೇಣುಗಂಬವಿದ್ದಲ್ಲಿಗೆ, ತಲೆ ಎತ್ತಿ ಗಂಭೀರವಾಗಿ ನಡೆದರು.

ಅಲ್ಲಿಯ ನೆಲದ ಮಣ್ಣನ್ನೆತ್ತಿ ಕಣ್ಣಿಗೆ ಒತ್ತಿಕೊಂಡರು. ಬಾಗಿ ಭಾರತ ಮಾತೆಯನು – ಮಣ್ಣಿನ ನೆಲವನ್ನು ಮುತ್ತಿಟ್ಟರು.

ಕೊನೆಯ ಬಯಕೆ...?

'ಭಾರತ ಸ್ವತಂತ್ರವಾಗಲಿ...ಕ್ರಾಂತಿ ಚಿರಾಯುವಾಗಲಿ...'

ನೇಣುಗಂಬ ಅವರನ್ನು ಸ್ವಾಗತಿಸುತ್ತಿತ್ತು. ಅದಕ್ಕೆ ನೇತುಕೊಂಡ ಉರುಳು, ಗಾಳಿಗೆ ತೂಗಾಡುತ್ತ, ಆವರನ್ನು ಬನ್ನಿರೆಂದು ಸ್ವಾಗತಿಸುತ್ತಿತ್ತು.

ರಂಜಾನ್ ಕರಿಯ ಉಡುಗೆ ಧರಿಸಿದ ಅವರೆಡೆಗೆ ನಡೆದ. ಮುಖವನ್ನು ಮುಚ್ಚಲೆಂದು ಕರಿಯ ಟೊಪ್ಪಿಗೆಯನ್ನು ಅವರಿಗೆ ನೀಡಿದ.

ಕೊನೆಯ ಉಸಿರಿರುವವರೆಗೂ ಈ ಭಾರತದ ನೆಲವನ್ನು ಕಾಣಬಯಸಿದ ಅವರು ಟೊಪ್ಪಿಗೆಯನ್ನು ಸ್ವೀಕರಿಸಲಿಲ್ಲ.

ತಾವಾಗಿಯೇ ನೇಣುಗಂಬದ ಕಡೆಗೆ ನಡೆದರು.

ಒಮ್ಮೆ ಸುತ್ತಲೂ ನೋಡಿದರು.

ಇಳಿಯುತ್ತಿರುವ ಸೂರ್ಯದೇವನಿಗೆ, ತಾಯ್ನೆಲಕ್ಕೆ ವಂದಿಸಿದರು.

ಸೂರ್ಯನೇ ಮುಳುಗದ ಬ್ರಿಟಿಷ್ ಸಾಮ್ರಾಜ್ಯದ ಸೂರ್ಯ ಅಸ್ತಂಗತನಾಗುವ ಸೂಚನೆಯನ್ನು ಮುಳುಗುವ ಸೂರ್ಯನಲ್ಲಿ ಕಂಡು ಅವರು ಮುಗುಳುನಗೆ ನಕ್ಕರು.

ತಮ್ಮನ್ನು ಬೀಳ್ಕೊಡಲು ನಿಂತ ನೂರಾರು ಪೋಲಿಸರು, ಜೇಲಿನ ಉನ್ನತಾಧಿಕಾರಿಗಳ ಕಡೆಗೆ ದೃಷ್ಟಿ ಬೀರಿದರು.

"ಇಂಕ್ವಿಲಾಬ್ ಜಿಂದಾಬಾದ್..."

ಈ ನರಕೇಸರಿಗಳು ಒಂದೇ ಸಮನೆ ಘೋಷಿಸಿದರು.

ಜೇಲಿನ ನಾಲ್ಕೂ ಮೂಲೆಗಳಲ್ಲಿ ಅವರ ಧ್ವನಿ ಪ್ರತಿಧ್ವನಿಗೊಟ್ಟು, ಅಲೆ ಅಲೆಯಾಗಿ ಹರಿದು ದೇಶದಾದ್ಯಂತ ಪಸರಿಸಿತು.

ತಮಗಾಗಿ ಕಾದಿದ್ದ ಉರುಳನ್ನು ತಾವೇ ಹಿಡಿದು, ತಮ್ಮ ಕೊರಳಿಗೆ ಹೊಂದಿಸಿಕೊಂಡರು. ಒಂದೊಂದು ಉರುಳು ಒಂದೊಂದು ಆಭರಣ. ಘೋಷಣೆ ಕೂಗುತ್ತಿದ್ದಂತೆ, ಕ್ರಾಂತಿಯು ಚಿರಾಯುವಾಗಲೆಂದು ಬಯಸುತ್ತಿದ್ದಂತೆ, ಕ್ರಾಂತಿವೀರರ ಕೊರಳನ್ನು ಉರುಳು ಬಿಗಿಯಿತು.

ಭಾರತದ ಕೋಟ್ಯಂತರ ಜನತೆಯ ದುಃಖ ಉಕ್ಕಿ ಕೊರಳು ಬಿಗಿದು ಬಂತು.

ದೇಶದ ಭವಿತವ್ಯದಲ್ಲಿ ನಂಬುಗೆಯಿಟ್ಟು ಸಾವನ್ನೇರಿದ ಈ ವೀರರ ಕತೆ ದೇಶದ ಸ್ವಾತಂತ್ರ್ಯ ಹೋರಾಟದಲ್ಲಿನ ಒಂದು ರುದ್ರ ಅಧ್ಯಾಯವಾಯಿತು.

## ೩

"ಅಜಯ...

"ಏ...ಅಜಯ......

"ಎಲ್ಲಿ ಹೋದನೋ ಈ ಹುಡುಗ...ಬೀದಿಯಲ್ಲೆಲ್ಲ ಮಿಲಿಟರಿಯವರು ಓಡಾಡುತ್ತಿದ್ದಾರೆ..."

ಬೇಣೆತಾಯಿ ಸುತ್ತಲೂ ಇಣಿಕಿ ನೋಡಿದರು. ಎಲ್ಲೂ ಹುಡುಗ ಕಣ್ಣಿಗೆ ಬೀಳಲಿಲ್ಲ.

ಮಿಲಿಟರಿಯವರು, ಪೋಲಿಸರು ಆ ಗಲ್ಲಿಯಲ್ಲೂ ಸುತ್ತಾಡುತ್ತಿದ್ದರು. ಬೂಟುಗಳ ಸದ್ದು ಕೇಳಿ ಅಡುಗೆ ಮನೆಯಲ್ಲಿದ್ದ ಬೇಣೆತಾಯಿ ಹೊರಗೆ ಓಡಿ ಬಂದಳು; ಅಲ್ಲೇ ಅಂಗಳದಲ್ಲಿ ಮಗ ಆಟವಾಡುತ್ತಿರಬಹುದೆಂದು ಆಕೆ ಎಣಿಸಿದ್ದಳು.

ಅವಳ ಕರೆಗೆ ಉತ್ತರ ಬರಲಿಲ್ಲ.

ಬದಲಾಗಿ, ಎಲ್ಲೋ ದೂರದಲ್ಲಿ ಮದ್ದುಗುಂಡುಗಳು ಹಾರಿದ ಸದ್ದು ಕೇಳಿಸಿತು.

ಹತ್ತಿರದಲ್ಲೇ ಎಲ್ಲೋ, ಕ್ರಾಂತಿಗೆ ಜಯವಾಗಲಿ ಎಂಬ ಘೋಷಣೆಯೂ ಕೇಳಿಬಂತು.

"ಛೆ ! ಈ ಹುಡುಗ ಎಲ್ಲಿಗೆ ಹೋದ ? ಊರೆಲ್ಲ ಗದ್ದಲ......"

ಎಂದುಕೊಂಡು ಏನೋ ನೆನಪಾಗಿ ಬೇಣೆತಾಯಿ ಅಡುಗೆ ಮನೆಗೆ ಓಡಿದಳು. ಒಲೆಯ ಮೇಲಿದ್ದ ಹಾಲನ್ನು ಕೆಳಗಿರಿಸಿ, ಮತ್ತೆ ಹೊರಗಡೆಗೆ ಬಂದಳು.

ಭೀತಿ, ಕಳವಳಗಳಿಂದ ಅವಳ ಎದೆ ಬಿರುಸಾಗಿ ಹೊಡೆದುಕೊಳ್ಳಲಾರಂಭಿಸಿತು.

ಮತ್ತೊಂದಷ್ಟು ಮಿಲಿಟರಿಯವರು ಆ ದಾರಿಯಾಗಿ ಕವಾಯಿತು ಮಾಡುತ್ತ ನಡೆದು ಬಂದರು.

ರಾಜ ಬೀದಿಯನ್ನು ಬಿಟ್ಟು ಅದೇಕೆ ಈ ಗಲ್ಲಿಗಳಲ್ಲಿ ಇವರು ಸಂಚರಿಸುತ್ತಾರೋ ಎನಿಸಿತು, ಅವಳಿಗೆ.

ಪಕ್ಕದ ಮನೆಯವರಾರೋ ಬಾಗಿಲು ಭದ್ರಪಡಿಸಿದರು. ಕಿಟಿಕಿಯ ಬಾಗಿಲುಗಳೂ ಮುಚ್ಚಿಕೊಂಡವು. ತನಗರಿಯದಂತೆ ಬೇಣಿಯ ಕೈಗಳೂ ಮನೆಯ ಬಾಗಿಲನ್ನು ಮುಚ್ಚಿ ಅಗಳಿ ಹಾಕಿದವು. ಅವಳು ಕಿಟಿಕಿಯ ಬಳಿ ನಿಂತು, ರಸ್ತೆಯ ಕಡೆಗೆ ಇಣಿಕಿದಳು.

ಮೂರು ನಾಲ್ಕು ಗಾಡಿಗಳು ಆ ಪೋಲಿಸರ ಮಧ್ಯದಲ್ಲಿ ಕಾಣಸಿಕ್ಕಿದವು. ಅವುಗಳಲ್ಲಿ ಯಾರು ಕುಳಿತಿದ್ದಾರೋ...ಎಂದು ಕಣ್ಣರಳಿಸಿ ದಿಟ್ಟಿಸಿದಳು ಬೇಣಿತಾಯಿ.

ಯಾರೋ ಮಲಗಿದ್ದಾರೆ...

ಒಬ್ಬರೇ ಅಲ್ಲ, ಹತ್ತಾರು ಮಂದಿ...

ನೆತ್ತರು ಅವರ ಮೈಮೇಲಿನ ಬಟ್ಟೆಗಳನ್ನು ತೋಯಿಸಿದೆ...

ಅವಳ ಮನದಲ್ಲಿ ಭೀತಿ ಮೂಡಿ, ಆ ದೃಶ್ಯವನ್ನು ನೋಡಲಾರದೆ ಆಕೆ ಕಣ್ಣು ಮುಚ್ಚಿದಳು. ನಿಂತಲ್ಲಿಂದ ಕುಸಿದು ಬೀಳುವಂತಾಯಿತು. ಕಿಟಿಕಿಯ ಸರಳನ್ನು ಆಧರಿಸಿ ಹಿಡಿದು ನಿಂತು ನೋಡಿದಳು.

ಆ ಗಾಡಿಗಳ ತುಂಬ ಗಾಯಗೊಂಡವರನ್ನು ತುಂಬಲಾಗಿತ್ತು.

ಒಬ್ಬರ ಮೇಲೊಬ್ಬರನ್ನು ಒಟ್ಟಲಾಗಿದೆ......ನಿಜ ! ಮೃತ ದೇಹಗಳ ರಾಶಿ...

ನಾಲ್ಕು ಗಾಡಿಗಳ ತುಂಬ ಹೆಣಗಳು...

ಕಣ್ಣುಕತ್ತಲೆ ಬಂದಂತಾಗಿ ಬೇಣಿಗೆ ತಲೆ ತಿರುಗಿತು. ಆಕೆ ಕುಸಿದು ಬಿದ್ದಳು......

"ಅಜಯಾ......" ಎಂಬ ಕೂಗು ಮತ್ತೊಮ್ಮೆ ಅವಳ ಬಾಯಿಂದ ಹೊರಟಿತು.

ಅದೆಷ್ಟು ಹೊತ್ತು ಆಕೆ ಹಾಗೆಯೇ ಒರಗಿದ್ದಳೋ ತಿಳಿಯದು.

ಎಚ್ಚರವಾದಾಗ ಅದಾರೋ ಬಾಗಿಲನ್ನು ಬಲವಾಗಿ ಬಡಿಯುವ ಸದ್ದು ಕೇಳಿಸಿತು.

"ಮಾ...ನಾನು...ಅಜಯ..."

ಜೇಣಿತಾಯಿ ಫಕ್ಕನೆ ಎಚ್ಚರಗೊಂಡು, ಕಣ್ಣುಜ್ಜಿಕೊಳ್ಳುತ್ತ ಬಾಗಿಲ ಬಳಿ ಬಂದಳು.

"ಎಲ್ಲಿ ಹೋಗಿದ್ದೆಯೋ ಅಜಯ ? ಹಾಗೆಲ್ಲ ಹೋಗಬಾರದೆಂದು ಹೇಳಲಿಲ್ಲವೇ ?"

"ಹ್ಞೂ...ಅಮ್ಮ...ಇಲ್ಲೇ ಆಟವಾಡುತ್ತ ಕುಳಿತಿದ್ದೆ..."

"ನಾನು ಕೂಗಿದುದೂ ಕೇಳಿಸಿಲ್ಲವೇನು ?"

"ಅಗ ಕಿಶೋರ್ ಬಂದ. ಬಾ ಹೋಗೋಣ...ತುಂಬ ತಮಾಷೆ ತೋರಿಸುತ್ತೇನೆ ಎಂದ. ನಾನು ಅವನೊಂದಿಗೆ ಹೋದೆ...ಅಮ್ಮಾ...ಅದೆಂತಹ ತಮಾಷೆ ಅಂತೀಯ..."

"ಸಾಕು ನಿನ್ನ ತಮಾಷೆ...ಬಾ ಕೊಂಚ ಹಾಲು ಕುಡಿ".

ಇನ್ನೂ ತಾನು ಕಂಡ ಭೀಕರ ದೃಶ್ಯದ ಘಾತದಿಂದ ದೂರವಾಗದೆ ಜಡ ಪಡಿಸುತ್ತಿದ್ದ ಜೇಣಿತಾಯಿ ಅದನ್ನೆಲ್ಲ ಮರೆಯಲೆಂದು ಮಾತನಾಡಿದಳು.

ಅಜಯ ತನ್ನ ಉತ್ಸಾಹದ ಭರದಲ್ಲಿ ನಡೆದ ಕತೆಯನ್ನು ಹೇಳುತ್ತಲೇ ಇದ್ದ.

ಉದ್ವೇಗದಿಂದ ಏದುಸಿರು ಬಿಡುತ್ತ ಮಾತನಾಡುತ್ತಿದ್ದ ಅಜಯ ಅಡುಗೆ ಮನೆಗೆ ಓಡಿ, ಬಿಂದಿಗೆಯಿಂದ ನೀರನ್ನೆತ್ತಿ ಗಟಗಟನೆ ಕುಡಿದು, ತನ್ನ ಅಂಗಿಯಿಂದಲೇ ಬಾಯಿ ಒರಸಿಕೊಂಡ. ಅಂಗಿಯ ಕೈಯಿಂದ ಹಣೆಯಲ್ಲಿ ಹರಿಯುತ್ತಿದ್ದ ಬೆವರನ್ನು ಒರಸಿದ.

"ಈಗ ನಾಲ್ಕಾರು ದಿನಗಳಿಂದಲೂ ಊರಲ್ಲೆಲ್ಲ ಗಲಭೆ, ಗೊಂದಲ. ನೀನೆಲ್ಲಿ ಅತ್ತ ಹೋದೆಯೋ ಎಂದು ನನ್ನ ಜೀವ ಹೊಡೆದುಕೊಳ್ಳುತ್ತಿತ್ತು," ಎಂದಳು ಬೇಣಿತಾಯಿ.

"ನಾನೂ ಹೋಗಿದ್ದೆ ಅಮ್ಮಾ. ಕಿಶೋರ್‌ನೂ ನಾನೂ ಹೋಗಿದ್ದೆವು. ದೀಪಾವಳಿಯಲ್ಲಿ ಮದ್ದು ಹಾರಿಸಿದಂತೆ ಪೋಲಿಸರು ಗುಂಡು ಹಾರಿಸಿದರು..."

"ದೇವರು ದೊಡ್ಡವನು. ಹೇಗೊ ಬದುಕಿ ಬಂದೆಯಲ್ಲ. ಇನ್ನೆಲ್ಲಾದರೂ ಹೊರಗೆ ಹೋದರೆ ಎಚ್ಚರ!"

ತಾಯಿಯ ಮಾತಿನ ಕಡೆಗೆ ಲಕ್ಷ್ಯವಿಲ್ಲದೆ ಅಜಯ ಕಥೆ ಹೇಳುತ್ತಿದ್ದ.

"ಮೊನ್ನೆ ಕಿಚ್ಲು ಸಾಹೇಬರನ್ನು ಪೋಲಿಸರು ಹಿಡಿದರಲ್ಲಮ್ಮ ? ಅದನ್ನು ವಿರೋಧಿಸಲು ಜನ ಸಭೆ ಸೇರಿದ್ದರು. ಸಾವಿರಾರು ಜನ...ಎಲ್ಲಿ ನೋಡಿದರೂ ಜನರ ಗುಂಪು...ಪೇಟೆಯಲ್ಲಿ ಅಂಗಡಿಗಳೆಲ್ಲ ಮುಚ್ಚಿವೆ...ಗಾಡಿಗಳೂ ಇಲ್ಲ."

"ಹ್ಞೂ...ಬೆಳಿಗ್ಗೆ ಜಿಲ್ಲಾ ಸಾಹೇಬರ ಕಚೇರಿ ಮುಂದೆ ಗುಂಡು ಹಾರಿಸಿದರಂತೆ..."

"ಹ್ಞೂ...ಕಿಚ್ಲು ಸಾಹೇಬರನ್ನು ಸತ್ಯಪಾಲರನ್ನು ಬಿಡಿ ಅಂತ ಜನ ಕೇಳಿಕೊಂಡರಂತೆ, ಪೋಲಿಸರು ಗುಂಡು ಹಾರಿಸಿದರಂತೆ. ಕೂಡಲೇ ಪೇಟೆಯಲ್ಲೆಲ್ಲ ಗದ್ದಲವಾಯಿತು. ಅಂಗಡಿ ಮುಚ್ಚಿದರು. ಎರಡು ಮೂರು ಜನ ಬಿಳಿ ಸರ್ದಾರರನ್ನು ಕೊಂದು ಹಾಕಿದರಂತೆ..."

"ನಿನಗಿದೆಲ್ಲ ಯಾರು ಹೇಳಿದರು ? ಮೂರು ಚೋಟುದ್ದ ಇದ್ದೀಯ—ನಿನಗೆಲ್ಲ ಇದೇಕೆ ?"

"ಕಿಶೋರ್ ಹೇಳಿದನಮ್ಮ. ಅವನೂ ಏನೇನೋ ಘೋಷಣೆ ಮಾಡಿದ. ಈ ಬಿಳಿ ಹುಳುಗಳನ್ನೆಲ್ಲ ಕೊಂದು ಬಿಡುತ್ತೇನೆ ಅನ್ನುತ್ತಿದ್ದ..."

"ಹೌದು ಕೊಂದು ಬಿಡುತ್ತಾನೆ. ಆಗಲೇ ನೂರಾರು ಜನರನ್ನು ಪೋಲಿಸರು ಕೊಂದು ಹಾಕಿದ್ದಾರೆ. ಹುಚ್ಚು ಹುಡುಗ......"

"ನಾವಿಬ್ಬರೂ ಬಾದಶಾಹಿ ಮಸೀದಿ ಬಳಿ ಹೋದೆವು. ಅಲ್ಲಿ ಸಾವಿರಾರು ಜನ ಸೇರಿದ್ದರು. ಒಳಗೆ ಹೋಗಲು ಸಾಧ್ಯವೆ ಇಲ್ಲ. ಅಲ್ಲಿಂದ ಕಿಶೋರ್ ನನ್ನನ್ನು ಎಳೆದುಕೊಂಡು ಹೋದ. ಹೀರಾಮಂಡಿ ಬಳಿ ದೊಡ್ಡ ಮೆರವಣಿಗೆ ಬಂತಮ್ಮ. ಅದೇನಾಯಿತೋ ಗೊತ್ತಿಲ್ಲ. ಮದ್ದು ಗುಂಡಿನ ಸದ್ದು ಕೇಳಿಸಿತು. ಜನ ದಿಕ್ಕಾಪಾಲಾಗಿ ಓಡಿದರು. ಯಾರೋ ನನಗೆ ಢಿಕ್ಕಿ ಹೊಡೆದರು, ನಾನೂ ಬಿದ್ದು ಬಿಟ್ಟೆ. ಮತ್ಯಾರೋ ನನ್ನನ್ನು ಎಳೆದು ಎತ್ತಿ ಪಕ್ಕದ ಮನೆಯ ತೋಟದೊಳಗೆ ದೂಡಿದರು. ನಾನು ಗೋಡೆಯ ಮರೆಯಲ್ಲಿ ಅಡಗಿ ಕುಳಿತೆ."

"ಸದ್ಯ ಬದುಕಿ ಬಂದೆಯಲ್ಲ."

ಬೇಣಿತಾಯಿ ಹಾಲಿನ ಲೋಟವನ್ನು ಮಗನ ಮುಂದಿರಿಸಿದಳು. ಅದನ್ನು ಅವನು ತನ್ನ ಕಥೆಯಲ್ಲೇ ತಲ್ಲೀನನಾಗಿ ಕುಡಿದ. ಮಗ ಬದುಕಿ ಬಂದನೆಂದುಕೊಂಡು ತಾಯಿ ದೇವರನ್ನು ನೆನೆದಳು.

"ಗಲಾಟೆ ಎಲ್ಲ ಮುಗಿದೇ ಹೋಯಿತು. ನಾನು ಮೆಲ್ಲನೆ ಅಲ್ಲಿಂದೆದ್ದು, ಓಣಿಗಳಲ್ಲೇ ಹಾದು ಇತ್ತ ಬಂದೆ."

"ಅಂತೂ ಬಂದೆಯಲ್ಲ. ಇನ್ನು ಹೋದರೆ ಮನೆಗೇ ಬರಗೊಡುವುದಿಲ್ಲ; ನೋಡುತ್ತಿರು."

"ಯಾಕಮ್ಮ...ನೋಡಿದರೆ ಏನಾಯಿತು? ಆ ಪೋಲಿಸರು ನಮ್ಮ ಜನರನ್ನೆಲ್ಲ ಹೊಡೆದು ಹಾಕಿದ್ದಾರೆ. ಅವರನ್ನೂ ಹೊಡೆದು ಹಾಕಿಬಿಡಬೇಕು..."

"ಶ್ಯು...ಹಾಗೆನ್ನಬಾರದು."

ಯಾರೋ ಬಾಗಿಲು ತಟ್ಟಿದಂತಾಯಿತು, ಬೇಣಿತಾಯಿ ಹೊರಗೆ ಬಂದಳು.

"ಯಾಕೋ ಕಿಶೋರ್...ಹೇಳಬಾರದಿತ್ತೇ? ನನಗೆ ತಿಳಿಸಿ ಅಜಯನನ್ನು ಕರೆದೊಯ್ಯಬಾರದಿತ್ತೇ? ನನಗೆ ಗೊತ್ತಾಗಿದ್ದರೆ ಅವನನ್ನು ಹೋಗಗೊಡುತ್ತಿರಲಿಲ್ಲ. ಇನ್ನೆಲ್ಲೂ ಕರೆದೊಯ್ಯಬೇಡ. ತಿಳಿಯಿತೆ? ಸದ್ಯ—ದೇವರು ದೊಡ್ಡವನು" ಎಂದು ತಾಯ್ತನದ ಉದ್ವೇಗದಿಂದ ಬೇಣಿತಾಯಿ ಬಡಬಡಿಸಿದಳು.

"ಇಲ್ಲಮ್ಮ. ಅವನೇ ಬರುತ್ತೇನೆ ಎಂದು ಹಟ ಹಿಡಿದ."

"ಅವನಿಗೇನು ಗೊತ್ತು? ಇನ್ನೂ ಎಂಟು ವರುಷದ ಹುಡುಗ. ನೀನು ತಿಳಿದವ, ಬೆಳೆದವ."

"ಬಾ ಕಿಶೋರ್...ಒಳಗೆ ಬಾ..."

"ನೀನು ಬಂದಿದ್ದೀಯೋ ಇಲ್ಲವೋ ವಿಚಾರಿಸೋಣವೆಂದು ಬಂದೆ. ನಾನು ಹೋಗುತ್ತೇನೆ."

ಧೈರ್ಯ ತಂದುಕೊಂಡು ಮಾತನಾಡುತ್ತಿದ್ದರೂ, ಕಿಶೋರ್ ಭೀತಿಯಿಂದ ನಡುಗುವಂತಿತ್ತು. ಅವನ ಅಂಗಿ ಧೂಳಿನಿಂದ ತುಂಬಿತ್ತು. ಮುಖ ಬೆವರಿನಿಂದ ಒದ್ದೆಯಾಗಿತ್ತು.

"ಓಡೋಡಿ ಬಂದೆಯೇನೋ? ನಾನೂ ಓಡಿ ಬಂದೆ ಕಣೋ..."

"ಹ್ಞೂ...ಆ ಪೋಲಿಸರ ಕಣ್ಣು ತಪ್ಪಿಸಿ ಓಡಿ ಬರುವಲ್ಲಿ ಸುಸ್ತಾಯಿತು."

"ಬಾ...ಒಳಗಡೆ..."

ಅಜಯು ಅವನ ಕೈ ಹಿಡಿದು ಒಳಗೆ ಕರೆದು ಬಾಗಿಲು ಭದ್ರಪಡಿಸಿದ. ಅಡುಗೆ ಮನೆಗೆ ಓಡಿ, ಒಂದು ಲೋಟ ಹಾಲು ಹಿಡಿದುಕೊಂಡು ಬಂದ.

ಕಿಶೋರ್ ಬೆದರಿದ ಹುಲ್ಲೆಯಂತೆ ನಿಂತಿದ್ದ.

ಗೆಳೆಯರಲ್ಲೆಲ್ಲ ತುಂಬ ಧೈರ್ಯಶಾಲಿ, ತುಂಟ ಹುಡುಗ ಎಂದು ಹೆಸರು ಗಳಿಸಿದ್ದ ಕಿಶೋರ್. ಎಲ್ಲ ಬಾಲಕರಿಗೂ ಅವನು ಜೊತೆಯಲ್ಲಿದ್ದರೆ ಧೈರ್ಯ.

ಹಾಲು ತರುತ್ತಿದ್ದಂತೆ ಅಜಯನ ದೃಷ್ಟಿ ಕಿಶೋರನ ಪೈಜಾಮದ ಕಡೆ ಹರಿಯಿತು.

"ಅದೇನೋ ನೆತ್ತರು ಸೋರುವಂತಿದೆ. ನಿನ್ನ ಪೈಜಾಮ ಒದ್ದೆಯಾಗಿದೆ. ನೋಡು......ನೆಲದ ಮೇಲೂ ರಕ್ತ......"

—ಅಚ್ಚರಿಯಿಂದ ಅತ್ತ ನೋಡುತ್ತ ಪರಿಶೀಲಿಸಿ ಹೇಳಿದ ಅಜಯು. ಕಿಶೋರ್ ಹಾಲು ಕುಡಿಯುತ್ತಿದ್ದಂತೆ ಅಜಯು ಅವನ ಕಾಲುಗಳನ್ನು ನೋಡಿದ. ಅವನ ಬಲಕಾಲಿಗೆ ಗಾಯವಾಗಿ ರಕ್ತ ಸೋರುತ್ತಿತ್ತು.

"ಅಮ್ಮ......ಕಿಶೋರನಿಗೆ ಗಾಯವಾಗಿದೆ," ಎಂದು ಕೂಗಿದ ಅಜಯು. ಅವನೆಂದೂ ಅಷ್ಟೊಂದು ರಕ್ತ ನೋಡಿರಲಿಲ್ಲ. ಕಿಶೋರನ ಮೊಣಕಾಲಿನಲ್ಲಾದ ಗಾಯದಿಂದ ಇನ್ನೂ ರಕ್ತ ಸೋರುತ್ತಿತ್ತು. ಅದು ಅವನ ಪಾದವನ್ನು ಒದ್ದೆಯಾಗಿಸಿತ್ತು. ಪೈಜಾಮವೂ ನೆತ್ತರಿನಿಂದ ಒದ್ದೆಯಾಗಿತ್ತು.

"ಏನೋ ಕಾಲು ನೋಯುತ್ತದೆ ಅಂತ ಗೊತ್ತಾಯಿತು. ಏನೇ ಆಗಲಿ, ನಿನ್ನನ್ನು ನೋಡೋಣವೆಂದು ಒಂದೇ ಉಸಿರಿಗೆ ಓಡಿ ಬಂದೆ," ಎನ್ನುತ್ತ ಕಿಶೋರ್ ಈಗ ತನ್ನ ಗಾಯದ ಕಡೆಗೆ ನೋಡಿದ. ಅದನ್ನು ನೋಡುತ್ತಿದ್ದಂತೆ ಅವನ ಧೈರ್ಯ ಕುಸಿಯಿತು. ಅವನು ನೆಲದ ಮೇಲೆ ಕುಳಿತುಕೊಂಡ.

ಬೇಣಿತಾಯಿ ತಣ್ಣೀರನ್ನು ತಂದು, ಒದ್ದೆ ಬಟ್ಟೆಯಿಂದ ಅವನ ಗಾಯ ತೊಳೆದಳು. ಕಾಲಿನ ಮೇಲೆಲ್ಲ ಹರಿದು ಹೆಪ್ಪುಗಟ್ಟಿದ್ದ ನೆತ್ತರನ್ನು ಒರೆಸಿದಳು. ಗಾಯಕ್ಕೆ ಎಣ್ಣೆ ಸವರಿ, ಹತ್ತಿ ತುಂಡನ್ನು ಅದರ ಮೇಲಿರಿಸಿ, ಬಟ್ಟೆಯಿಂದ ಪಟ್ಟಿ ಕಟ್ಟಿದಳು.

ಕಿಶೋರನಿಗೆ ಈಗ ತಾನೇ ಆ ಗಾಯದ ಪರಿಣಾಮ ತಿಳಿಯಿತು. ರಕ್ತ ಹರಿದುದರ ಪರವೆಯಾಯಿತು. ಪೋಲಿಸರ ಕಣ್ಣು ತಪ್ಪಿಸಿ

ಅಜಯನ ಮನೆಗೆ ಓಡಿಬರುವುದೊಂದೇ ಗುರಿಯಾಗಿ, ಅವನಿಗೆ ಗಾಯದ ಅರಿವೇ ಇರಲಿಲ್ಲ.

ಅವನು ನೆಲದ ಮೇಲೆ ಒರಗಿದ. ಅಜಯ ಓಡಿ ಹೋಗಿ ದಿಂಬನ್ನು ತಂದು ಅವನ ತಲೆಯಡಿಗೆ ಇರಿಸಿದ.

"ಗುಂಡು ತಾಗಿತೇನೋ ? ಎಂಥ ಗಾಯವಾಗಿದೆ!" ಎಂದ ಅಜಯ.

ಅವನ ತಾಯಿಯೂ ತನ್ನ ಮಗ ಅಪಾಯದಿಂದ ಪಾರಾದುದಕ್ಕಾಗಿ ಮತ್ತೊಮ್ಮೆ ದೇವರನ್ನು ನೆನೆದಳು.

"ಏನೋ ಕಾಲಿಗೆ ಬಡಿದಂತಾಯಿತು. ನನಗೆ ಅದರ ಪರವೇ ಇರಲಿಲ್ಲ."

"ಅದು ಗುಂಡೇ ಇರಬೇಕು. ಕಾಲನ್ನು ತಗಲಿ ಹಾರಿ ಹೋಗಿದೆ. ಕಾಲಿನೊಳಗೇ ನೆಟ್ಟಿದ್ದರೆ ಕಾಲೇ ಹೋಗಿಬಿಡುತ್ತಿತ್ತು. ಬೇಡವೆಂದರೂ ಈಗಿನ ಹುಡುಗರು ನೀವು–ಕೇಳುತ್ತೀರಾ ? ನಿಮಗೆಲ್ಲ ಈ ಗೊಂದಲ ಏಕೆ ?"

"ಇಲ್ಲಮ್ಮಾ. ಅಂಗಡಿ ಬಾಗಿಲನ್ನೆಲ್ಲ ಮುಚ್ಚಿದ್ದು ನೋಡೋಣಾಂತ ಹೋದೆವು. ಅಷ್ಟರಲ್ಲಿ ಮೆರವಣಿಗೆ ಬಂತು."

"ಆಮೇಲೆ ಏನಾಯಿತೋ ಕಿಶೋರ್ ? ನನಗಂತೂ ಒಂದೂ ನೋಡಲು ಸಿಗಲೇ ಇಲ್ಲ. ಎಲ್ಲಿ ಹೋದರೂ ಜನರ ಗುಂಪು ಅಡ್ಡ ವಾಗಿತ್ತು. ಯಾರೋ ನನ್ನನ್ನೇ ಎತ್ತಿ ಪಕ್ಕದ ಹಿತ್ತಲ ಗೋಡೆ ಹಿಂದಕ್ಕೆ ಹಾಕಿಬಿಟ್ಟರು.

"ಮಿಲಿಟರಿಯವರೆಲ್ಲ ಕಾದು ನಿಂತಿದ್ದರು. ಮೆರವಣಿಗೆಯನ್ನು ತಡೆದು ಗುಂಡು ಹಾರಿಸಿದರು. ಲೆಕ್ಕವಿಲ್ಲದಷ್ಟು ಜನರು ಸತ್ತರು. ನೂರಾರು ಜನರಿಗೆ ಗಾಯಗಳಾದುವು. ಎಲ್ಲರೂ ದಿಕ್ಕಾಪಾಲಾಗಿ ಓಡಿದರು. ಚಿಕ್ಕ ಹುಡುಗರು ಈ ಓಡುವವರ ಕಾಲಡಿ ಸಿಕ್ಕಿ ಪುಡಿಯಾದರಂತೆ."

"ಏ ಅಜಯ......ಈಗ ಗೊತ್ತಾಯಿತೇ ಅಮ್ಮನ ಮಾತು ? ಇನ್ನೊಮ್ಮೆ ಹೋದರೆ ನಿನ್ನನ್ನೂ ಯಾರಾದರೂ ತುಳಿದು ಹಾಕುತ್ತಾರೆ..."

"ಜನ ಹೆದರಿ ಓಡುವುದನ್ನು ನೋಡಿ ನಮ್ಮ ಕುಶಿಗೆ ತೀರಾ ಸಿಟ್ಟು ಬಂತಂತೆ......"

"ಯಾರು ? ಕುಶಿರಾಮ್ ಏನು ?"

ಹೌದು ಅವನು ಮೆರವಣಿಗೆಯ ಮುಂದೆ ನಡೆದ.

"ಹೇಡಿಗಳಂತೆ ಓಡಬೇಡಿ, ವೀರರಂತೆ ನಡೆಯಿರಿ, ಕ್ರಾಂತಿಗೆ ಜಯವಾಗಲಿ !......ಎಂದು ವೀರಾವೇಶದಿಂದ ಘರ್ಜಿಸಿದ.

"ಮಿಲಿಟರಿಯವರು ಗುಂಡು ಹಾರಿಸುತ್ತಾ ಸಾಲಾಗಿ, ರಸ್ತೆಗೆ ಅಡ್ಡವಾಗಿ ನಿಂತಿದ್ದರು.

"ಪೋಲಿಸ್ ಅಧಿಕಾರಿಯು ಎಚ್ಚರಿಕೆ ಕೊಟ್ಟ. ಚದುರಿ, ಗುಂಡಿಗೆ ಬಲಿಯಾಗಬೇಡಿ ಎಂದು ಕೂಗಿದ.

"ಕುಶಿರಾಮ್ ಹೆದರಲಿಲ್ಲ. 'ವೀರ ಭಾರತ ಪುತ್ರರೇ–ಮುನ್ನುಗ್ಗಿ' ಎನ್ನುತ್ತ ಮುಂದೆ ಸಾಗಿದ.

"ಗುಂಡುಗಳು ಹಾರಿದುವು.

"ಅವನು ಮುಂದಿರಿಸಿದ ಹೆಜ್ಜೆ ಹಿಂತೆಗೆಯಲಿಲ್ಲ. ಅತ್ತಿತ್ತ ನೋಡ ಲಿಲ್ಲ. ಘೋಷಣೆ ಕೂಗುತ್ತ ನಡೆದ.

"ಒಂದೊಂದು ಹೆಜ್ಜೆಗೂ ಒಂದೊಂದು ಗುಂಡು ಅವನ ಎದೆಗೆ ನಾಟಿತು.

"ಅವನ ತೆರೆದ ಎದೆಯ ಮೇಲೆ ಏಳೆಂಟು ಗುಂಡುಗಳು ನಾಟಿದವು.

"ಆದರೂ ಕುಶಿರಾಮ್ ಅಳುಕದೆ ಮುನ್ನಡೆದ.

"ಕ್ರಾಂತಿಗೆ ಜಯವಾಗಲಿ......ವಂದೇ ಮಾತರಂ ಎಂಬುದೇ ಅವನ ಘೋಷಣೆಯಾಯಿತು.

"ಎಂಟನೆಯ ಗುಂಡು ಅವನ ಹಣೆಗೆ ತಗುಲಿತು. ಅವನು ಮುನ್ನಡೆಯಲಾಗಲಿಲ್ಲ. ಅಲ್ಲೇ ಉರುಳಿಬಿದ್ದು ಮಡಿದ.

"ಆ ಪ್ರದೇಶವೆಲ್ಲ ಸ್ಮಶಾನದಂತಾಗಿದೆ. ಹೆಣಗಳನ್ನು ಎತ್ತಲೂ ಸೈನಿಕರು ಬಿಡುತ್ತಿಲ್ಲ. ಗಾಯಗೊಂಡವರು ಅಲ್ಲೇ ನರಳುತ್ತ ಬಿದ್ದಿದ್ದಾರೆ.

"ದೂರದ ಮನೆಯ ತೋಟವೊಂದರಿಂದ ನಾನಿದನ್ನೆಲ್ಲ ನೋಡಿದೆ. ಅಲ್ಲಿದ್ದ ದೊಡ್ಡ ಮರವನ್ನೇರಿ ಅವಿತು ಕುಳಿತಿದ್ದೆ."

ಈ ಕಥೆ ಕೇಳಿದ ಅಜಯನ ಕಣ್ಣುಗಳಿಂದ ನೀರು ಸುರಿಯುತ್ತಿತ್ತು, ಅವನು ಬಿಕ್ಕಿಬಿಕ್ಕಿ ಅತ್ತ.

ಬೇಣಿತಾಯಿ ಕಣ್ಣೊರಸಿಕೊಂಡಳು.

ಯಾರ ಬಾಯಿಂದಲೂ ಮಾತುಗಳೇ ಹೊರಡಲಿಲ್ಲ. ಗಾಯದ ನೋವನ್ನು ಸಹಿಸುತ್ತ, ಕಿಶೋರ್ ಕಣ್ಣು ಮುಚ್ಚಿ ಮಲಗಿದ.

ಕತ್ತಲು ಸುತ್ತಲೂ ಹರಡಿತು.

ಬೇಣಿತಾಯಿ ಮೇಲಕ್ಕೆ ಎದ್ದಳು.

"ನೀನಿಲ್ಲೆ ಇರು. ನಾನೀಗಲೇ ಬರುತ್ತೇನೆ. ಮನೆಯ ಹೊರಗೆ ನೀವಿಬ್ಬರೂ ಕಾಲಿಡಬೇಡಿ," ಎಂದು ಅಜಯನಿಗೆ ಎಚ್ಚರಿಕೆ ನೀಡಿದಳು.

ಆದರೂ ಮುನ್ನೆಚ್ಚರಿಕೆಯಾಗಿ ಮನೆಯ ಬಾಗಿಲಿಗೆ ಬೀಗ ಹಾಕಿ ಆ ಕತ್ತಲೆಯಲ್ಲಿ ನಡೆದಳು.

ಬಹಳ ಹೊತ್ತಾದ ಬಳಿಕ ಕಿಶೋರ್ ಎಚ್ಚರಗೊಂಡ.

"ಮನೆಗೆ ಹೋಗುತ್ತೇನೆ" ಎಂದು ಕಿಶೋರ್ ಎದ್ದು ನಿಂತ.

"ಕೊಂಚ ಮಲಗಿರು. ಅಮ್ಮಾ ಎಲ್ಲೋ ಹೋಗಿದ್ದಾಳೆ. ಬರಲಿ."

"ಇಲ್ಲ...ನಾನೀಗಲೇ ಹೋಗುತ್ತೇನೆ."

"ಅಮ್ಮ ಮನೆಯ ಬಾಗಿಲಿಗೆ ಬೀಗ ಹಾಕಿದ್ದಾಳೆ. ಈಗ ಬಂದುಬಿಡಬಹುದು."

ಅಷ್ಟರಲ್ಲಿ ಬಾಗಿಲು ತೆರೆದ ಸದ್ದಾಯಿತು. ಬೇಣಿತಾಯಿ ಮನೆಯೊಳಗೆ ಬಂದು ಬಾಗಿಲು ಭದ್ರಪಡಿಸಿದಳು.

"ಅದೇಕೆ ಎದ್ದು ಕುಳಿತೆ? ಮಲಗಿಕೋ."

"ಇಲ್ಲಮ್ಮ, ಮನೆಗೆ ಹೋಗುತ್ತೇನೆ."

"ಗಂಡು ಮಕ್ಕಳು ಈ ರಾತ್ರಿಯಲ್ಲಿ ಸುತ್ತಾಡುವುದು ಅಪಾಯ. ನಾನೇ ನಿನ್ನ ಮನೆಗೆ ಹೋಗಿ ತಿಳಿಸಿ ಬಂದೆ."

"ನನಗೆ ಗಾಯವಾದುದನ್ನು ಹೇಳಿದಿರಾ?"

"ಹಾಗೇನೂ ಇಲ್ಲ. ನೀನು ನಮ್ಮ ಮನೆಯಲ್ಲಿದ್ದೀಯ, ಹೆದರಬೇಕಾಗಿಲ್ಲ ಎಂದು ತಿಳಿಸಿದ್ದೇನೆ. ಇಲ್ಲೇ ಊಟ ಮಾಡಿ ಮಲಗಿಕೊ," ಎಂದು ಬೇಣಿತಾಯಿ ಅಡುಗೆ ಮನೆಗೆ ತೆರಳಿದಳು.

ಕಿಶೋರನ ಬಾಯಿಯಿಂದ ಮತ್ತಷ್ಟು ಕತೆ ಕೇಳಲು ಅಜಯ ಮುಂದಾದ.

೪

ಕಿಡಿಯೊಂದು ಸಿಡಿದು ಕಾಡಿನ ಮಗ್ಗುಲಲ್ಲಿ ಉರಿಯಿತು.

ಬಿರುಗಾಳಿಯೊಂದು ಎತ್ತಲಿಂದಲೋ ಅತ್ತ ಬಿರುಸಾಗಿ ಬೀಸಿತು.

ನೋಡುತ್ತಿದ್ದಂತೆಯೇ ಕಾಡು ಅಗ್ನಿಗೆ ಆಹುತಿಯಾಯಿತು. ಮರಗಳು ಉರಿದುವು. ನೂರಾರು ಮೃಗಪಕ್ಷಿಗಳು ದಿಕ್ಕುದಿಕ್ಕಿಗೆ ಓಡಿದವು–ಹಾರಿದುವು. ಅನೇಕ ಬೆಂಕಿಗೆ ಆಹುತಿಯಾದುವು.

ಎಲ್ಲವೂ ಮುಗಿದು ಹೋಯಿತು ಎಂಬಂತೆ ಬೆಂಕಿಯೂ ಆರಿತು.

ಆದರೆ, ಹೊಗೆಯಾಡುತ್ತಲೇ ಇತ್ತು.

ಲಾಹೋರ್ ಸ್ಮಶಾನ ಸದೃಶವಾಗಿತ್ತು. ಯಾರಲ್ಲೂ ಉತ್ಸಾಹ ತೋರ ಲಿಲ್ಲ. ಯಾರಿಗೂ ಯಾವುದರಲ್ಲೂ ಆಸಕ್ತಿಯಿಲ್ಲ. ಆದರೆ, ಅವರ ಹೃದಯ ದಲ್ಲಿ ದೇಶಭಕ್ತಿ, ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧವಾದ ದ್ವೇಷ ಹೊಗೆ ಯಾಡುತ್ತಲೇ ಇತ್ತು.

ದಿನಗಳು ಉರುಳಿದಂತೆ, ಸತ್ಯ ಬೆಳಕಿಗೆ ಬರತೊಡಗಿತು.

"ಗುಲಾಬ್ ಕಾಕಾ ಮೃತರಾದರಂತೆ," ಎಂದು ಬೇಣಿತಾಯಿ ಒಂದು ದಿನ ಸುದ್ದಿ ತಂದಳು.

"ಪಾಪ! ತುಂಬ ಒಳ್ಳೆಯವರು. ನೀನೆಂದರೆ ಅದೆಷ್ಟು ಮಮತೆ ಅವರಿಗೆ......"

"ಆ ಕತೆ ಹೇಳುವ ಕಾಕ ಅಲ್ಲವೇನಮ್ಮ?" ಎಂದು ಅಜಯ ವಿವರಣೆ ಕೇಳಲು ಮುಂದಾದ.

"ಹೌದು ಅವರೇ. ಅವರಿಗೂ ಗುಂಡು ತಗುಲಿತ್ತು. ಅವರ ಶವವನ್ನು ಪೋಲಿಸರು ಬಿಟ್ಟುಕೊಡಲಿಲ್ಲವಂತೆ. ಅವರ ಮನೆಯ ಪಕ್ಕದ ಮೋಹನ್ ಬಾಬು ಅವರಿಗೂ ತುಂಬಾ ಗಾಯಗಳಾಗಿವೆ," ಎಂದು ಬೇಣಿ ನಿಟ್ಟುಸಿರು ಬಿಟ್ಟಳು.

ಕಥೆ ದಿನಕ್ಕೂ ಬೆಳೆಯುತ್ತಲೇ ಇತ್ತು. ಅಜಯನಿಗೆ ಪರಿಚಿತರಾದ, ಸಂಬಂಧಿಕರಾದ ಅನೇಕರು ಈ ಕ್ರಾಂತಿಯ ಬೆಂಕಿಯಲ್ಲಿ ನೊಂದಿದ್ದರು. ಆದರೆ, ಅವನ ಹೃದಯ ಮೀಟಿದ ಸುದ್ದಿ ಗುಲಾಬ್ ಕಾಕಾನ ಮರಣ.

ಹಿಂಸೆ, ಕೋಪ, ಕೆಟ್ಟ ಮಾತುಗಳನ್ನು ಎಂದೂ ಸಹಿಸದ ಸರಳ ಜೀವ ಅವರದು. ಅವರ ಪರಿಚಿತರೆಲ್ಲರೂ ಅವರನ್ನು ಸಂತರೆಂದೇ ಗೌರವಿಸುತ್ತಿದ್ದರು. ಸಿಖ್‌ರ ವೀರಶ್ರೀಯ ಬಗೆಗೆ ಅವರಿಗೆ ಅಪಾರ ಗೌರವವಿತ್ತು. ಹಾಗೇ ಶಾಂತಿ, ಅಹಿಂಸೆಗಳ ಬಗೆಗೆ ಪೂರ್ಣ ವಿಶ್ವಾಸವೂ ಇತ್ತು.

ಅಜಯನಂತೂ ಅವರನ್ನು ಮರೆಯುವುದೇ ಸಾಧ್ಯವಿರಲಿಲ್ಲ.

ಗುಲಾಬ್ ಕಾಕನ ಬಾಯಿಯಿಂದ ಅವನು ಅನೇಕ ಕಥೆಗಳನ್ನು ಕೇಳಿದ್ದಾನೆ. ಗುರು ಗೋವಿಂದಸಿಂಗ್‌ರವರ ಸಾಹಸದ ಕಥೆಗಳನ್ನು ಅವರು ರಸವತ್ತಾಗಿ ಬಣ್ಣಿಸುತ್ತಿದ್ದರು. ಸಿಖ್ ಜನತೆ ಇನ್ನೂ ಆ ವೀರಶ್ರೀ ಉಳಿಸಿಕೊಂಡಿದೆ, ಎಂಬ ಹೆಮ್ಮೆ ಅವರಿಗೆ.

"ನಮ್ಮ ಯುವಕರು ಶಕ್ತಿಶಾಲಿಗಳಾಗಬೇಕು, ಬಲಶಾಲಿಗಳಾಗಬೇಕು, ಧೈರ್ಯಶಾಲಿಗಳಾಗಬೇಕು. ಆಗ ಮಾತ್ರ ನಾವು ಎಲ್ಲ ಹಿಂಸೆಗಳನ್ನೂ ಇದಿರಿಸಿ ನಿಲ್ಲಬಲ್ಲೆವು. ಆಗಲೇ, ಯಾರಿಗೂ ನಮ್ಮನ್ನು ಕೆಣಕುವ ಧೈರ್ಯವಿರುವುದಿಲ್ಲ" ಎನ್ನುತ್ತಿದ್ದರು ಗುಲಾಬ್ ಕಾಕಾ.

ಇನ್ನು ಅಂಥ ಕಥೆ ಹೇಳುವವರು ಯಾರು ? ಬುದ್ಧಿಯ ಮಾತು ಆಡುವವರು ಯಾರು ?

ಯೋಚಿಸುತ್ತಿದ್ದಂತೆ ಅಜಯನ ಯೋಚನೆಯೇ ಬರಡಾಯಿತು. ಗುಲಾಬ್ ಕಾಕನ ಪ್ರತಿಯೊಂದು ಮಾತು ನೆನಪಿಗೆ ಬಂತು.

"ಕೆನಡಾ ದೇಶದಲ್ಲಿ ಸೇನೆ ಕಟ್ಟಿ, ಭಾರತದಲ್ಲಿರುವ ಬಿಳಿಯರ ಸರ್ಕಾರದ ವಿರುದ್ಧ ಯುದ್ಧ ಮಾಡಿದವರು ನಾವು" ಎಂದು ತಿಳಿಸುತ್ತ ಗದರ್ ಪಾರ್ಟಿಯ ಕಥೆಯನ್ನು ವಿವರಿಸಿದ್ದರು. ಮೂರು ಸಾವಿರ ಮಂದಿ ಪಂಜಾಬಿಗಳು ಭಾರತಕ್ಕೆ ಬಂದ ಕಥೆ ವಿವರಿಸಿದ್ದರು. ಲಾಲಾ ಹರ್‌ದಯಾಳ್, ರಾಶ್ ಬಿಹಾರಿ ಘೋಷ್, ಪಿಂಗಲೇ ಮುಂತಾದವರ ಸಾಹಸ ತಿಳಿಸಿದ್ದರು.

ಅಂದಿನಿಂದಲೂ ತಾನು ಸಾಹಸಿಯಾಗಿ ಕೀರ್ತಿ ಗಳಿಸಬೇಕೆಂಬ ಬಯಕೆ ಅಜಯನಲ್ಲಿ ಮೂಡಿತ್ತು.

ಆದರೆ, ಆ ಸಾಹಸ, ಹಿಂಸೆಗಳನ್ನು ಬಯಸದ ಕಾಕಾ ಇಂದು ಅಂಥ ಸಾಹಸದ ಹೋರಾಟದಲ್ಲಿ ಆಹುತಿಯಾಗಿದ್ದರು.

ಕಾಕನ ನೆನಪು ಅಜಯನಲ್ಲಿ ವಿನೂತನ ಪ್ರತಿಕ್ರಿಯೆ ಮೂಡಿಸಿತು. ಅದು ಸೇಡಿನ ಭಾವ. ಹೊಡೆದವನನ್ನು ತಿರುಗಿ ಹೊಡೆಯಬೇಕು ಎನ್ನುವ ಪ್ರತೀಕಾರ ಭಾವ.

ಆದರೆ ಗುಲಾಬ್ ಕಾಕಾ ಹೇಳಿದ್ದರು—

" ಅಡುಗೆ ಮಾಡುವವರೇ ಬೇರೆ ; ಔತಣ ನೀಡುವವರೇ ಬೇರೆ."

ನಿಜ. ಈ ಬಿಳಿಯರ ಸರಕಾರವೇ ನಮ್ಮ ಎಲ್ಲ ಸಂಕಟಗಳಿಗೂ ಕಾರಣ ವಾಗಿದೆ. ಅದನ್ನು ಅಳಿಸಬೇಕು. ಬಿಳಿಯರ ಹುಟ್ಟಡಗಿಸಬೇಕು.

ಅಜಯನ ಉದ್ವೇಗ ಬಹಳ ಕಾಲ ಉಳಿಯಲಿಲ್ಲವಾದರೂ, ಅದು ಅಳಿಯಲಿಲ್ಲ.

ಶಾಲೆಗಳು ತೆರೆದುವು. ಪಾಠ ಪ್ರವಚನಗಳು ಆರಂಭವಾದುವು. ಓದಿನಲ್ಲಿ ಅವನ ಕಾಲ ಕಳೆಯುತ್ತಿತ್ತು. ದಿನಗಳೂ ಉರುಳಿದವು. ಆದರೆ, ಲಾಹೋರ್‌ನಲ್ಲಿ ಹೊಗೆಯಾಡುತ್ತಿದ್ದ ಕ್ರಾಂತಿಯ ಕಿಡಿ ಆರಿರಲಿಲ್ಲ. ಅದನ್ನು ಬೂದಿ ಮುಚ್ಚಿತ್ತು.

ಪ್ರತಿದಿನವೂ ಎಂಬಂತೆ ಸಭೆ, ಮೆರವಣಿಗೆಗಳು ನಡೆಯುತ್ತಿದ್ದುವು. ಬ್ರಿಟಿಷ್ ಸರ್ಕಾರದ ದಬ್ಬಾಳಿಕೆ, ಕ್ರಾಂತಿಕಾರರ ಚಟುವಟಿಕೆಗಳು ಕೇಳಿ ಬರುತ್ತಿದ್ದುವು. ಲಾಹೋರ್ ನಗರದ ಮೂಲೆ ಮೂಲೆಯಲ್ಲೂ ಒಂದಿಲ್ಲೊಂದು ಕಾರ್ಯಕ್ರಮ ಸಾಗಿತ್ತು.

ಹೋರಾಟವೊಂದೇ ಹಾದಿ–ಹಿಂಸೆಯೇ ಅಸ್ತ್ರ ಎಂದು ತಿಳಿದಿದ್ದ ದೇಶ ಪ್ರೇಮಿಗಳಿಗೆ ಈಗ ಹೊಸತೊಂದು ಹಾದಿಯನ್ನು ತೋರಿಸಲಾಯಿತು. ದಕ್ಷಿಣ ಆಫ್ರಿಕದಲ್ಲಿ ಅಹಿಂಸಾತ್ಮಕ ಹೋರಾಟವನ್ನು ನಡೆಸಿ ವಿಜಯ ಗಳಿಸಿದ ಮೋಹನದಾಸ್ ಕರಮ್‌ಚಂದ್ ಗಾಂಧಿಯವರು ಭಾರತಕ್ಕೆ ಬಂದಿದ್ದರು.

ಭಾರತದ ಇತಿಹಾಸದಲ್ಲಿ ಹೊಸದೊಂದು ಅಧ್ಯಾಯ ಆರಂಭ ವಾಯಿತು.

ಕೆಲವೇ ಕೆಲವು ಮಂದಿಯ ಹೋರಾಟದ ಕಾಲ ಆಗಿಹೋಯಿತು. ಮಹಾಜನತೆಯೇ ಲಕ್ಷ ಸಂಖ್ಯೆಯಲ್ಲಿ ಸಂಘಟಿತವಾಗಿ, ತಮ್ಮ ಬೇಡಿಕೆಯನ್ನು

ಮುಂದಿರಿಸಿ ಹೋರಾಡಬೇಕು. ಕೆಲವರ ಹಿಂಸೆಗಿಂತ ಬಹುಜನ ಸಮುದಾಯದ ಅಹಿಂಸೆಯೇ ಸೂಕ್ತವಾದ ಖಚಿತವಾದ ಅಸ್ತ್ರ ಎಂದರು ಗಾಂಧಿ.

ಬ್ರಿಟಿಷ್ ಸಾಮ್ರಾಜ್ಯದ ಅಂಕೆಯಲ್ಲೇ ಅದರ ಮೇಲ್ವಿಚಾರಣೆಯಲ್ಲೇ, ನಮ್ಮ ದೇಶವನ್ನು ಆಳುವ ಸ್ವಾತಂತ್ರ್ಯ ನಮಗೆ ಕೊಡಿ. ಮನೆಯ ಮಾಲೀಕ ಯಾರೇ ಇರಲಿ, ಮನೆಯೊಳಗೆ ನಾವು ಸ್ವತಂತ್ರರಿರಬೇಕು ಎಂದು ಕಾಂಗ್ರೆಸ್‌ನ ಮಹಾನಾಯಕರು ಬಯಸಿದರು. ಈ ಬಯಕೆಯ ಸಾಧನೆಗಾಗಿ ಕಾಂಗ್ರೆಸ್ ಸಂಸ್ಥೆಯನ್ನು ಕಟ್ಟುವ ಕೆಲಸ ದೇಶದ ಮೂಲೆ ಮೂಲೆಗಳಲ್ಲೂ ನಡೆದಿತ್ತು.

ಆದರೆ, ಬ್ರಿಟಿಷ್ ಸರ್ಕಾರ ಯಾವುದೇ ಸಹಕಾರ ಶಾಂತಿಗಳಿಗೂ ಕಿವಿಕೊಡಲಿಲ್ಲ.

ಯೂರೋಪಿನಲ್ಲಿ ಮೊದಲನೆಯ ಮಹಾಯುದ್ಧದಲ್ಲಿ ಬ್ರಿಟಿಷರಿಗೇ ಗೆಲುವಾಗುತ್ತಿತ್ತು. ಜರ್ಮನರು ಸೋತು ಹಿನ್ನೆಡೆಯುತ್ತಿದ್ದರು. ತನ್ನ ಗೆಲುವಿನ ಹೆಮ್ಮೆಯಿಂದ ಬ್ರಿಟಿಷ್ ಸರಕಾರವು ರಷ್ಯಾದ ಮೇಲೂ ಜಿತ್ತು. ಟರ್ಕಿಯನ್ನು ಸದೆಬಡಿಯಲಾರಂಭಿಸಿತು. ಭಾರತದಲ್ಲಿ ಭೀಕರ ದಬ್ಬಾಳಿಕೆ ಆರಂಭಿಸಿತು.

ಲಾಹೋರಿನ ಹತ್ಯಾಕಾಂಡ ನಡೆದು ಇನ್ನೂ ವರ್ಷ ಆಗಿಲ್ಲ. ಅಲ್ಲಿ ನಡೆಸಿದ ಮದ್ದು ಗುಂಡಿನ ನೀತಿಯನ್ನೇ ಸರ್ಕಾರ ಮುಂದುವರಿಸಿತು.

ಅಮೃತ್‌ಸರದಲ್ಲಿ, ಶಾಂತಿಯುತವಾಗಿ ಸಭೆ ನಡೆಸಲು ಜಲಿಯನ್ ವಾಲಾಬಾಗ್‌ನಲ್ಲಿ ಸಾವಿರಾರು ಜನರು ಸೇರಿದ್ದರು. ಗಂಡಸರು, ಹೆಂಗಸರು, ಶಾಲಾ ಮಕ್ಕಳು, ಹಸುಳೆಗಳೆಲ್ಲ ಅಲ್ಲಿದ್ದರು.

ಈ ಭಾರೀ ಜನ ಸಮೂಹ, ಸರ್ಕಾರದ ವಿರುದ್ಧ ಪ್ರತಿಭಟಿಸಲು ಸೇರಿದುದು. ಪಂಜಾಬ್ ಪ್ರಾಂತ್ಯದ ಗವರ್ನರ್-ಜನರಲ್ ಡಾಯರ್‌ನಿಗೆ ರೋಷ ಉಕ್ಕಿಸಿತು. ಜನರನ್ನು ಕೇವಲ ಚದುರಿಸಿದರೆ ಸಾಲದು. ಮಿಲಿಟರಿ ದೃಷ್ಟಿಯಿಂದ ಪರಿಣಾಮಕಾರಕ ಕೆಲಸ ಮಾಡಬೇಕು. ಅಲ್ಲಿದ್ದವರಿಗೆ ಮಾತ್ರವಲ್ಲ ಇಡೀ ಪ್ರಾಂತ್ಯದ ಜನರಿಗೆ ಬುದ್ಧಿ ಕಲಿಸಬೇಕು. ಈ ವಿಚಾರದಲ್ಲಿ ಕ್ರೂರತೆ ಎಂಬುದೇ ಇಲ್ಲ, ಎಂದು ಡಾಯರ್ ನಿರ್ಧರಿಸಿದ.

೧೯೧೯ ರ ಏಪ್ರಿಲ್ ೧೩ನೇ ದಿನ.

ಹಬ್ಬದ ಉತ್ಸಾಹದಿಂದ ಸೇರಿದ್ದ ಈ ಜನಸಮೂಹದ ಮೇಲೆ ಮಿಲಿಟರಿಯವರು ಗುಂಡಿನ ಮಳೆ ಸುರಿಸಿದರು.

ಸುತ್ತಲೂ ಗೋಡೆ. ಇದ್ದುದೊಂದು ಕಿರುದಾರಿ. ಈ ಸಾವಿರಾರು ಜನರಿಗೆ, ಮಕ್ಕಳನ್ನು ಎತ್ತಿಕೊಂಡ ಹೆಂಗಸರಿಗೆ, ಮಕ್ಕಳಿಗೆ, ವೃದ್ಧರಿಗೆ ಚದುರಿ ಹೋಗಲೂ ಹಾದಿಯಿಲ್ಲ.

ಸೈನಿಕರು ಜನರ ಗುಂಪಿನ ಮೇಲೆ ತಡೆಯಿಲ್ಲದೆ ಗುಂಡಿನ ಮಳೆ ಸುರಿಸಿದರು.

ಬೆದರಿ ಓಡುತ್ತಿದ್ದವರ ಕಾಲಡಿಯಲ್ಲಿ ಸಿಲುಕಿ ನೂರಾರು ಮಕ್ಕಳು ಹುಡಿಯಾದರು. ಮಹಿಳೆಯರು ನೊಂದರು. ವೃದ್ಧರು ಬಿದ್ದರು.

ಇಡೀ ತೋಟದಲ್ಲಿ ನೆತ್ತರಿನ ಹೊಳೆ ಹರಿಯಿತು. ಹೆಣಗಳ, ಗಾಯಗೊಂಡವರ ರಾಶಿ ಬಿದ್ದಿತು.

ಕೆಲವೇ ನಿಮಿಷಗಳು......

೩೫೦ ಮಂದಿ ಮೃತರಾದರು, ೧,೨೦೦ ಮಂದಿ ತೀವ್ರ ಗಾಯಗೊಂಡರು.

ಎಣಿಕೆಗೆ ಸಿಕ್ಕಿದ್ದು ಇಷ್ಟು. ಗಾಯಗೊಂಡು ಓಡಿದವರೆಷ್ಟೊ? ಗಲಭೆಯಲ್ಲಿ ಮಡಿದವರು ಇನ್ನೆಷ್ಟೊ?

ಹತ್ಯಾಕಾಂಡ ಇಲ್ಲಿಗೆ ನಿಲ್ಲಲಿಲ್ಲ.

ಮಿಲಿಟರಿ ಆಡಳಿತಕ್ಕೆ ನಗರ ಒಳಗಾಯಿತು. ಜನತೆ ಬೀದಿಯಲ್ಲಿ ತೆವಳಿ ಹೋಗುವಂತಾಯಿತು. ಪೋಲಿಸರಿಗೆ ಮಿಲಿಟರಿಯವರಿಗೆ ವಂದಿಸಬೇಕು. ತಪ್ಪಿದರೆ ಮಾರ್ಗ ಮಧ್ಯದಲ್ಲೇ ಚಡಿ ಏಟು, ಆಸ್ತಿ ಮುಟ್ಟುಗೋಲು, ಅವಮಾನ, ಹಿಂಸೆ. ಅಮೃತ್‌ಸರ ನಗರ ನರಕವಾಯಿತು, ಇಡೀ ಪಂಜಾಬ್ ರಾಜ್ಯವೇ ಸೆರೆಮನೆಯಾಯಿತು.

ಬಿಸಿ ಲಾಹೋರಿಗೆ ತಗುಲಿತು. ಜನತೆ ಮತ್ತೊಮ್ಮೆ ತಲೆ ಎತ್ತಿ ಪ್ರತಿಭಟಿಸಿದರು. ಪ್ರತಿಯೊಂದು ಶಾಲೆಯೂ ಮನೆಯೂ ಕ್ರಾಂತಿಯ, ದೇಶಭಕ್ತಿಯ, ಅಸಹಕಾರದ ಕೇಂದ್ರವಾಯಿತು.

ಇಂಥ ಸರಕಾರದೊಡನೆ ನಮಗೆ ಯಾವುದೇ ಸ್ನೇಹವೂ ಬೇಡ. ಸಹಕಾರವೂ ಬೇಡ, ಎಂದು ಗಾಂಧೀಜಿ ಕರೆ ನೀಡಿದರು. ದೇಶದ ಮೂಲೆ ಮೂಲೆಗಳಲ್ಲೂ ಪರದೇಶಿ ಬಟ್ಟೆಗಳನ್ನು ವಸ್ತುಗಳನ್ನು ಬಹಿರಂಗವಾಗಿ ಸುಟ್ಟು

ಹಾಕುವ ಚಳವಳಿ ನಡೆಯಿತು. ಸ್ವದೇಶೀ ವಸ್ತುಗಳು, ಖಾದಿ ಬಟ್ಟೆ ಬಳಸುವ ಕಾರ್ಯ ಆರಂಭವಾಯಿತು.

ಅದುವರೆಗೆ ಮನೆಯ ಮೂಲೆಯಲ್ಲಿನ ಚರಕವನ್ನು ಅಜಯ ಎತ್ತಿಕೊಂಡ.

ಅವನ ತಾಯಿಗೆ ನೂಲುವುದು ಹತ್ತಿ ಬಿಡಿಸುವುದೆಲ್ಲ ತಿಳಿದಿತ್ತು.

ಸ್ವದೇಶಿಯ ಗಾಳಿ ಬೀಸಿತು. ಆದರೆ, ಹೃದಯದ ರೋಷವನ್ನು ಅದು ಶಾಂತಗೊಳಿಸಲಿಲ್ಲ.

ಅಜಯನ ಶಾಲೆಯಲ್ಲೇ ವಿದ್ಯಾರ್ಥಿಗಳ ಸ್ವದೇಶಿ ಸಂಘ ತಲೆ ಎತ್ತಿತು. ನಿತ್ಯವೂ ಜತೆಗೂಡಿ ಪತ್ರಿಕೆಗಳನ್ನು ಓದಿ, ವಾರ್ತೆ ತಿಳಿಯುವುದು ಅವರ ದಿನ ಚರಿಯಾಗಿತ್ತು.

ಓಡಿ ಹಿಡಿಯುವ ಆಟ, ಚೆಂಡಾಟಗಳಲ್ಲೂ ಬಿಳಿಯರ ಹೆಸರು ತಲೆ ಹಾಕಿತು. ಅದೊಂದು ಪಕ್ಷ; ಭಾರತೀಯರದೊಂದು ಪಕ್ಷ. ಹಾಗಾದಾಗ ಲೆಲ್ಲ ಭಾರತೀಯ ಪಂಗಡಕ್ಕೇ ಗೆಲುವಾಗುತ್ತಿತ್ತು.

ಅದೊಂದು ದಿನ ಅಜಯನ ಗೆಳೆಯರೆಲ್ಲ ಶಾಲೆಯ ತೋಟದಲ್ಲಿ ಆಟ ವಾಡುತ್ತಿದ್ದರು.

ಯಾರೋ ಬಿಳಿಯನೊಬ್ಬ ಕಾರಿನಲ್ಲಿ ಸಾಗುತ್ತಿದ್ದುದು ಕಾಣಬಂತು.

ಆಟವಾಡುತ್ತಿದ್ದಂತೆ ಕಲ್ಲೊಂದನ್ನೆತ್ತಿ ಅಜಯ ಆ ಕಡೆ ತೂರಿದ.

ಒಡನೆಯೇ ಅವನಲ್ಲಿ ಭೀತಿ ಮೂಡಿತು. ಇತರ ಬಾಲಕರಿಗೂ ಹೆದರಿಕೆ ಯಾಯಿತು. ಅವರೆಲ್ಲ ನಿಮಿಷಾರ್ಧದಲ್ಲಿ ಪಲಾಯನ ಮಾಡಿದರು.

ಗಾಡಿಯೇನೋ ಮುಂದೆ ಸಾಗಿತಾದರೂ, ಹುಡುಗರಲ್ಲಿ ಹೊಸತೊಂದು ಉತ್ಸಾಹ ಮೂಡಿತು. ಬಿಳಿಯರ ವಿರುದ್ಧವಾದ ತಮ್ಮ ಕೋಪವನ್ನು ಪ್ರಕಟಿಸುವ ಧೈರ್ಯ ಕ್ರಮವಾಗಿ ಬೆಳೆಯಿತು. ಆದರೆ, ಮರುದಿನವೇ ಶಾಲೆಯಲ್ಲಿ ಉಪಾಧ್ಯಾಯರು ಈ ಬಗೆಗೆ ಎಲ್ಲರಿಗೂ ಎಚ್ಚರಿಕೆ ನೀಡಿದರು. ಕಾರಿನ ಡ್ರೈವರ್ ಶಾಲಾಧಿಕಾರಿಗಳಿಗೆ ದೂರು ಕೊಟ್ಟಿದ್ದ.

ಚರಕದಿಂದ ನೂಲು ತೆಗೆಯುವ ಕಾರ್ಯವೇನೂ ಸುಲಭವಾಗಿರಲಿಲ್ಲ. ಎಷ್ಟೇ ಎಚ್ಚರಿಕೆಯಿಂದ ನೂತರೂ ದಾರ ಹರಿದು ಹೋಗುತ್ತಿತ್ತು. ಅಥವಾ ದಪ್ಪನಾಗಿಯೋ ತೀರಾ ಸಣ್ಣದಾಗಿಯೋ ಬರುತ್ತಿತ್ತು. ಉದ್ರೇಕ, ಉತ್ಸಾಹಗಳ ಅಜಯನ ಸಹನೆಯನ್ನು ಅದು ಪರೀಕ್ಷಿಸುತ್ತಿತ್ತು.

"ಇದಕ್ಕಾಗಿಯೇ ನಮ್ಮಲ್ಲಿ ನೂಲುವುದನ್ನು ಅಭ್ಯಾಸಮಾಡುತ್ತಾರೆ" ಎಂದು ಬೇಣಿತಾಯಿ ಒಂದು ದಿನ ಸಮಾಧಾನ ಹೇಳಿದಳು.

"ಹರಿದ ದಾರವನ್ನು ಜೋಡಿಸುವದೇ ಕೆಲಸವಾದರೆ, ನೂಲುವದಾದರೂ ಎಂದಿಗೆ?" ಎಂದ ಅಜಯ.

"ಅದೇಕೆ? ನಾನು ನೂಲುತ್ತಿಲ್ಲವೇನು? ತಾಳ್ಮೆಯಿಂದ ನೂಲಬೇಕು. ಎಲ್ಲ ಸರಿಹೋಗುತ್ತೆ."

"ಸರಿ, ಇದೆಲ್ಲ ನಿನ್ನಂಥ ಮುದುಕಿಯರಿಗೆ ಸರಿ, ನನ್ನಿಂದಾಗದು..."

"ನಿನ್ನಿಂದಲೂ ಸಾಧ್ಯ. ನೂಲುತ್ತ ಬಂದಂತೆ ಶಾಂತಿ, ಸಹನೆ ಬೆಳೆಯುತ್ತವೆ."

"ಆಮೇಲೆ ಸನ್ಯಾಸಿಯಾಗಬಹುದು, ಅಲ್ಲವೇನಮ್ಮ? ಎಂದು ಅಜಯ ಅಲ್ಲಿಂದೆದ್ದು ಆಟವಾಡಲು ನಡೆದ.

ಅಜಯನ ಗೆಳೆಯರಲ್ಲೆಲ್ಲ ಕಿಶೋರನೇ ತೀವ್ರವಾದಿಯಾಗಿದ್ದ. ಅವನ ಕಾಲಿನ ನೋವು ವಾಸಿಯಾಗಿ, ಆ ಬಗೆಗೆ ಅವನಿಗೀಗ ಮರವೆಯಾಗಿತ್ತು. ಆದರೂ, ತಾನೂ ಗುಂಡು ಹಾರಿಸುವುದನ್ನು ಕಲಿಯಬೇಕು, ಈ ಪೋಲಿಸರನ್ನು ಕೊಲೆ ಮಾಡಬೇಕು, ಎಂಬ ಬಯಕೆ ಮಾತ್ರ ಹೃದಯದೊಳಗೇ ಹುದುಗಿ ನಿಂತಿತ್ತು.

ಕಿಶೋರನ ನಾಯಕತ್ವದಲ್ಲಿ ಸುಮಾರು ಹತ್ತು ಮಂದಿ ಬಾಲಕರ ಬಲವಾದ ತಂಡವೊಂದು ನಿರ್ಮಾಣವಾಗಿತ್ತು. ಓದಿನ ಜತೆಗೇ ಆಟ, ವ್ಯಾಯಾಮ, ರಾಜಕೀಯ ಅಭ್ಯಾಸಗಳನ್ನು ಅವರೆಲ್ಲ ನಡೆಸುತ್ತಿದ್ದರು. ಸರ್ಕಾರದ ವಿರುದ್ಧವಾಗಿ ಯಾವುದೇ ಸಭೆ, ಮೆರವಣಿಗೆಗಳಾದರೂ ಅತ್ತ ಧಾವಿಸುತ್ತಿದ್ದರು.

ಈಗ ಮತ್ತೊಂದು ಘೋಷಣೆ ಅವರಿಗೆ ಪ್ರಿಯವೆನಿಸಿತು. ಲಾಲ್-ಬಾಲ್–ಪಾಲ್, ಲಾಲಾ ಲಜಪತರಾಯ್, ಬಾಲಗಂಗಾಧರ ತಿಲಕ್, ಬಿಪಿನ್ ಚಂದ್ರಪಾಲ್, ಜತೆಗೇ ಇನ್ನೂ ಹಲವಾರು ಘೋಷಣೆಗಳು ಅವರ ಸ್ಫೂರ್ತಿಗೆ ಸಾಧಕವಾದವು.

ವಿದೇಶಗಳಿಗೆ ಹೋಗಿದ್ದ ಲಾಲಾಜಿ ಮತ್ತೆ ಭಾರತಕ್ಕೆ ಹಿಂತಿರುಗಿದರು. ಕಾಂಗ್ರೆಸ್ ಸಂಸ್ಥೆಯ ನಾಯಕತ್ವವನ್ನು ಗಾಂಧೀಜಿ ವಹಿಸಿಕೊಂಡರು.

ಕೆಲವರೇ ಗುಂಪು ಕಟ್ಟಿಕೊಂಡು, ಬ್ರಿಟಿಷ್ ಸರ್ಕಾರವನ್ನು ಇದಿರಿಸಿ, ಗುಂಡು ಹಾರಿಸಿ, ಹೋರಾಡುವ ಕಾಲ ಬದಲಾಯಿತು.

ಪ್ರತಿಯೊಬ್ಬರ ಮನೆಗೂ ಸ್ವದೇಶಿ ಚಳುವಳಿ ಪ್ರವೇಶಿಸಿತು. ಎಲ್ಲೆಲ್ಲೂ ಖಾದಿ, ಚರಕ, ದೇಶೀಯ ಶಾಲೆಗಳು ತಲೆ ಎತ್ತಿದುವು.

ಹೊಸ ಹಾದಿಯೊಂದು ತೋರಿಬಂತು.

ಅಸಹಕಾರ–ಸತ್ಯಾಗ್ರಹ.

“ಎಲ್ಲಿ ಹೋಗಿದ್ದೆಯೋ ಕಿಶೋರ್! ಆಗಲೇ ನಿನ್ನನ್ನು ಕಂಡು ಕೆಲವು ತಿಂಗಳುಗಳಾದುವು.”

—ಅಚ್ಚರಿಯಿಂದ ಅಜಯು ಕೇಳಿದ. ತಮ್ಮ ಗುಂಪಿನ ನಾಯಕ ನೆನಿಸಿದ್ದ ಕಿಶೋರನು ಈಗ ಕೆಲವು ತಿಂಗಳಿಂದ ಕಾಣದಾದುದರಿಂದ ಅವನಿಗೂ ಭೀತಿ ಮೂಡಿತ್ತು.

ಲಾಹೋರಿನ ಅಂದಿನ ಪರಿಸ್ಥಿತಿಯಲ್ಲಿ ಯಾರು ಎಂದು ಕಾಣದಾಗು ವರೆಂದು ಹೇಳಲು ಬರುವಂತಿರಲಿಲ್ಲ. ದಸ್ತಗಿರಿಯಾದ ಎಲ್ಲರ ಹೆಸರಾಗಲೀ ಪೋಲಿಸರ ದಬ್ಬಾಳಿಕೆಗಳಾಗಲೀ ಪತ್ರಿಕೆಗಳಲ್ಲಿ ಪೂರ್ಣವಾಗಿ ಪ್ರಕಟ ವಾಗುತ್ತಿರಲೂ ಇಲ್ಲ. ಸಾಮಾನ್ಯ ಕಳ್ಳತನ, ಪುಂಡಾಟಿಕೆಗಳ ಸುದ್ದಿಗಳಂತೆ ಅವು ಯಾರಿಗೂ ಗೋಚರವಾಗದೆ ಮಾಯವಾಗುತ್ತಿದ್ದುವು.

“ಅಮ್ಮ ನಿನಗೆ ಹೇಳಿಲ್ಲವೇನು?”

“ಅವಳೆಲ್ಲಿ ಹೇಳುತ್ತಾಳೆ? ಅವಳಿಗೇ ತಿಳಿದರೆ ತಾನೆ? ಮನೆ ಕೆಲಸ, ನೂಲುವುದೇ ಅವಳ ನಿತ್ಯ ವಿಧಿಯಾಗಿದೆ.”

“ನಮ್ಮ ಗುಲಾಬ್‌ಸಿಂಗ್ ಇತ್ತ ಬಂದಿಲ್ಲವೇ?”

“ಅವನೂ ಬಾರದೆ ಕೆಲವು ವಾರಗಳಾದುವು.”

“ಸರಿ! ನಮ್ಮ ಸಂಘ ಅಲ್ಲೇ ಮಲಗಿ ನಿದ್ರಿಸಿದಂತಾಯಿತು,” ಎಂದ ನಿರಾಶೆಯಿಂದ ಕಿಶೋರ್.

“ಹಾಗೇನೂ ಇಲ್ಲ. ಮಿಕ್ಕವರೆಲ್ಲ ಸ್ಕೂಲಿನ ಆವರಣದಲ್ಲಿ ಸೇರು ತ್ತೇವೆ. ತಿಳಿದು ಬಂದ ಸುದ್ದಿಯನ್ನು ಚರ್ಚಿಸುತ್ತೇವೆ. ಅದಿರಲಿ, ನೀನು ಎಲ್ಲಿಗೆ ಹೋಗಿದ್ದೆ ಹೇಳು?”

“ಮತ್ತೆಲ್ಲಿಗೆ? ಹಳ್ಳಿಗೆ ಹೋಗಿದ್ದೆ, ಅಷ್ಟೆ,” ಎಂದು ಲಘುವಾಗಿ ನುಡಿದ ಕಿಶೋರ್. ಆದರೆ ಅಜಯನಿಗೆ ಅದರಿಂದ ನಂಬಿಕೆ ಬರಲಿಲ್ಲ. ತಮ್ಮಲ್ಲಿ ಎಲ್ಲರಿಗಿಂತಲೂ ಹಿರಿಯವನಾದ ಕಿಶೋರ್ ತುಂಬ ಬಲಶಾಲಿ

ಆಳು. ಅವನ ವಯಸ್ಸಿಗೆ ಮೀರಿದ ಬೆಳವಣಿಗೆ. ಆದರೂ ಇನ್ನೂ ಬೆಳೆಯದ ಹುಡುಗತನದ ಮನಸ್ಸು, ದಷ್ಟಪುಷ್ಟವಾದ ದೇಹ, ಮಿಂಚುವ ಕಣ್ಣುಗಳು, ಕುಡಿಯೊಡೆದ ಮೀಸೆ, ಉಬ್ಬು ಗಲ್ಲ. ಅವನ ಕೈಯ ರಟ್ಟೆಯನ್ನು ಗುದ್ದಿ ಆನಂದಿಸುವುದೇ ಹುಡುಗರಿಗೊಂದು ಆಟವಾಗಿತ್ತು.

ಆದರೆ ಈಗ ಅವನು ತುಂಬ ಬದಲಾಗಿದ್ದ. ಅವನ ಮುಖದ ಕಾಂತಿ ಅಳಿದಿತ್ತು, ದೇಹವೂ ಬಡವಾಗಿತ್ತು.

"ನಿನ್ನನ್ನು ಕಂಡರೆ ಕಾಯಿಲೆ ಬಿದ್ದಂತೆ ಕಾಣುತ್ತಿದೆ ಕಿಶೋರ್, ಏನಾಯಿತು ?" ಎಂದು ಬೇಣಿತಾಯಿ ಹೇಳುತ್ತ ಅವನ ಕೈಗೊಂದು ಲೋಟ ಹಾಲು ಕೊಟ್ಟಳು.

"ಅದೊಂದು ದೊಡ್ಡ ಕತೆ ತಾಯಿ. ನಮ್ಮನ್ನು ನಾವೇ ಕೊಲ್ಲು ತ್ತಿದ್ದೇವೆ. ಆ ಕತೆ ಕೇಳಿಲ್ಲವೇ ನೀವು ?"

"ಅದೇನೋ ಕೊಂಚ ಕೇಳಿದೆ. ನಮ್ಮ ಬಂಧು ಪೃಥ್ವೀಸಿಂಗ್‌ನ ಕೊಲೆಯಾಯಿತಂತೆ. ಗುರುದ್ವಾರದ ಪೂಜಾರಿ ಕೊಲ್ಲಿಸಿದನಂತೆ."

"ಹೌದು ತಾಯಿ. ಗುರುದ್ವಾರದ ಪೂಜಾರಿಗಳು ಅಲ್ಲ ಸಲ್ಲದ ವ್ಯವಹಾರ, ವಿನೋದ, ವಿಹಾರ ನಡೆಸುತ್ತಿರುವುದನ್ನು ಕಂಡು ನಮ್ಮ ಜನ ರೊಚ್ಚಿಗೆದ್ದರು. ಅದನ್ನು ವಿರೋಧಿಸಿದರು. ಆದರೆ ಸರ್ಕಾರ ಆ ನೀಚ ಪೂಜಾರಿಗಳ ಸಹಾಯಕ್ಕೆ ಹೋಯಿತು. ಅದಕ್ಕೇ ಅಕಾಲಿ ಚಳುವಳಿ ನಡೆದಿದೆ."

"ದೇವರೇ ಕಾಪಾಡಬೇಕು ನಮ್ಮ ಜನರನ್ನು. ಜನ ನೀತಿಗೆಟ್ಟಾಗ ತಮ್ಮನ್ನು ತಾವೇ ಹೊಡೆದುಕೊಂಡು ಸಾಯುತ್ತಾರಂತೆ. ಈ ಜನರೂ ಹಾಗೇ ಕುಡಿದು, ವ್ಯಭಿಚಾರ ಮಾಡಿ ಕೆಟ್ಟರು."

"ಒಂದೇ ದಿನ ನೂರಐವತ್ತಕ್ಕೂ ಹೆಚ್ಚು ಜನರನ್ನು ಮಹಂತ ನಾರಾಯಣದಾಸ್ ಕೊಲ್ಲಿಸಿದ. ಆ ಕತೆ ನಿಮಗೆ ನೆನಪಿರಬಹುದು."

"ನೆನಪಿದೆ, ಅಂದಿನಿಂದಲೂ ಹೋರಾಟ ನಡೆಯುತ್ತಲೇ ಇದೆಯಂತೆ. ನೀನು ಅದನ್ನು ನೋಡಲು ಹೋದೆಯೇನೊ ?"

"ಇಲ್ಲ ತಾಯಿ. ನಾನು ಪೇಟೆಯಲ್ಲಿ ಸುತ್ತಾಡುತ್ತಿದ್ದಾಗ ಪೋಲಿಸರು ಗಾಡಿಯ ತುಂಬ ಹೆಣಗಳನ್ನು ತುಂಬಿಕೊಂಡು ಹೋಗುತ್ತಿದ್ದರು. ಅತ್ತ

ನೋಡಿದೆ. ಅದೇನೆಂದು ಕೇಳುವ ಕುತೂಹಲವಾಯಿತು, ಆ ಪೋಲಿಸರಲ್ಲಿ ಒಬ್ಬನನ್ನೇ ವಿಚಾರಿಸಿದೆ."

"ಆಮೇಲೆ.........?"

"ಆ ಗಾಡಿಗಳಲ್ಲಿ ಹೆಣಗಳನ್ನು ರಾಶಿ ಹಾಕಿದ್ದರು. ನೆತ್ತರು ಸೋರುತ್ತಲೇ ಇತ್ತು. ಹೆಣಗಳಲ್ಲಿ ಕೆಲವಂತೂ ತೀರಾ ಚಿಕ್ಕ ಹುಡುಗರವು. ನಮ್ಮ ಅಜಯನಿಗಿಂತಲೂ ಚಿಕ್ಕವರಿರಬಹುದು. ಅದನ್ನು ನೋಡುತ್ತ ಕೋಪವೂ ದುಃಖವೂ ಉಕ್ಕಿಬಂದು ಗಾಡಿಗಳ ಹಿಂದೆಯೇ ನಡೆದೆ."

"ಪೋಲಿಸರು ಏನು ಹೇಳಿದರು ?" ಎಂದು ಕುತೂಹಲದಿಂದ ಪ್ರಶ್ನಿಸಿದ ಅಜಯ.

"ಅವರು ನನ್ನನ್ನು ಹಿಡಿದು ಕೈಗಳಿಗೆ ಬೇಡಿ ತೊಡಿಸಿ ಕರೆದುಕೊಂಡು ಹೋದರು. ಜೇಲಿಗೆ ಹಾಕಿದರು."

"ಆ ಮೇಲೆ......? ಅಯ್ಯೋ ಪಾಪ...ನಿನಗೂ ಜೇಲಿನ ಕಷ್ಟ ಬಂತೇನಪ್ಪ......" ಎಂದು ಉದ್ಗರಿಸಿದಳು ಬೇಣಿತಾಯಿ.

"ಪೋಲಿಸರು ನನ್ನನ್ನೂ ಮನಬಂದಂತೆ ಹೊಡೆದು ವಿಚಾರಿಸಿದರು. ನಾನು ನನಗೆ ತಿಳಿದುದನ್ನಷ್ಟೆ ಹೇಳಿದೆ. ನನ್ನನ್ನೂ ಅಕಾಲಿ ಗುಂಪಿಗೆ ಸೇರಿಸಲು ಪ್ರಯತ್ನಿಸಿದರು. ಮೂರು ತಿಂಗಳ ಕಾಲ ಜೇಲಿನಲ್ಲಿದ್ದೆ. ಆರೋಗ್ಯ ಕೆಟ್ಟಿತು. ಜ್ವರ ಬಂತು. ಕೊನೆಗೆ ಬಿಡುಗಡೆ ಮಾಡಿದರು."

"ಇಂಥ ಅನ್ಯಾಯವೂ ಉಂಟೇ ?"

"ಉಂಟು ತಾಯಿ. ಆಗಲೇ ಸುಮಾರು ಐದುನೂರು ಜನರ ಕೊಲೆಯಾಗಿದೆ. ನಲ್ವತ್ತು ಸಾವಿರ ಜನ ಜೇಲುಗಳಲ್ಲಿದ್ದಾರೆ. ಅವರೆಲ್ಲ ನನಗೆ ಚಳುವಳಿಯ ಕತೆ ಹೇಳಿದರು. ಈ ಬಿಳಿಯರ ಸರ್ಕಾರ ಅಳಿಸದೆ ನಮಗೆ ಸುಖವಿಲ್ಲ ಎಂದರು."

"ನಮ್ಮಿಂದೇನಾಗುತ್ತದೆ ಕಿಶೋರ್ ? ಎಲ್ಲವೂ ದೇವರ ಚಿತ್ತ. ಆತನೇ ನಮ್ಮನ್ನು ಕಾಪಾಡಬೇಕು," ಎಂದುಕೊಂಡು ಬೇಣಿತಾಯಿ ಒಳನಡೆದಳು.

ಅಜಯನ ಮನದಲ್ಲಿ ಕತೆ ಕೇಳಿ ಉದ್ರೇಕ ಮೂಡಿತ್ತು. ಅದಕ್ಕೂ ಹೆಚ್ಚಾಗಿ ಕಿಶೋರನ ಬಡವಾದ ಪರಿಸ್ಥಿತಿ ಕಂಡು ಅವನಿಗೆ ಕಣ್ಣೀರು ಬಂತು.

"ಎಷ್ಟು ಬಡವಾಗಿದ್ದೀಯೋ ಕಿಶೋರ್; ನಮ್ಮೆಲ್ಲರ ಪೈಲ್ವಾನ್ ಆಗಿದ್ದವನು ಹೀಗಾದೆಯಲ್ಲ."

"ನನಗೇನೂ ಆಗಿಲ್ಲ ಅಜಯ. ಈಗ ಆರೋಗ್ಯವಾಗಿದ್ದೇನೆ. ಇನ್ನೇನು ಕೆಲವು ತಿಂಗಳಲ್ಲೇ ಹಿಂದಿನಂತೆ ಆಗುತ್ತೇನೆ. ನನಗೀಗ ತುಂಬ ಧೈರ್ಯ ಬಂದಿದೆ."

"ಅಂದರೆ......?"

"ಜೇಲು ಹೇಗಿರುತ್ತೋ ಎಂಬ ಹೆದರಿಕೆಯೊಂದಿತ್ತು. ಅದೆಲ್ಲ ಈಗ ಅಳಿದುಹೋಯಿತು. ಜೇಲಿನಲ್ಲಿ ಏನಿದೆ, ಪೋಲಿಸರ ಹಿಂಸೆ ಹೇಗಿದೆ, ಎಂಬುದೆಲ್ಲ ಅರ್ಥವಾಯಿತು. ಇನ್ನು ನಾನು ಯಾವುದಕ್ಕೂ ಹೆದರುವುದಿಲ್ಲ."

"ಮುಂದೇನು ಯೋಚನೆ ಕಿಶೋರ್?"

ಏನೇ ಆಗಲಿ, ತಾನೂ ವೀರನಂತೆ ಹೋರಾಡಬೇಕು, ಕೀರ್ತಿ ಗಳಿಸಬೇಕು ಎಂಬ ಉತ್ಕಟೇಚ್ಛೆಯ ಅಜಯ, ಕಿಶೋರನ ಅನುಭವಗಳನ್ನೆಲ್ಲ ತಿಳಿಯಲು ಉತ್ಸುಕನಾಗಿದ್ದ. ಗೆಳೆಯರಿಬ್ಬರೂ ಹೊರಗಡೆ ಬಂದು ಮನೆಯ ಬಾಗಿಲಿನ ಮೆಟ್ಟಿಲ ಮೇಲೆ ಕುಳಿತರು.

"ಹೋರಾಟ ಇಲ್ಲಿಗೆ ಮುಗಿಯುವುದಿಲ್ಲ ಅಜಯ. ನಮ್ಮ ಜನರು ಕೊನೆಯವರೆಗೂ ಹೋರಾಡಲು ನಿರ್ಧರಿಸಿದ್ದಾರೆ. ಇಡೀ ಸಿಖ್ ಜನಾಂಗ ಅಳಿದರೂ ಚಿಂತೆಯಿಲ್ಲ, ಬ್ರಿಟಿಷರನ್ನು ಈ ದೇಶದಿಂದ ಓಡಿಸಲೇ ಬೇಕು, ಎಂದು ಬಾಬಾಜಿಯೊಬ್ಬರು ಜೇಲಿನಲ್ಲಿ ಹೇಳಿದರು."

"ಗಾಂಧೀಜಿ ಹೋರಾಟ ನಡೆಸುತ್ತಿದ್ದಾರಲ್ಲ. ಲಾಲಾಜಿ, ಮೋತಿಲಾಲ್, ರಾಜೇಂದ್ರ ಪ್ರಸಾದ್, ಮೌಲಾನಾ ಅಜಾದ್, ಜವಾಹರ್‌ಲಾಲ್, ಸುಭಾಷ್‌ಚಂದ್ರಭೋಸ್, ಚಿತ್ತರಂಜನದಾಸ್, ಸರ್ದಾರ್ ಪಟೇಲ್ ಎಲ್ಲರೂ ಜತೆಗೂಡಿದ್ದಾರೆ."

"ಬ್ರಿಟಿಷ್ ಸರ್ಕಾರದೊಡನೆ ಸಹಕರಿಸುವುದಿಲ್ಲ ಎಂದು ಅವರು ನಿರ್ಧರಿಸಿದ್ದಾರೆ. ವಿದೇಶೀ ವಸ್ತುಗಳನ್ನು ಸುಡುತ್ತಾರೆ. ಸ್ವದೇಶೀ ವ್ರತ ಆಚರಿಸುತ್ತಾರೆ. ಅದು ಒಂದು ಮಾರ್ಗ ಮಾತ್ರ."

"ನೀನು ತುಂಬ ತಿಳಿದುಕೊಂಡಿದ್ದೀಯ ಕಿಶೋರ್. ಜೇಲಿನಲ್ಲಿ ಬಹಳವಾಗಿ ವಿಚಾರ ಮಾಡಿದ್ದೀಯ. ಇನ್ನೊಂದು ದಾರಿ?"

“ ಅದನ್ನು ದೇಶದ ಎಲ್ಲ ಕಡೆಗೂ ನಮ್ಮಂತಹ ತರುಣರು ಅನುಸರಿಸುತ್ತಿದ್ದಾರಂತೆ. ಅದೇ ಕ್ರಾಂತಿ. ಈ ಬಿಳಿಯರನ್ನು ಕೊಂದು ಹಾಕಿ ಅವರ ಹುಟ್ಟಡಗಿಸುವುದು, ” ಎಂದು ಉದ್ವೇಗದಿಂದ ಹೇಳಿದ ಕಿಶೋರ್.

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ಇಬ್ಬರೂ ಏನೋ ಯೋಚನೆಯಲ್ಲಿ ತೊಡಗಿದಂತಿತ್ತು. ಉದ್ವೇಗ ಉದ್ರೇಕಗಳಿಂದಾಗಿ ಕಿಶೋರನಿಗೆ ಕೆಮ್ಮು ಬಂತು.

ಅಜಯನಿಗೆ ತಾನೂ ಜೇಲಿನ ಅನುಭವ ಗಳಿಸಿಲ್ಲವಲ್ಲ ಎಂಬುದೇ ಚಿಂತೆಯಾಗಿತ್ತು. ಏನೇ ಆಗಲಿ, ತಾನೂ ವೀರನಾಗಬೇಕು ಎಂಬ ಅವನ ಬಯಕೆಯ ಕುದುರೆ ಅವನನ್ನು ಎತ್ತೆತ್ತಲೋ ಸೆಳೆಯುತ್ತಿತ್ತು.

ಅಂಥ ಉತ್ಸಾಹ ಕೆಲವು ತಿಂಗಳಿಂದ ಅಡಗಿದ್ದರೂ ಈಗ ಅದು ಇಮ್ಮಡಿ ಪ್ರಖರತೆಯಿಂದ ಪ್ರಜ್ವಲಿಸಿತು. ತಾನೂ ದೇಶಕ್ಕಾಗಿ ಏನನ್ನಾದರೂ ಮಾಡಬೇಕೆಂಬ ಬಯಕೆ ಹೆಚ್ಚುತ್ತಿತ್ತು.

ಆ ಅಕಾಲಿ ಶವಗಳಲ್ಲಿ ಪ್ರಾಣಾರ್ಪಣ ಮಾಡಿದ ಬಾಲಕರ ದೇಹಗಳೂ ಇದ್ದುವು. ಒಬ್ಬಿಬ್ಬರು ತನಗಿಂತಲೂ ಚಿಕ್ಕವರು, ಅವರು ನಿಜಕ್ಕೂ ಭಾಗ್ಯಶಾಲಿಗಳು. ತಾನು ಅವರಿಗಿಂತ ದೊಡ್ಡವನಾದರೂ ಅವರಂತೆ ಕೀರ್ತಿ ಗಳಿಸಿಲ್ಲ ಎಂಬ ಚಿಂತೆ ಅವನಲ್ಲಿ ಮೂಡಿತು.

ಕಿಶೋರ್ ತನ್ನ ಮನೆಗೆ ಹೊರಟು ನಿಂತ.

“ ನಾಳೆ ದಿನ ಎಲ್ಲರೂ ಸೇರೋಣ. ನಮ್ಮ ಆಟ–ಪಾಟ–ನಡೆಯಲೇಬೇಕು. ”

“ ಅದೇನು ಪಾಟವೋ ? ”

“ ಹಾಗಲ್ಲ ಅಜಯ. ನಾವು ಸ್ಕೂಲಿನಲ್ಲಿದ್ದಷ್ಟು ದಿನ ನಮಗೆ ಜತೆ ಸೇರಲು ಅವಕಾಶ, ವಿಚಾರ ಮಾಡಲು ಸ್ವಾತಂತ್ರ್ಯ. ವಿಷಯ ತಿಳಿಯಲು ಅವಕಾಶ. ಅದೇ ಮುಂದೆ ಈ ದೇಶದ ಸೇವೆ ಮಾಡಲು ನಾವು ಸಿದ್ಧರಾಗುವ ದಾರಿ. ”

“ ಅಂತೂ ನೀನೀಗ ಅನುಭವಶಾಲಿ ತಾನೇ ? ನೀನು ಹೇಳಿದಂತೇ ಆಗಲಿ, ” ಎಂದ ನಿರಾಶೆಯ ಧ್ವನಿಯಿಂದ ಅಜಯ.

ಕಿಶೋರ್ ಒಳಗೆ ಬಂದು ಬೇಣಿತಾಯಿಗೆ ವಂದಿಸಿ ಹೊರಟುಹೋದ.

ಮತ್ತೊಂದು ದಿನ ಕಿಶೋರ್ ಮಧ್ಯಾಹ್ನದ ವೇಳೆಗೇ ಅಜಯನ ಮನೆಗೆ ಬಂದಿದ್ದ. ಅವನ ಮುಖ ಬಾಡಿತ್ತು. ಆದರೆ, ಜೇಲಿನಿಂದ ಹಿಂದೆ ಬಂದಾಗ ಇದ್ದುದಕ್ಕಿಂತ ಈಗ ಹೆಚ್ಚು ಆರೋಗ್ಯವಾಗಿದ್ದ.

"ಏನಪ್ಪ ಕಿಶೋರ್ ಈಗಲೂ ನಿನ್ನ ಕ್ರಾಂತಿ ಬಿಟ್ಟಿಲ್ಲವೇನೋ ?" ಎಂದು ನಗುತ್ತ ಬೇಣಿತಾಯಿ ಸ್ವಾಗತಿಸಿದಳು.

"ದೇಶಕ್ಕಾಗಿ ಸಾಯುವುದೊಂದು ಭಾಗ್ಯ ತಾಯಿ. ಆದರೆ, ಅದು ನಮ್ಮಂಥವರಿಗೆಲ್ಲ ಸಿಗಲಾರದು. ನಾವು ಮಾತ್ರ ನಮ್ಮಲ್ಲೇ ಹೋರಾಡಿ ಅಳಿಯುತ್ತೇವೆ."

"ಈಗೇನಾಯಿತು ?"

"ನನ್ನ ಕಥೆ ಎಲ್ಲ ನಿಮಗೆ ತಿಳಿದೇ ಇದೆಯಲ್ಲ. ತಾಯಿ ಇಲ್ಲದ ತಬ್ಬಲಿ ನಾನು. ನಿಮ್ಮಲ್ಲಿ ತಾಯಿಯ ಪ್ರೀತಿ ಕಂಡು ಇಲ್ಲಿಗೆ ಬರುತ್ತಾ ಇದ್ದೇನೆ."

"ಯಾವಾಗ ಬೇಕಾದರೂ ಬಾ ಮಗು, ಅದರಲ್ಲೇನು, ನಮ್ಮ ಅಜಯನಿಗೊಬ್ಬ ಅಣ್ಣನಿದ್ದ ಹಾಗೆ ನೀನು."

"ನನಗೂ ಹಾಗೇ ಅನಿಸುತ್ತದೆ ತಾಯಿ. ಅಜಯನನ್ನು ದಿನಕ್ಕೊಮ್ಮೆ ಯಾದರೂ ನೋಡಬೇಕೆನಿಸುತ್ತದೆ. ಆದರೆ, ನನ್ನ ಅಣ್ಣಂದಿರಿಗೆ ಹಾಗಿಲ್ಲ."

"ಅದೆಲ್ಲ ಸಂಸಾರದಲ್ಲಿ ಇದ್ದೇ ಇರುತ್ತಪ್ಪ."

ಅವನ ಮನೆಯಲ್ಲೇನೋ ನಡೆದಿರಬೇಕೆಂದು ಊಹಿಸಿದ ಬೇಣಿತಾಯಿ ಸಮಾಧಾನ ಹೇಳಿದಳು.

"ನನ್ನ ಇಬ್ಬರು ಅಣ್ಣಂದಿರೂ ನನ್ನ ಬಗೆಗೆ ತುಂಬ ಪ್ರೀತಿಯಿಂದಲೇ ನೋಡುತ್ತಿದ್ದರು. ಅವರಿಗೆ ಮದುವೆಯೂ ಆಗಿದೆ. ಅತ್ತಿಗೆಯವರಲ್ಲೂ ನಾನು ದೋಷ ಕಂಡಿರಲಿಲ್ಲ. ಈಗ ಅವೆಲ್ಲ ಬದಲಾದ ಹಾಗಿದೆ."

"ಕೆಲವು ದಿನಗಳಲ್ಲಿ ಎಲ್ಲ ಸರಿಹೋಗುತ್ತದೆ. ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ."

"ಇಲ್ಲ ತಾಯಿ. ಹಾಗಾಗುವಂತೆ ಕಾಣಿಸುವುದಿಲ್ಲ. ನಾನು ಜೇಲಿನಿಂದ ಹಿಂತಿರುಗಿದ ಮೇಲೆ ಅವರ ಮನಸ್ಸೇ ಬದಲಾಗಿದೆ. ನಾನಂತೂ ಓದುವುದೇ ಅವರಿಗೆ ಒಗ್ಗುವುದಿಲ್ಲ."

"ಓದಬೇಕಪ್ಪ, ಅದನ್ನು ಬಿಡಬೇಡ. ತೀರಾ ತೊಂದರೆಯಾದರೆ ಇಲ್ಲೇ ಬಂದು ಇದ್ದುಬಿಡು."

ಬೇಣಿತಾಯಿಯ ಅಂತಃಕರಣವನ್ನು ನೋಡಿ ಕಿಶೋರನ ಕಣ್ಣುಗಳಲ್ಲಿ ನೀರೂರಿತು.

"ನೀವು ನಿಜವಾಗಿಯೂ ನನ್ನ ತಾಯಿ. ಆದರೆ..."

"ಸಂಕೋಚ ಪಡಬೇಡ ಕಿಶೋರ್..."

"ಹಾಗೇನೂ ಇಲ್ಲ ತಾಯಿ. ನಾನು ಒಳ್ಳೆಯವನಾಗಬೇಕೆಂದರೂ ದೇವರು ಬಿಡುವುದಿಲ್ಲ."

"ನನಗೊಂದೂ ಅರ್ಥವಾಗುವುದಿಲ್ಲ. ನೀನು ತುಂಬ ಮನಸ್ಸಿಗೆ ಹಚ್ಚಿಕೊಂಡಿದ್ದೀಯ..."

"ಜೇಲಿನಿಂದ ಸಂತೋಷದಿಂದಲೇ ಮನೆಗೆ ಬಂದೆ. ನನ್ನ ಮನೆ ಎಂದು ಹಿಗ್ಗಿನಿಂದ ಬಂದೆ. ಆದರೆ, ಹಾಗೆ ಕಂಡುಬರಲಿಲ್ಲ. ಇನ್ನೂ ಎಚ್ಚರಿಕೆಯಿಂದ ಇರಬೇಕು ಎಂದು ಹಿರಿಯರೆಲ್ಲ ಹೇಳಿದರು. ಪೋಲಿಸರು ಸದಾ ನನ್ನ ಮೇಲೆ ಕಣ್ಣಿಟ್ಟೇ ಇದ್ದಾರೆ. ನಾನು ಕ್ರಾಂತಿಕಾರ ಎನ್ನುತ್ತಾರೆ."

"ಆ ಹಿಂಸೆಯೆಲ್ಲ ಬೇಡ, ಕಂದ."

"ನಿಜ. ಆದರೆ ಪೋಲಿಸರೇ ನನ್ನನ್ನು ಹಿಂಸೆಗೆ ದೂಡುತ್ತಿದ್ದಾರೆ. ಮನೆಗೆ ಬೇಡ, ಶಾಲೆಗೂ ಬೇಡ, ಸಮಾಜಕ್ಕೂ ಬೇಡ. ನಾನು ಮತ್ತೆಲ್ಲಿಗೆ ಹೋಗಲಿ ? ಕ್ರಾಂತಿಯಲ್ಲಿ ಭಾಗವಹಿಸದಿದ್ದರೂ ಕ್ರಾಂತಿಕಾರ ಎಂದು ಹೇಳಿಸಿಕೊಳ್ಳಲೇ ? ಇಲ್ಲ ತಾಯಿ...ನನ್ನ ಭೂಮಿ ತಾಯಿಯೇ ನನಗೆ ಗತಿ..."

ಬೇಣಿತಾಯಿಗೆ ಏನು ಹೇಳಬೇಕೋ ಹೊಳೆಯಲಿಲ್ಲ.

"ಕೊಂಚ ದಿನ ಇಲ್ಲೇ ಇದ್ದು ವಿಶ್ರಾಂತಿ ಪಡೆ, ಕಂದಾ. ಮುಂದೆ ಎಲ್ಲ ಸರಿಹೋಗುತ್ತದೆ."

"ನಿಮ್ಮ ಆ ಪ್ರೀತಿಯೇ ನನಗೆ ಸಾಕು, ತಾಯಿ. ನಾನು ಎಲ್ಲಾದರೂ ತಲೆ ಎತ್ತಿ ಬದುಕುತ್ತೇನೆ. ನಿಮ್ಮ ಆಶೀರ್ವಾದದಿಂದ ಕೀರ್ತಿ ಗಳಿಸುತ್ತೇನೆ."

"ಹಾಗೇ ಆಗಲಿ..."

" ನಾನು ಉದ್ಯೋಗ ಹಿಡಿಯಲು ನಿರ್ಧರಿಸಿದ್ದೇನೆ, ತಾಯಿ. ನೌಕರಿಯೂ ಸಿಕ್ಕಿದೆ. ಊರೂರು ತಿರುಗಾಡಬೇಕಾಗುತ್ತದೆ. ಆಗಲಿ, ಅದರಿಂದ ಚಿಂತೆಯೂ ಕಳೆಯುತ್ತದೆ. ನೂರಾರು ಜನರ ಪರಿಚಯವೂ ಆಗುತ್ತದೆ."

ಕಿಶೋರನ ಈ ನೂತನ ಯೋಚನೆ ಕೇಳಿ ಬೇಣಿಗೆ ಆಶ್ಚರ್ಯವಾಯಿತು.

" ಹಾಗಾದರೆ ನಮ್ಮನ್ನೆಲ್ಲ ಮರೆತುಬಿಡುತ್ತೀಯೇನು ?"

" ಇಲ್ಲ ತಾಯಿ. ಆಗಾಗ ಬರುತ್ತೇನೆ. ಅಜಯನನ್ನು ನೋಡಿ ಮಾತ ನಾಡಿಸಿ ಹೋಗುತ್ತೇನೆ. ಬೇರೆ ನನ್ನವರು ಯಾರಿದ್ದಾರೆ ?"

ಈಗ ಅವನಿಗೆ ಮುಂದೆ ಮಾತನಾಡಲೂ ಸಾಧ್ಯವಾಗಲಿಲ್ಲ.

ಅಷ್ಟರಲ್ಲಿ ಶಾಲೆಗೆ ಹೋಗಿದ್ದ ಅಜಯನೂ ಮನೆಗೆ ಬಂದ. ಶಾಲೆ ಯಲ್ಲೂ ಕಾಣದಿದ್ದ ಕಿಶೋರನನ್ನು ಕಂಡು ಅವನಿಗೆ ಅಚ್ಚರಿಯಾಯಿತು.

" ಇದೆಲ್ಲಿಂದ ಮೂಡಿ ಬಂದೆ ? ನಾವೆಲ್ಲ ಶಾಲೆಯಲ್ಲಿ ನಿನಗಾಗಿ ಹುಡುಕು ತ್ತಿದ್ದೆವು."

" ಅಂಥ ನಿಮ್ಮ ವಿಶ್ವಾಸದ ಬಲದಿಂದಲೇ ನಾನು ಬೆಳೆಯುತ್ತೇನೆ, ಆರೋಗ್ಯವಂತನಾಗುತ್ತಿದ್ದೇನೆ."

" ಅದಕ್ಕೇ ನಾವು ನಿನ್ನನ್ನು ಭೀಮಸೇನ ಎಂದು ಕರೆಯುತ್ತಿದ್ದೇವೆ."

" ಆದರೂ ಈ ಒರಟು ಮನುಷ್ಯನಲ್ಲಿ ಮಗುವಿನ ಹೃದಯವಿದೆ ಅಜಯ, ಕಣ್ಣಿಗೆ ಕಾಣುವಂತೆ ಅವನಿಲ್ಲ," ಎಂದಳು ಬೇಣಿತಾಯಿ, ನಡುವೆ ಬಾಯಿ ಹಾಕಿ.

" ಹೌದಮ್ಮ, ಅದಕ್ಕೇ ಅವನೆಂದರೆ ನಮಗೆಲ್ಲ ತುಂಬ ಪ್ರೀತಿ. ಮಕ್ಕಳನ್ನು ಆಟವಾಡಿಸಿದಂತೆ ನಮ್ಮನ್ನು ಕುಣಿಸುತ್ತಾನೆ—ಈ ಭೀಮ."

" ಅಜಯ...ನಿನ್ನನ್ನು ನೋಡಿ ಹೋಗೋಣವೆಂದು ಇಷ್ಟು ಹೊತ್ತು ಕಾದಿದ್ದೆ."

" ಅಂದರೆ ? ಸಂಜೆ ಆಟಕ್ಕೆ ಬರುವುದಿಲ್ಲವೇ ?"

" ಇಲ್ಲ, ನಾನು ಶಾಲೆ ಬಿಟ್ಟುಬಿಟ್ಟೆ."

" ಇದೆಂಥ ಕೆಲಸ ಮಾಡಿದೆ ಕಿಶೋರ್. ನಮಗೆಲ್ಲ ಹೇಳಿಯೇ ಇಲ್ಲ."

" ಹೇಳಿದರೆ ನೀವು ಸುಮ್ಮನಿರುತ್ತೀರಾ ?"

" ಮುಂದೇನು ಮಾಡುತ್ತೀಯಾ ?"

" ನೌಕರಿ ಹಿಡಿದಿದ್ದೇನೆ. ಊರೂರು ಸುತ್ತಾಡುವ ನೌಕರಿ. ಸಾಬೂನು ಎಣ್ಣೆ ಮಾರಾಟ."

" ಆಮೇಲೆ ?"

" ನಿನಗೂ ಸಾಬೂನು ಕೊಡುತ್ತೇನೆ ಬಿಡು."

" ನಮ್ಮನ್ನೆಲ್ಲ ಬಿಡುತ್ತೀಯಾ ?"

" ಇಲ್ಲ ಆಗಾಗ ಬಂದು ನೋಡುತ್ತೇನೆ."

" ಹೋಗಬೇಡ ಕಿಶೋರ್..." ಅಜಯನ ಕಣ್ಣುಗಳಲ್ಲಿ ನೀರೂರಿತು. ದುಃಖ ತಡೆಯಲಾರದೆ ಆತ ಅಳುತ್ತ ಮೂಲೆಯಲ್ಲಿ ಕುಳಿತುಬಿಟ್ಟ.

ಕಿಶೋರ್ ಅಜಯನ ಬಳಿಗೆ ತೆರಳಿ ಕುಳಿತುಕೊಂಡು ಅವನ ಮೈದಡವಿದ.

" ತಮ್ಮಾ..."

" ಕಿಶೋರಣ್ಣಾ..."

" ನಾನೆಂದೂ ನಿನ್ನನ್ನು ಮರೆಯುವುದಿಲ್ಲ. ನೀನು ನನ್ನ ತಮ್ಮನಲ್ಲವೇ ? ಎಷ್ಟೇ ಸಂಚಾರವಿರಲಿ, ಎಷ್ಟೇ ದೂರ ಹೋಗಿರಲಿ, ಆಗಾಗ ಬಂದು ನಿನ್ನನ್ನು ಕಾಣುತ್ತೇನೆ."

" ಹ್ಞೂ...ಆಗಲಿ..." ಎಂದು ಕಾಲುಗಳ ಸಂದಿನಲ್ಲಿ ಮುಖವಿರಿಸಿ ಅಜಯ ಅಳತೊಡಗಿದ.

ಅವನನ್ನು ಸಮಾಧಾನಪಡಿಸುತ್ತ, ಮೆಲ್ಲನೆ ಮೇಲೆದ್ದ ಕಿಶೋರ್. ಬೇಣಿತಾಯಿಯ ಪಾದಗಳನ್ನು ಮುಟ್ಟಿ ವಂದಿಸಿ, ಅಲ್ಲಿಂದ ವೇಗವಾಗಿ ಹೊರಟುಬಿಟ್ಟ.

೬

ಲಾಹೋರ್‌ನಿಂದ ಹೊರಟ ಕಿಶೋರ್ ಅತ್ಯಂತ ಉತ್ಸಾಹದಿಂದ ಊರೂರು ಸುತ್ತಾಡಿದ. ಆಗ್ರಾ ನಗರದಲ್ಲಿ ಸಂಚರಿಸಿ, ತನ್ನ ನೂತನ ವ್ಯಾಪಾರಕ್ಕೆ ಕಳೆ ತಂದುಕೊಂಡು, ಕಾನ್‌ಪುರಕ್ಕೆ ಬಂದ.

ಕೈಗಾರಿಕೆ ಕ್ಷೇತ್ರದಲ್ಲಿ ಮುನ್ನಡೆಯುತ್ತಿದ್ದ ಈ ನಗರ ಅವನಿಗೆ ಹೊಸ ಬೆಳಕು ನೀಡಿತು.

ಸಂಘಟಿತವಾದ ದುಡಿಮೆ, ಜೀವನ, ಅಸಹನೀಯ ಬಡತನ, ಕಷ್ಟ ಕಾರ್ಪಣ್ಯಗಳು. ಜೀವನದಲ್ಲಿನ ದುಃಖ ಮರೆಯಲೆಂದು ಕಾರ್ಮಿಕರು ಹುಡುಕುವ ಹಾದಿ. ಇವೆಲ್ಲವೂ ಅವನಿಗೆ ಭಾರತದ ದುರ್ಗತಿಯನ್ನು ಕಣ್ಣಮುಂದಿರಿಸಿದುವು. ಈ ದೇಶದ ಬಿಡುಗಡೆಯಾಗದೆ ನಮ್ಮ ಜನಕೋಟಿ ಮನುಷ್ಯರಾಗಿ ಬಾಳಲು ಸಾಧ್ಯವಿಲ್ಲ ಎಂಬ ಖಚಿತ ಭಾವನೆ ಬೆಳೆಯಿತು.

ಆದರೆ, ಬ್ರಿಟಿಷ್ ಸಾಮ್ರಾಜ್ಯದ ಸಂಕೋಲೆಗಳಿಂದ ಭಾರತದ ಬಿಡುಗಡೆ ಹೇಗೆ ?

ಗಾಂಧೀಜಿಯ ನಾಯಕತ್ವದಲ್ಲಿ ಪ್ರಚಂಡ ಚಳುವಳಿ ನಡೆಸಿ ಕಾಂಗ್ರೆಸ್ ರಚನಾತ್ಮಕ ಹಾದಿಯಲ್ಲಿ, ಸ್ವದೇಶೀ ಚಳುವಳಿಯಲ್ಲಿ ಮುನ್ನಡೆದಿದೆ.

ಕ್ರಾಂತಿ ?

ಅಪಾರ ಜನಸಂಪತ್ತಿನ ನಾಶವಲ್ಲದೆ ಅದರಿಂದ ಬೇರೆ ಫಲ ಇನ್ನೂ ಕಂಡು ಬಂದಿಲ್ಲ.

ಆದರೆ ಅದು, ದಾಸ್ಯವೇ ನಮ್ಮ ಬಾಳು ಬದುಕು ಎಂದು ತಿಳಿದು ಕುರಿಗಳಂತೆ ಬಾಳುತ್ತಿದ್ದ ಯುವ ಜನತೆಯಲ್ಲಿ ಧೈರ್ಯ ತುಂಬಿದೆ. ವೀರಶ್ರೀಯನ್ನು ಮೂಡಿಸಿದೆ. ದೇಶಕ್ಕಾಗಿ ಮಡಿಯುವ ಮಹೋನ್ನತ ಆದರ್ಶವನ್ನು ಇರಿಸಿದೆ.

ಕಾನ್‌ಪುರದ ಉದ್ಯಾನವನದ ಕಲ್ಲು ಬೆಂಚಿನ ಮೇಲೆ ಕುಳಿತು ಯೋಚಿಸುತ್ತಿದ್ದ ಕಿಶೋರ್ ಅದೇನೋ ಕನಸು ಕಾಣುತ್ತಿದ್ದ.

ಅವನನ್ನು ಕಂಡರೆ ಆತ ಆ ಊರಿಗೆ ಹೊಸಬನೆಂದು ಯಾರಿಗಾದರೂ ಗೊತ್ತಾಗುತ್ತಿತ್ತು. ಕೈ ಚೀಲವು ಅವನನ್ನು ಸಂಚಾರಿ ಎಂದು ವಿವರಿಸುತ್ತಿತ್ತು.

ಅದೇ ತೋಟದ ಮತ್ತೊಂದು ಮೂಲೆಯಲ್ಲಿ ಕುಳಿತಿದ್ದ ಇಬ್ಬರು ತರುಣರು ಅತ್ತ ಮೆಲ್ಲನೆ ನಡೆದು ಬಂದರು. ಆ ಕಲ್ಲು ಬೆಂಚಿನ ಮೇಲೆ ಕುಳಿತರು. ಏಕಾಂತವಾಗಿ ಕುಳಿತ ವ್ಯಕ್ತಿ ವ್ಯಾಪಾರಿಯಷ್ಟೇ ಅಲ್ಲ, ಇನ್ನೇನೋ ಆಗಿರಬೇಕೆಂಬ ಶಂಕೆ ಆ ಇಬ್ಬರಲ್ಲಿ ಮೂಡಿತ್ತು. ಅದನ್ನು ತಿಳಿಯಲೆಂದೇ ಅವರು ಅತ್ತ ಬಂದಿದ್ದರು.

"ಮೀನು ಉಂಗುರವನ್ನು ನುಂಗಿದೆ. ಅದನ್ನು ಹೊರತೆಗೆಯಬೇಕಾದರೆ ಪ್ರಾರ್ಥನೆ ಮಾಡಿದರೆ ಸಾಲದು. ಅದರ ಹೊಟ್ಟೆಯನ್ನು ಸೀಳಲೇ ಬೇಕು."

"ಆದರೆ ಅದರಿಂದ ಪ್ರಾಣ ಹಾನಿಯಾಗುತ್ತದಲ್ಲ."

"ಬದುಕಿ ಸಾಯುವುದಕ್ಕಿಂತ ಸತ್ತು ಬದುಕುವುದೇ ಮೇಲು. ಕರ್ತವ್ಯ ಮಾಡಿದ ತೃಪ್ತಿಯಿದೆ, ಕೀರ್ತಿಯೂ ಇದೆ."

ಅವರಿಬ್ಬರ ಮಾತುಗಳ ಕಡೆಗೆ ಕಿಶೋರನ ಗಮನ ಸರಿಯಿತು. ಆತ ಕುತೂಹಲದಿಂದ ಅವರನ್ನೇ ನೋಡಿದ.

"ನಾನು ಅದನ್ನೇ ಯೋಚಿಸುತ್ತಿದ್ದೆ. ನೆತ್ತರು ಹರಿಸಿದಾಗಲೇ ಮಾನವನ ಎತ್ತರ ಅರಿವಾದೀತು" ಎನ್ನುತ್ತ ಕಿಶೋರ್ ಅವರನ್ನು ತನ್ನ ಕಲ್ಲು ಬೆಂಚಿಗೆ ಸ್ವಾಗತಿಸಿದ.

"ನೀವು ?"

"ಕಿಶೋರ್ ಎಂದು ಹೆಸರು. ಈ ದೇಶದ ಬಿಡುಗಡೆಯ ಚಿಂತೆಯಲ್ಲಿ ರಕ್ತ ಕುದಿದು ಸುತ್ತಾಡುತ್ತಿದ್ದೇನೆ. ಆದರೆ, ಆ ದಾರಿ ಕಾಣುವವರೆಗೆ ಸಾಬೂನು ವಿಕ್ರಯಿಸುವ ಏಜಂಟನಾಗಿದ್ದೇನೆ," ಎಂದು ನಗುತ್ತ ನುಡಿದ ಕಿಶೋರ್.

"ನನ್ನ ಹೆಸರು ಬಿ. ಕೆ. ದತ್ ಎಂದು. ಕಾರ್ಮಿಕರ ಸಂಘಟನೆ ನಡೆಸುತ್ತಿದ್ದೇನೆ.

ಆಗಂತುಕ ತನ್ನ ಬಗೆಗೆ ತಿಳಿಯ ಹೇಳಿದ. ಆದರೆ, ಗೆಳೆಯನ ವಿಚಾರ ಇನ್ನೂ ಹೇಳಲಿಲ್ಲ.

ಮಾಸಿದ ಬಟ್ಟೆ ಧರಿಸಿ, ಹಳ್ಳಿಯ ರೈತನಂತೆ ಆ ಗೆಳೆಯ ಕಾಣಿಸುತ್ತಿದ್ದ. ಯಾರೋ ರೈತನಿರಬಹುದು, ಅಥವಾ ಕಾರ್ಖಾನೆಯ ಕೂಲಿಯಾಗಿರಬಹುದು

ಎಂದುಕೊಂಡು ಕಿಶೋರ್ ಸುಮ್ಮನಾದ. ಬಡಕಲಾದ ತೆಳ್ಳನೆಯ ಶರೀರ. ವಯಸ್ಸಿಗೆ ಮೀರಿದ ಎತ್ತರ, ಗುಳಿಬಿದ್ದ ಕೆನ್ನೆಗಳು. ಇನ್ನೂ ಮೀಸೆ ಮೊಳಕೆ ಯೊಡೆದಿಲ್ಲ. ಅಂತೂ ಭಾರತದ ಬಡತನದ ಪ್ರತೀಕದಂತಿದ್ದ ಆ ವ್ಯಕ್ತಿ ಕೊಂಚ ಅಳುಕು ಸ್ವಭಾವದವನಂತೆಯೂ ಕಂಡ. ಜತೆಗೆ ಸಾಮಾನ್ಯ ರೈತನಲ್ಲಿರ ಬಹುದಾದ ಸೌಜನ್ಯ, ಸರಳತೆ.

ದತ್ತ ಮತ್ತು ಕಿಶೋರರ ಮಾತುಕತೆಗಳು ಬಳಸಿ ಬಳಸಿ, ಕ್ರಾಂತಿಯ ಕಡೆಗೆ ಹರಿದುವು. ಕಿಶೋರನ ಉತ್ಸಾಹ, ಆಗಲೇ ಅವನ ಕಾಲಿಗಾದ ಗಾಯಗಳನ್ನು ಕಂಡ ಬಳಿಕ ದತ್ತನಿಗೂ ಅವನಲ್ಲಿ ವಿಶ್ವಾಸ ಮೂಡಿತು.

"ಕ್ರಾಂತಿ ಬಿರುಸಾಗಿ ಸಾರ್ವತ್ರಿಕವಾಗಿ ಸಾಗಬೇಕು. ಆಗಲೇ ದೇಶದ ಬಿಡುಗಡೆ ಸಾಧ್ಯವಾದೀತು.

"ಅದಕ್ಕೆ ಅಗತ್ಯವಾದ ಸಂಘಟನೆ ನಮ್ಮಲ್ಲಿದೆಯೇ ?" ಎಂದು ಕಿಶೋರ್ ಪ್ರಶ್ನಿಸಿದ.

"ಇದೆ. ಅದು ಬೆಳೆಯುತ್ತಲೂ ಇದೆ. ಆ ಬಗೆಗೆ ನನಗೇನೂ ಸಂದೇಹವಿಲ್ಲ. ಕ್ರಾಂತಿ ಬೆಳೆದಾಗ, ಅದು ಬಲವಾದಾಗಲೇ ಈ ಸಾಮ್ರಾಜ್ಯಶಾಹಿಗೆ ಬುದ್ಧಿ ಬಂದೀತು."

"ದೇಶದ ನಾಯಕರು ಆ ಹಾದಿಯಲ್ಲಿ ದುಡಿಯುತ್ತಿರುವವ ರಲ್ಲ ?"

"ಅದೂ ಒಂದು ದಾರಿ. ಶತಮಾನದ ಯೋಜನೆ. ಆರ್ಥಿಕವಾಗಿ ಬ್ರಿಟಿಷರನ್ನು ಸೋಲಿಸುವ ಪ್ರಯತ್ನ. ಆದರೆ, ಅವರು ಸೋತರೂ ಭಾರತದ ಬಂಡವಲಿಗರು ಬಲಶಾಲಿಯಾಗಲಾರರೇನು ?"

"ಅವರನ್ನೂ ಇದಿರಿಸಬೇಕು..."

"ಅದು ಕೊನೆಯಿಲ್ಲದ ಹೋರಾಟವಾಗುತ್ತದೆ. ಇದ್ದಕ್ಕಿದ್ದಂತೆ ಈ ಬಿಳಿಯರು ತೊಲಗಬೇಕು, ಅವರು ಬೇರು ಬಿಡಲು ಅವಕಾಶ ನೀಡಬಾರದು," ಎಂದ ದತ್.

ಅದುವರೆಗೂ ಸುಮ್ಮನೆ ಕುಳಿತಿದ್ದ ತರುಣ ಈಗ ತನ್ನ ಅಭಿಪ್ರಾಯ ನೀಡಿದ.

"ನಿರಾಶೆ, ಆಲಸ್ಯ, ಅಸಡ್ಡೆ, ಕ್ಲೈಬ್ಯ ದೇಶದಲ್ಲಿ ಹರಡಿ ನಿಂತಿವೆ. ಎಲ್ಲವನ್ನು ವಿಧಿ ಎಂದುಕೊಂಡು ಜನ ಮುದುಡಿ ಹೋಗಿದ್ದಾರೆ. ಅವರನ್ನು ಎಚ್ಚರಿಸಲು ದೇವರೇ ಬರಬೇಕಾದೀತು."

ನಿರಾಶಾವಾದದ ಈ ಧ್ವನಿ ಕೇಳಿ ಕಿಶೋರನಿಗೂ ಅಚ್ಚರಿಯಾಯಿತು. ಆದರೆ, ವ್ಯಕ್ತಿಯನ್ನು ಕಂಡಾಗ ಆತ ಅಂತಹ ಭಾವನೆಯವನೇ ಎಂದು ಯಾರಿಗಾದರೂ ತೋರದಿರದು.

ದತ್ ಒಮ್ಮೆ ಆ ತರುಣನ ಕಡೆಗೂ ಕಿಶೋರನ ಕಡೆಗೂ ನೋಡಿದ.

"ಕ್ಷಮಿಸಿ ಕಿಶೋರ್. ನಾನಿವರನ್ನು ಪರಿಚಯ ಮಾಡಿಸಿ ಕೊಟ್ಟಿಲ್ಲವಲ್ಲ, ಇವರೇ ಭಗತ್‌ಸಿಂಗ್. ಇನ್ನೂ ಹದಿನೈದರ ತರುಣ. ಆದರೆ ಕ್ರಾಂತಿಯಲ್ಲಿ ಪೂರ್ಣ ನಂಬಿಕೆ ಇರಿಸಿದ್ದಾರೆ."

"ಅವರ ಮಾತುಗಳನ್ನು ಕೇಳಿದರೆ ನನಗೆ ಹಾಗನ್ನಿಸುವುದಿಲ್ಲ," ಎಂದ ಕಿಶೋರ್.

"ನಿಜ, ನನಗೂ ಹಾಗೇ ಅನ್ನಿಸಿತ್ತು. ಅವರೂ ದುಡುಕುವ ಉದ್ರೇಕದ ವ್ಯಕ್ತಿಯಲ್ಲ. ಶಾಂತಚಿತ್ತವಾಗಿ ಎಲ್ಲವನ್ನು ವ್ಯವಸ್ಥಿತವಾಗಿ ರೂಪಿಸುವ ಸಾಧಕ."

ಮಾತು ಕಿಶೋರ್ ಮತ್ತು ಭಗತ್‌ಸಿಂಗ್‌ರೊಳಗೆ ಮುಂದುವರಿಯಿತು.

"ಜೀವನ ಮತ್ತು ಮರಣ ಇವೆರಡರ ಅರ್ಥವನ್ನು ನಮ್ಮ ಜನ ಮೊದಲು ಅರ್ಥಮಾಡಿಕೊಳ್ಳಬೇಕು ಕಿಶೋರ್. ಅಂಥವರು ನೂರು ಮಂದಿ ದೊರೆತರೂ ಸಾಕು. ಇಡೀ ದೇಶದ ಜನರನ್ನು ಎಚ್ಚರಿಸಿ ನಿಲ್ಲಿಸಬಹುದು. ನೂರು ಮಂದಿ ದೇಶಕ್ಕಾಗಿ ಮಡಿಯಲಿ, ನೂರು ಸಾವಿರ ಮಂದಿ ಆ ಹಾದಿಯಲ್ಲಿ ಜೀವದ ಹಂಗು ತೊರೆದು ನಡೆಯಲು ಸಿದ್ಧವಾಗುತ್ತಾರೆ."

"ಅಂಥ ಪ್ರಯತ್ನಗಳು ಹಿಂದೆ ವಿಫಲವಾದುವಲ್ಲ ಎಂಬುದೇ ಚಿಂತೆ."

"ಅದು ವಿಫಲತೆಯಲ್ಲ, ಸಫಲತೆಯ ಹಾದಿಯಲ್ಲಿ ಸಾಗಿದ ಪ್ರಯತ್ನಗಳು. ಹಿಂದಿನ ಎಲ್ಲ ಕ್ರಾಂತಿಗಳೂ ನಮಗೆ ಪಾಠ ಹೇಳಿಕೊಟ್ಟಿವೆ. ಆ ಕ್ರಾಂತಿಯಲ್ಲಿ ಭಾಗವಹಿಸಿದ ನೂರಾರು ವೀರರು ಇನ್ನೂ ಸೆರೆಯಲ್ಲಿ ಬದುಕಿದ್ದಾರೆ. ಮರಳಿ ಮರಳಿ ನಮ್ಮ ಜನತೆ ಪ್ರಯತ್ನಿಸಿದರೆ ನಾವೇ ಗೆಲ್ಲುತ್ತೇವೆ."

ಭಗತ್‌ಸಿಂಗ್ ಈಗ ಹೆಚ್ಚು ಉತ್ಸಾಹದಿಂದ ಮಾತನಾಡಿದ. ಅವನ ಬಗೆಗೆ ಮೊದಲ ನೋಟಕ್ಕೆ ತಾನು ತಳೆದ ಅಭಿಪ್ರಾಯದ ಬಗೆಗೆ ಕಿಶೋರನಿಗೇ

ನಾಚಿಕೆಯಾಯಿತು. ಅವನು ಕ್ರಾಂತಿಕಾರರಲ್ಲಿ ವಜ್ರ; ಆದರೆ, ಇನ್ನೂ ಸಾಣೆ ಹಿಡಿದಿರದ ವಜ್ರ ಎಂದೆನ್ನಿಸಿತು.

ಅವನದು ಉದ್ವೇಗದ ಪ್ರಯತ್ನವಲ್ಲ. ನಿರ್ದಿಷ್ಟವಾದ ಕಾರ್ಯಕ್ರಮವನ್ನು ಮುಂದುವರಿಸಿಕೊಂಡು, ಭಾರತದ ಎಲ್ಲ ಕಡೆಯ ಕ್ರಾಂತಿಕಾರರ ತಂಡಗಳನ್ನೂ ಹೊಂದಿಸಿ, ದೇಶದಾದ್ಯಂತ ಕ್ರಾಂತಿ ಹರಡುವ ವ್ಯವಸ್ಥಿತ ಯೋಜನೆಯಾಗಿತ್ತು.

ಒಂದೇ ಘಂಟೆಯೊಳಗೆ ನಮ್ಮ ಅವರ ಸ್ನೇಹ ಬೆಳೆದು ಬಲವಾಗಿತ್ತು.

ತನ್ನ ಇದುವರೆಗಿನ ಕನಸು ನನಸಾಗುವ ಕಾಲ ಹತ್ತಿರವಾಯಿತೆಂದು ಕಿಶೋರ್ ಹರ್ಷಿತನಾದ.

"ನೀವು ಇದೇ ಉದ್ಯೋಗದಲ್ಲಿ ಮುಂದುವರಿಯಬೇಕು ಕಿಶೋರ್. ನೀವೇ ನಮ್ಮ ಅಂಚೆಪೆಟ್ಟಿಗೆ. ಪರಸ್ಪರ ಸಂದೇಶ ತಿಳಿಸುವ ಸಾಧನ. ಆದರೆ, ಪ್ರಬುದ್ಧ ಕ್ರಾಂತಿಕಾರನ ಎಲ್ಲ ಎಚ್ಚರಿಕೆಯೂ ನಿಮ್ಮಲ್ಲಿರಲಿ," ಎಂದು ದತ್ ಎಚ್ಚರಿಕೆ ನೀಡಿದ. ಕಾನ್‌ಪುರದಲ್ಲಿ ಎಲ್ಲಿ ಸಂಧಿಸಬೇಕೆಂಬುದನ್ನು ತಿಳಿಸಿ ಹೇಳಿದ.

ನೂತನ ಗೆಳೆಯರಿಬ್ಬರೂ ಸ್ನೇಹಿತರಾದಷ್ಟೇ ಆಕಸ್ಮಿಕವಾಗಿ ಅಲ್ಲಿಂದ ಮರೆಯಾದರು. ಇನ್ನೂ ಎಷ್ಟೋ ವಿಚಾರಗಳನ್ನು ತಿಳಿಯಬೇಕಾಗಿತ್ತು ಎಂದು ಕಿಶೋರ್ ಬಯಸಿದ. ಆದರೂ, ಅವಸರ ಹಿತವಲ್ಲವೆಂದು ಅವನಿಗೂ ಅನಿಸಿತು.

ಹೊಸ ಹಾದಿಯ ಬಗೆಗೆ ಯೋಚಿಸಿದಷ್ಟಕ್ಕೂ ಅವನಿಗೆ ಅಜಯನ ನೆನಪಾಗುತ್ತಿತ್ತು. ಈ ಸುದ್ದಿ ಅವನಿಗೆ ತಿಳಿದರೆ ಅದೆಷ್ಟು ಆನಂದಿತನಾದಾನು ಎಂದು ಕಿಶೋರನಿಗೆ ತೋರಿ ಅವನು ಮನಸ್ಸಿನಲ್ಲೇ ನಕ್ಕ.

ಸಂಜೆ ಇಂಡಿಯಾ ಹೋಟೆಲಿನ ತನ್ನ ಕೋಣೆಯೊಳಗೆ ಕುಳಿತು ಕಿಶೋರ್ ತನ್ನ ವ್ಯಾಪಾರದ ಲೆಕ್ಕಪತ್ರಗಳನ್ನು ಪರಿಶೀಲಿಸುತ್ತಿದ್ದ. ಮರುದಿನ ಕೆಲಸ ಮಾಡಿ ಮುಂದಿನ ಊರಿಗೆ ಹೊರಡಲು ನಿಶ್ಚಯಿಸಿದ್ದ. ಆ ಬಗೆಗೆ ಸೂಚನೆ ನೀಡಿ ಕಂಪೆನಿಯ ಪತ್ರವೂ ಬಂದಿತ್ತು.

ಅಷ್ಟರಲ್ಲಿ ಯಾರೋ ಬಾಗಿಲು ತಟ್ಟಿದಂತಾಯಿತು.

ಕಿಶೋರ್ ಎದ್ದು ಹೋಗಿ ಬಾಗಿಲು ತೆರೆದ. ಯಾರೋ ಅಪರಿಚಿತರು ಬಾಗಿಲಲ್ಲಿ ನಿಂತಿದ್ದರು.

"ನೀವೇ ಏನು ಕಿಶೋರ್ ಭಾಯಿ......?"

"ಹೌದು......"

"ನಾಳೆಯೇ ಬನಾರಸಿಗೆ ಹೊರಡುತ್ತೀರೇನು ?"

"ಯಾರು ಹೇಳಿದರು ? ನೀವು ಯಾರೆಂದು ತಿಳಿಯಲಿಲ್ಲ."

"ಆಗಲೇ ತಿಳಿಯಿತು," ಎನ್ನುತ್ತ ಆ ವ್ಯಕ್ತಿ ಕೋಣೆಯೊಳಗೆ ಬಂದು ಅಲ್ಲಿದ್ದ ಮಂಚದ ಮೇಲೆ ಕುಳಿತುಕೊಂಡ.

"ತಮ್ಮನ್ನು ಹಿಂದೆ ಎಂದೂ ಕಂಡಂತಿಲ್ಲ," ಎಂದ ಕಿಶೋರ್.

"ಹಾಗಿದ್ದರೇನೇ ಸ್ನೇಹ ತುಂಬ ಬಲವಾಗುತ್ತದೆ. ಇತರರು ದೈಹಿಕ ಸಂಬಂಧವಾದರೆ, ನಮ್ಮಂತಹರದಲ್ಲ ರಕ್ತ ಸಂಬಂಧ, ರಕ್ತತರ್ಪಣ ಸಂಬಂಧ."

"ಆಗಲಿ, ಬಂದ ಕೆಲಸ......"

"ದತ್ ಅವರ ಪರಿಚಯವಿದೆಯಲ್ಲ ನಿಮಗೆ. ಅವರೇ ಕಳಿಸಿದರು," ಎಂದು ಆತ ಎದ್ದು ಬಾಗಿಲ ಬಳಿ ನಡೆದ. ಬಾಗಿಲು ಮುಚ್ಚಿ ಒಳಗಿನಿಂದ ಅಗಳಿ ಹಾಕಿ ಮತ್ತೆ ಬಂದು ಕುಳಿತ.

"ನಿಜ, ಈಗ ತಿಳಿಯಿತು ರಕ್ತಸಂಬಂಧದ ಅರ್ಥ," ಎಂದು ಕಿಶೋರ್ ನಕ್ಕ.

"ನನ್ನ ಹೆಸರು ಭವಾರಿಲಾಲ್. ಆದರೆ ನೀವು ಮಾತ್ರ ಲಾಲ್ ಎಂದಷ್ಟೇ ಕರೆದರೆ ಸಾಕು, ನಮ್ಮ ಗೆಳೆಯರೆಲ್ಲ ಹಾಗೇ ಕರೆಯುತ್ತಾರೆ," ಎಂದು ಆತ ತನ್ನ ಒಳ ಅಂಗಿಯೊಳಗಿಂದ ಕಾಗದದ ಕಟ್ಟೊಂದನ್ನು ಹೊರತೆಗೆದು ಕಿಶೋರನ ಮುಂದಿರಿಸಿದ.

"ಇದೇನಿದು ?"

"ಬನಾರಸ್‌ನಲ್ಲಿ ನೀವು ಪ್ರಹ್ಲಾದ ಹೋಟೆಲಿನಲ್ಲಿ ಇಳಿದುಕೊಳ್ಳಿ. ಅಲ್ಲಿ ಸ್ನೇಹಿತರೂ ಸಿಗುತ್ತಾರೆ. ಈ ಪತ್ರಗಳನ್ನು ಎಚ್ಚರಿಕೆಯಿಂದ, ಬನಾರಸ್‌ಗೆ ಒಯ್ಯಬೇಕು. ವಿದ್ಯಾರ್ಥಿ ಹಿಂದೀ ಸಾಹಿತ್ಯ ಸಮ್ಮೇಳನದ ಕಾರ್ಯದರ್ಶಿಗೆ ಒಪ್ಪಿಸಬೇಕು. ನೀವು ಅವರಿಗೆ ಪರಿಚಯ ತಿಳಿಸದಿದ್ದರೂ ಒಳ್ಳೆಯದೇ."

"ಹಾಗೇ ಆಗಲಿ......"

"ಇನ್ನೊಮ್ಮೆ ನೀವು ಇಲ್ಲಿ ಬಂದಾಗಲೂ ಇದೇ ಹೋಟೆಲು ಅನುಕೂಲ."

"ವ್ಯವಸ್ಥೆ ಅಷ್ಟೊಂದು ಕಳಪೆಯಲ್ಲ."

"ಅದಕ್ಕೂ ಮೇಲಾಗಿ ನಮ್ಮನ್ನು ಇಲ್ಲೇ ಸುಲಭವಾಗಿ ಕಾಣಬಹುದು."

"ಹಾಗಾದರೆ ಒಳಿತೇ ಆಯಿತು," ಎಂದ ಕಿಶೋರ್.

ಅಲ್ಲೇ ಮೇಜಿನ ಮೇಲಿದ್ದ ಸಾಬೂನಿನ ಪ್ರಚಾರ ಪತ್ರವನ್ನು ಲಾಲ್ ಕೈಗೆತ್ತಿಕೊಂಡ. ಹಾಗೇ ಅದನ್ನು ಓದಿ ನೋಡಿದ.

"ಇದು ನನ್ನ ಬಳಿ ಇದ್ದರೆ ಅನುಕೂಲ."

"ಅದರಿಂದೇನು ? ಇನ್ನೂ ಹತ್ತು ತೆಗೆದುಕೊಂಡು ಹೋಗಿ. ಅದೇನೂ ಕ್ರಾಂತಿಕಾರಿಗಳ ಕರಪತ್ರವಲ್ಲ!"

"ಅದಕ್ಕಾಗಿಯೇ ಬೇಕು, ಯಾರಾದರೂ ಪ್ರಶ್ನಿಸಿದರೆ, ಸಾಬೂನಿನ ವ್ಯಾಪಾರ ಚರ್ಚಿಸಲು ಬಂದೆ ಎಂದು ಹೇಳಬಹುದು," ಎಂದು ಲಾಲ್ ನಕ್ಕ. ಕಿಶೋರನಿಗೂ ಅವನ ಎಚ್ಚರಿಕೆ ಅರಿತು ನಗು ಬಂತು.

ಕಿಶೋರನನ್ನು ವಂದಿಸಿ ಲಾಲ್ ಹೊರಟುಹೋದ.

ದೇಶದ ಚಿಂತೆಯೊಂದೇ ಇರಿಸಿಕೊಂಡು, ತಮ್ಮ ಬಗೆಗೆ ಎಳ್ಳಷ್ಟೂ ಚಿಂತಿಸದ ಈ ತ್ಯಾಗ ಜೀವಿಗಳ ಬಗೆಗೆ ಕಿಶೋರನಿಗೆ ಹೆಮ್ಮೆ ಮೂಡಿತು. ಇಂಥವರ ಸಹವಾಸದಲ್ಲಿದ್ದರೆ ತಾನೂ ಈ ತಾಯಿ ನಾಡಿಗಾಗಿ ದುಡಿಯಬಹುದೆಂಬ ಭರವಸೆ ಬೆಳೆಯಿತು.

ಮುಂದಿನ ಪ್ರಯಾಣ ಕಾಶಿ !

ಅಲ್ಲೂ ಬಲವಾದ ಕ್ರಾಂತಿಕಾರರ ತಂಡವೇ ಇರಬೇಕು.

ಅಂತೂ ವ್ಯಾಪಾರದ ಸಂಚಾರದಲ್ಲಿ ಇಡೀ ಭಾರತದ ಭವಿತವ್ಯಕ್ಕಾಗಿ ದುಡಿಯುವ ಮಹಾ ಸೇನೆಯ ಪರಿಚಯವಾಗುತ್ತದೆ ಎಂಬ ಸಂತೋಷ ಕಿಶೋರನ ಮನದಲ್ಲಿ ತುಂಬಿತು.

ಅವನು ಹಾಗೇ ಹಾಸಿಗೆಯ ಮೇಲೊರಗಿದ. ಆದರೆ ಕುತೂಹಲ ಅವನನ್ನು ಎಚ್ಚರಿಸಿತು.

ಬಾಗಿಲೆಡೆ ನಡೆದು ಚಿಲಕ ಭದ್ರಪಡಿಸಿ ಹಿಂತಿರುಗಿದ. ಲಾಲ್ ತಂದುಕೊಟ್ಟ ಕಾಗದಗಳನ್ನು ಬಿಡಿಸಿ ಓದಿದ.

ಮೊದಲು ಕೊಂಚವೂ ಅರ್ಥವಾಗಲಿಲ್ಲ. ಎಲ್ಲ ಔಷಧಗಳ ಹೆಸರುಗಳೇ. ಮುಂದೆ ಓದಿದ.

ಫಕ್ಕನೆ ಹಾಸಿಗೆಯಿಂದ ನೆಗೆದು ಕೋಣೆಯ ಬಾಗಿಲು ಭದ್ರವಾಗಿದೆಯೇ ಎಂದು ಪರೀಕ್ಷಿಸಲು ಧಾವಿಸಿದ. ಸುತ್ತಲೂ ತಿರುಗಿ ನೋಡಿದ. ಕೋಣೆಯೊಳಗೆ ಯಾರೂ ಇಣುಕುವಂತಿರಲಿಲ್ಲ. ಅವನು ಮತ್ತೆ ಆ ಕಾಗದಗಳನ್ನು ತೆರೆದು ಓದಿದ.

ಅದರಲ್ಲಿದ್ದುದು ಬಾಂಬು ತಯಾರಿಸುವ ಬಗೆಗಿನ ಮಾಹಿತಿ.

# ೭

ಕಿಶೋರ್—

ಅವನನ್ನು ನೆನೆದಾಗಲೆಲ್ಲ ಅಜಯನ ಹೃದಯದಲ್ಲಿ ಮಧುರ ಸ್ಮೃತಿಗಳು ಹಾದು ಹೋಗುತ್ತವೆ. ಕಿಶೋರ್ ಹತ್ತಿರವಿದ್ದಾಗ ತಾನು ಕೂಡ ಏನು ಬೇಕಾದರೂ ಮಾಡಬಲ್ಲೆನೆಂಬ ಧೈರ್ಯ ಅಜಯನಿಗೆ. ಆದರೆ ಅವನಿಲ್ಲದಾಗ ಅದೇಕೋ ಒಂದು ತರಹದ ಕಂಪನ, ಭಯ.

ಸುತ್ತುಮುತ್ತಲಿನ ವಾತಾವರಣವೆಲ್ಲ ಪ್ರಕ್ಷುಬ್ಧವಾಗುತ್ತಿತ್ತು. ಶಾಲೆ ಕಾಲೇಜುಗಳಲ್ಲಿಯೂ ಉದ್ವೇಗಕಾರಕ ವಾತಾವರಣ. ಒಂದೆಡೆಗೆ ದರೋಡೆ, ದಾಳಿ. ಮತ್ತೊಂದೆಡೆಗೆ ಮತ ಪ್ರದರ್ಶನ. ದಿನ ದಿನಕ್ಕೆ ಸ್ವಾತಂತ್ರ್ಯ ಘೋಷಣೆ ಮುಗಿಲೆತ್ತರ ಮುಟ್ಟುತ್ತಿದೆ.

ಎಲ್ಲರ ಗುರಿಯೂ ಒಂದೇ ! ಆದರೆ ಮಾರ್ಗ ಭಿನ್ನ. ಯುವಕರು ತತ್‌ಕ್ಷಣ ಸ್ವಾತಂತ್ರ್ಯ ಸಾಧಿಸಬೇಕೆಂಬ ಬಿಸಿ ರಕ್ತದ ಹುಮ್ಮಸಿನವರು. ಉಳಿದವರು ಅಹಿಂಸೆಯಿಂದ, ಶಾಂತಿ, ಸತ್ಯಗಳ ಭದ್ರತಳಹದಿಯ ಮೇಲೆ ಗುರಿ ಸಾಧಿಸಬೇಕೆನ್ನುವವರು. ಗಾಂಧೀಜಿ ಸಾರಿದ್ದರು " ಸ್ವಾತಂತ್ರ್ಯಕ್ಕೆ ಎಷ್ಟು ಬೆಲೆ ಕೊಟ್ಟರೂ ಕಡಮೆ. ಅದು ಪಂಚಪ್ರಾಣ, ಜೀವದುಸಿರು. ಬದುಕಲಿಕ್ಕೆ ಮನುಷ್ಯ ಏನು ತಾನೇ ಕೊಡಲಾರ ?"

ಅವರೇ ಸಾರಿದ್ದರು :

" ಭಾರತದ ಸ್ವಾತಂತ್ರ್ಯಕ್ಕಾಗಿ ನಾನು ಬದುಕಿದ್ದೇನೆ. ಅದಕ್ಕಾಗಿ ಬೇಕಾದರೆ ಸಾಯುತ್ತೇನೆ. ಏಕೆಂದರೆ ಅದು ಸತ್ಯದ ಅಂಶ. ನಾನು ಭಾರತದಲ್ಲಿ ಹುಟ್ಟಿದೆ. ಆದರಿಂದ ಭಾರತದ ಸೇವೆ ಮಾಡಲು ನಾನು ಯೋಗ್ಯ."

ಹೌದು, ಭಾರತದ ಸ್ವಾತಂತ್ರ್ಯಕ್ಕಾಗಿಯೇ ನಾವು ಬದುಕಬೇಕು, ಬದುಕಿ ಹೋರಾಡಬೇಕು, ಎಂಬ ಭಾವ ಅಜಯನಲ್ಲಿ ಪ್ರತಿನಿತ್ಯ ಬೆಳೆಯುತ್ತಿತ್ತು. ದೇಶಕ್ಕೆ ಪಾರತಂತ್ರ್ಯದ ಸಂಕೋಲೆಯನ್ನು ತೊಡಿಸಿದ ಬ್ರಿಟಿಷರ ಮೇಲೆ ತನಗರಿಯದಂತೆಯೇ ಅವನಲ್ಲಿ ದ್ವೇಷ ಬೆಳೆಯುತ್ತಿತ್ತು.

"ನನ್ನಲ್ಲೂ ಒಂದು ರಿವಾಲ್ವರ್ ಇದ್ದಿದ್ದರೆ ಒಬ್ಬ ಬಿಳಿಯನ ಮೇಲಾದರೂ ಗುಂಡು ಹಾರಿಸುತ್ತಿದ್ದೆ," ಎಂದು ಅಜಯ ತಾಯಿಗೆ ಹೇಳುತ್ತಿದ್ದ.

"ಹುಚ್ಚು ಹುಡುಗ...ಹಾಗೆ ಇನ್ನೆಂದಾದರೂ ಅಂದೀಯ...ನಿನ್ನ ಕಥೆ ಮುಗಿದೇ ಹೋದೀತು. ನಿನಗೆ ಅವೆಲ್ಲ ಬೇಡ. ಚೆನ್ನಾಗಿ ಓದಿ ನೀನೂ ದೊಡ್ಡ ಅಧಿಕಾರಿಯಾಗು."

ಅಜಯ ಮುಂದೆ ಮಾತನಾಡಲಿಲ್ಲ. ಬೇಣಿತಾಯಿಗೆ ಮಾತ್ರ ಮನಸ್ಸಿನಲ್ಲೇ ಒಂದು ಬಗೆಯ ಕಳವಳ ಮೂಡಿತ್ತು. ಈ ಬಾಲಕ ಮುಂದೇನು ಮಾಡುತ್ತಾನೋ ಎಂಬ ಭೀತಿ. ಆದರೂ ಕಿಶೋರನು ದೂರವಾಗಿರುವುದರಿಂದ ಅಜಯ ಕ್ರಾಂತಿಯ ಬೆನ್ನು ಹಿಡಿಯಲಾರನೆಂಬ ತೃಪ್ತಿ ಅವಳಲ್ಲಿತ್ತು.

ಕಿಶೋರ್ ಅಗಲಿದ ದುಃಖ ಅಜಯನ ಹೃದಯದಲ್ಲಿ ಅಡಗಿದ್ದರೂ, ಅದು ಅವನನ್ನು ಕುಗ್ಗಿಸಿರಲಿಲ್ಲ. ತನ್ನ ಗೆಳೆಯರ ಸಂಘಟನೆಯಲ್ಲಿ ಅವನು ಪಾಲುಗೊಂಡಿದ್ದ. ಪ್ರತಿದಿನವೂ ಪತ್ರಿಕೆಗಳನ್ನು ಓದಿ, ರಾಷ್ಟ್ರೀಯ ಚಳುವಳಿಯ ವಾರ್ತೆಗಳ ಬಗೆಗೆ ಅವರು ಚರ್ಚಿಸುತ್ತಿದ್ದರು.

ಅವನ ಗೆಳೆಯರೆಲ್ಲ ಜತೆಗೂಡಿ, ಕ್ರಾಂತಿ ನಿಧಿಯನ್ನು ಕೂಡಿಸತೊಡಗಿದರು. ವ್ಯಾಯಾಮ, ಚರ್ಚೆ ; ಜತೆಗೆ ತಾವೂ ಕ್ರಾಂತಿಯ ಕಿಡಿ ಹಾರಿಸಬೇಕೆಂಬ ಬಯಕೆ ಅವರದಾಗಿತ್ತು. ಅದಕ್ಕಾಗಿ ಎಲ್ಲಿಂದಾದರೊಂದು ರಿವಾಲ್ವರ್ ಕೊಳ್ಳುವ ಉತ್ಕಟೇಚ್ಛೆ ಅವರದು. ಅದಕ್ಕಾಗಿ ತಮಗೆ ದೊರೆತ ಬಿಡಿಕಾಸನ್ನೆಲ್ಲ ಕೂಡಿ ಹಾಕುತ್ತಿದ್ದರು. ಆ ರಿವಾಲ್ವರ್ ದೊರೆತ ಬಳಿಕ, ಯಾರು ಗುಂಡು ಹಾರಿಸಬೇಕು ಎಂಬ ವಿಚಾರ ಅವರದಲ್ಲ.

ವರ್ಷದ ಪರೀಕ್ಷೆ ಸಾಗುತ್ತಿದ್ದಂತೆ ಮತ್ತೂ ಎರಡು ಸುದ್ದಿಗಳು ಅವರ ಗಮನ ಸೆಳೆದವು.

ಮಾರ್ಚಿ ೬ ರ ರಾತ್ರಿ ೧೯೨೫ ರಂದು ಪಿಲಿಬಿಟ್ ಜಿಲ್ಲೆಯ ಬಿಚ್‌ಪುರಿ ಗ್ರಾಮದಲ್ಲಿ ಡಕಾಯಿತಿ ನಡೆಯಿತು. ತೋಟಿ ಕುರ್ಮಿ ಎಂಬವನ ಮನೆಯ ಮೇಲೆ ಧಾಳಿಯಾದಾಗ ಒಬ್ಬ ಮೃತನಾದ.

ಅದೇ ತಿಂಗಳ ೨೫ ರಂದು ಸುಮಾರು ಹತ್ತು ಮಂದಿ ಶೋರತನ್ ಬನಿಯಾ ಎಂಬವನ ಮನೆಯನ್ನು ನುಗ್ಗಿ ಎರಡು ಸಾವಿರ ರೂಪಾಯಿ ಅಪಹರಿಸಿದರು. ದ್ವಾರಕಾಪುರ ಹಳ್ಳಿಯಲ್ಲಿ ನಡೆದ ಈ ಧಾಳಿಯಲ್ಲೂ ಡಕಾಯಿತರು

ಗುಂಡು ಹಾರಿಸಿದಾಗ ಒಬ್ಬ ಮಡಿದ, ಹಲವರಿಗೆ ಗಾಯಗಳಾದವು. ಡಕಾಯಿತಿ ನಡೆದಲ್ಲಿ ರಿವಾಲ್ವರ್ ಒಂದು ಪೋಲಿಸರಿಗೆ ದೊರೆಯಿತು.

ಈ ಡಕಾಯಿತಿಗಳನ್ನೆಲ್ಲ ವಿದ್ಯಾವಂತರಾದವರೇ ನಡೆಸಿರಬೇಕೆಂದು ಪೋಲಿಸ್ ಅಧಿಕಾರಿಗಳೂ ಅಭಿಪ್ರಾಯ ವ್ಯಕ್ತಪಡಿಸಿದ್ದರು.

ವಿದ್ಯಾರ್ಥಿಗಳಿಗೆ ಇಷ್ಟೇ ಗ್ರಾಸ ಸಾಕಾಗಿತ್ತು.

"ಕ್ರಾಂತಿಕಾರಿಗಳೇ ಇದನ್ನೆಲ್ಲ ಮಾಡಿರಬೇಕು," ಎಂದು ಅಜಯ ತನ್ನ ಗೆಳೆಯರ ಸಭೆಯಲ್ಲಿ ಹೇಳಿದ.

"ಆದೇಕೆ ? ಇದರಿಂದ ಸಾಮಾನ್ಯ ಜನರಿಗೆ ಕಷ್ಟವಲ್ಲವೇ ?"

"ಕ್ರಾಂತಿಯ ಕೆಲಸಕ್ಕೆ ಹಣ ಬೇಕು. ಬಾಂಬ್ ರಿವಾಲ್ವರ್‌ಗಳಿಗೆ ಹಣ ವೆಲ್ಲಿಂದ ? ಅದಕ್ಕಾಗಿ ಅವರು ಈ ರೀತಿ ಹಣ ಸಂಗ್ರಹಿಸಬಹುದು."

"ಆದರೂ ಹಿಂಸೆಯಲ್ಲವೇ ?"

"ಧನಿಕರ ಮನೆಯನ್ನೇ ಅವರು ಲೂಟಿ ಮಾಡಿದ್ದಾರೆ," ಎಂದ ಅಜಯ.

ದರೋಡೆ ಮೂಲಕ ಹಣ ಸಂಗ್ರಹ ಯುಕ್ತವೇ ಎಂಬ ಬಗೆಗೆ ಅವ ರೊಳಗೇ ಚರ್ಚೆ ನಡೆಯಿತಾದರೂ, ಅದು ಅಯುಕ್ತ ಎಂಬ ಭಾವನೆ ಬೆಳೆಯ ಲಿಲ್ಲ.

ಪರೀಕ್ಷೆಗಳು ಕಳೆದು ಬೇಸಿಗೆ ರಜೆಯೂ ಬಂತು. ಅಜಯನಿಗೆ ಈಗ ಹೊತ್ತು ಕಳೆಯುವುದೇ ಕಷ್ಟವಾಗಿತ್ತು. ದೇಶ ಸೇವೆಗಾಗಿ ತಾನೇನು ಮಾಡಬೇಕು ಅವನಿಗೆ ತಿಳಿಯಲಿಲ್ಲ. ಉತ್ಕಟ ಆಕಾಂಕ್ಷೆ, ಪ್ರಚಂಡ ಉತ್ಸಾಹ, ಹುಡುಗು ತನದ ಹುಮ್ಮಸ್ಸು ಅವನನ್ನು ಕಾಡಿಸುತ್ತಿತ್ತು.

ಬಿಡುಗಡೆಯ ಚಟುವಟಿಕೆಗಳೆಲ್ಲ ಈಗ ಮಾಯವಾಗಿದ್ದುವು. ಖಾದಿ ಚರಕಾ, ದೇಶೀಯ ವಿದ್ಯಾಶಾಲೆಗಳ ಸ್ಥಾಪನೆ ಮತ್ತಿತರ ಕಾರ್ಯಕ್ರಮಗಳಲ್ಲಿ ಕಾಂಗ್ರೆಸ್ ನಾಯಕರು ದುಡಿಯಲಾರಂಭಿಸಿದ್ದರು.

೧೯೨೦-೨೧ ರ ಸತ್ಯಾಗ್ರಹ, ಹೋರಾಟಗಳು ವಿಫಲವಾದುದರಿಂದ ಹೋರಾಡಿದವರಲ್ಲಿ ಕೆಲವು ಮಂದಿ ಕ್ರಾಂತಿಯೊಂದೇ ದಾರಿ ಎಂದು ಆ ಬಗೆಗೆ ಚಿಂತಿಸಿ ದುಡಿಯತೊಡಗಿದರು. ಹೆಚ್ಚಿನವರು ನಿರಾಶರಾಗಿ ರಾಜಕೀಯ ಭಾವನೆಯನ್ನೇ ಮರೆತು ದುಡಿಯಲು ತೊಡಗಿದರು.

ಇಂಥ ಪರ್ವಕಾಲದಲ್ಲಿ ಯಾರಿಗೆ ನಿಜವಾದ ಎಲ್ಲ ಬಗೆಯ ಸ್ವಾತಂತ್ರ್ಯ ಅಗತ್ಯವಿತ್ತೋ ಅಂಥ ಬಡ ರೈತರೂ, ಕಾರ್ಮಿಕರೂ ನಿದ್ರಾವಸ್ಥೆಯಲ್ಲೇ ಇದ್ದರು. ಎಲ್ಲವೂ ಮಧ್ಯಮ ವರ್ಗದ ಯುವ ಜನರ, ವಿದ್ಯಾರ್ಥಿಗಳ ಹೋರಾಟವಾಗಿತ್ತು. ವಿದ್ಯಾರ್ಥಿಗಳೂ ತಮ್ಮತನವನ್ನು ಮರೆತು ಸಂಘಟಿತ ರಾಗಿ ನಿಲ್ಲುವುದು ಸುಲಭವಾಗಿರಲಿಲ್ಲ.

ಕ್ರಾಂತಿಯಿರಲಿ, ಶಾಂತಿಯುತ ಹೋರಾಟವಿರಲಿ ಅದಕ್ಕಾಗಿ ಕಾರ್ಯ ಕರ್ತರು ಬೇಕು. ಸಾಧನ ಸಲಕರಣೆಗಳು ಬೇಕು. ಇವುಗಳಿಗಾಗಿ ಆರ್ಥಿಕ ಬೆಂಬಲವೂ ಬೇಕು.

ಕ್ರಾಂತಿಗಾಗಿಯೇ ತಮ್ಮ ಸರ್ವಸ್ವವನ್ನು ಅರ್ಪಿಸಿ, ಅಹರ್ನಿಶಿ ಅದ ಕ್ಕಾಗಿಯೇ ದುಡಿಯುವವರಿಗೆ ಇದೊಂದು ಸಮಸ್ಯೆ. ಜೀವನ ನಿರ್ವಹಣ, ಸಂಘಟನೆಗಾಗಿ ಸಂಚಾರ ಹಾಗೂ ಮದ್ದು ಗುಂಡುಗಳಿಗಾಗಿ ವ್ಯವಸ್ಥೆ ಮಾಡಲು ಅವರಿಗೆ ಹಣ ಅತ್ಯಗತ್ಯ. ದೇಶಾಭಿಮಾನವೇ ಇನ್ನೂ ಉದಯವಾಗುತ್ತಿರು ವಲ್ಲಿ ಉದಾರವಾಗಿ ಸಹಾಯ ಮಾಡುವ ಧನಿಕರು ದೊರೆಯುವುದೇ ಕಷ್ಟ. ಹಾಗೆ ಸಹಾಯ ಸಿಗಬೇಕಾದರೂ, ದಾನಿಗಳಿಗೆ ತಮ್ಮ ಧ್ಯೇಯಗಳನ್ನು ವಿವರಿಸಿ, ಅವರ ಮನ ಒಲಿಸಬೇಕಾಗುತ್ತದೆ. ಕ್ರಾಂತಿಕಾರಿಗಳು ಹೀಗೆ ತಮ್ಮ ಬಗೆಗೂ ತಮ್ಮ ಕಾರ್ಯದ ಬಗೆಗೂ ಎಲ್ಲವನ್ನು ಬಹಿರಂಗಪಡಿಸುವುದು ತೀರಾ ಅಪಾಯಕಾರಿಯಾಗಿತ್ತು.

ಈ ಸಮಸ್ಯೆಯ ಪರಿಹಾರ ಹೇಗೆ ?

ಇಡೀ ದೇಶದ ಬಿಡುಗಡೆಯ ಉದ್ದೇಶ ಸಾಧನೆ ಕೈಬಿಡಲು ಸಾಧ್ಯವೇ ?

ಕ್ರಾಂತಿಕಾರೀ ತಂಡದವರು ತಮಗೆ ಅಗತ್ಯವಾದ ಹಣವನ್ನು ತಾವೇ ಸಂಗ್ರಹಿಸಲು ಮುಂದಾದರು. ದರೋಡೆಯ ಮೂಲಕ ಜನತಾ ವಿರೋಧಿ ಧನಿಕರನ್ನು ಕೊಳ್ಳೆ ಹೊಡೆಯುವ ಯೋಜನೆ ಹಾಕಿಕೊಂಡರು.

ಅಜಯನಿಗಂತೂ ಇನ್ನೂ ರಾಜಕೀಯ ಮಾರ್ಗ ಕಂಡಿರಲಿಲ್ಲ. ಕಿಶೋರ್ ಬಳಿಯಲ್ಲಿದ್ದಿದ್ದರೆ ತಾನು ಈಗಾಗಲೇ ಕ್ರಾಂತಿಕಾರರ ತಂಡ ಸೇರುತ್ತಿದ್ದೆ ಎಂದು ಅವನು ಅನೇಕ ಬಾರಿ ಅಂದುಕೊಳ್ಳುತ್ತಿದ್ದ. ಆ ಬಯಕೆಯ ಜತೆಗೇ ತನ್ನ ಮನೆ, ತನ್ನ ತಾಯಿ ಇವರ ನೆನಪಾಗಿ ದೂರದ ಎಲ್ಲಿಗೋ ಹೋಗುವ ಉತ್ಸಾಹ ತಣ್ಣಗಾಗುತ್ತಿತ್ತು.

ಅದೊಂದು ದಿನ ಕಿಶೋರ್ ಆಕಸ್ಮಿಕವಾಗಿ ವಿಜಯನ ಮನೆಗೆ ಬಂದ. ಅವನನ್ನು ಕಂಡು ಬೇಣಿತಾಯಿಯ ಕಣ್ಣುಗಳು ಸಂತೋಷದಿಂದ ಹನಿಗೂಡಿದವು.

"ನಿನ್ನನ್ನು ನೋಡದೆ ವರ್ಷಗಳೇ ಸಂದ ಹಾಗಿದೆ ಕಿಶೋರ್. ವ್ಯಾಪಾರ ಚೆನ್ನಾಗಿದೆಯೇ ?"

"ತಮ್ಮ ಆಶೀರ್ವಾದದಿಂದ ಎಲ್ಲವೂ ಸರಿಯಾಗಿಯೇ ಸಾಗಿದೆ. ನನಗೆ ಹೊಸ ಹಾದಿ ಕಂಡಿದೆ."

ಹಾಗೆಂದವನೇ ಒಮ್ಮೆಲೆ ಎಚ್ಚರವಾದವನಂತೆ ಅವುಡು ಕಚ್ಚಿದ. ಅಜಯ ಆ ಆಕಸ್ಮಿಕದಿಂದ ದಂಗುಬಡಿದವನಂತೆ ಮೌನವಾಗಿ ಅವನೆಡೆ ಬಂದು ಅವನನ್ನು ಅಪ್ಪಿಕೊಂಡ.

"ನಮ್ಮನ್ನೆಲ್ಲ ಮರೆತೇ ಬಿಟ್ಟೆಯೋ ಎಂದುಕೊಂಡಿದ್ದೆ"...ಎಂದು ಮೆಲುದನಿಯಲ್ಲಿ ನುಡಿದ ಅಜಯ.

"ಅದು ಈ ಜನ್ಮದಲ್ಲಿ ಸಾಧ್ಯವಾಗದು."

ಅವರಿಬ್ಬರೂ ಹೊರಗಡೆ ಅಂಗಳಕ್ಕೆ ಬಂದು ಕುಳಿತುಕೊಂಡರು.

"ಇಡೀ ದೇಶವೇ ತಣ್ಣಗಾಗಿದೆ ಕಿಶೋರ್. ನೀನಿಲ್ಲದೆ ನಾವೆಲ್ಲರೂ ತಣ್ಣಗಾಗಿದ್ದೇವೆ."

"ಹಾಗೆ ಕಂಡರೂ ದೇಶದಲ್ಲಿ ಕ್ರಾಂತಿಯ ಕಿಡಿ ಆರಿದಿಲ್ಲ. ಇಡೀ ದೇಶವನ್ನೇ ಬಿಡುಗಡೆ ಮಾಡುವ ಪ್ರಚಂಡ ಪ್ರಯತ್ನ ನಡೆಯುತ್ತಿದೆ. ಅದು ಒಮ್ಮೆಂದೊಮ್ಮೆ ಅಗ್ನಿಪರ್ವತದಂತೆ ಸಿಡಿದು ಈ ಬ್ರಿಟಿಷ್ ಸಾಮ್ರಾಜ್ಯವನ್ನೇ ಕೊಚ್ಚಿಕೊಂಡು ಹೋಗಬಹುದು."

"ಅಷ್ಟೊಂದು ಪ್ರಯತ್ನ ನಡೆದಿದೆಯೇ ? ನಿನಗೆ ಹೇಗೆ ತಿಳಿಯಿತು ?"

"ನನ್ನ ಸಂಚಾರದಲ್ಲಿ ನಾನು ಅದನ್ನು ಕಂಡಿದ್ದೇನೆ. ಅದರಿಂದಲೇ ಇಷ್ಟೊಂದು ಉತ್ಸಾಹದಿಂದ ಕೆಲಸ ಮಾಡುತ್ತಿದ್ದೇನೆ."

"ಸಾಬೂನಿನ ವ್ಯಾಪಾರ ಬಿಟ್ಟುಬಿಟ್ಟೆಯೇನು ?"

"ಅದನ್ನೇಕೆ ಬಿಡಲಿ ? ಅದರಿಂದ ಜೀವನ ಸಾಗುತ್ತದೆ. ದೇಶಭಕ್ತರನ್ನು ಭೇಟಿಯಾಗುವ ಅವಕಾಶವೂ ಸಿಗುತ್ತದೆ."

"ನೀನೇ ಪುಣ್ಯವಂತ......"

"ಏನು ಪುಣ್ಯವೋ ತಿಳಿಯದು. ಈ ನಮ್ಮ ಬಲಿದಾನಕ್ಕೆ ಅಗತ್ಯವಾದ ನೆರವು ಮಾತ್ರ ಸಾಲದು. ಜನ ಬೆಂಬಲವಿಲ್ಲ. ದೊರೆತಷ್ಟು ಜನರಲ್ಲೂ ಐಕ್ಯ ಇಲ್ಲ."

"ನಾನು ನಿನ್ನೊಂದಿಗೆ ಬಂದು ಬಿಡುತ್ತೇನೆ."

"ಅದಕ್ಕಿನ್ನೂ ಕಾಲ ಬಂದಿಲ್ಲ ಅಜಯ. ನಮ್ಮ ಹೋರಾಟ ಒಂದೆಡೆ ಸಾಗಿದರೆ ಸಾಲದು. ಇಡೀ ದೇಶದಾದ್ಯಂತ ಹರಡಬೇಕು. ಎಲ್ಲೆಡೆಗೂ ಒಂದೇ ಬಾರಿ ಕ್ರಾಂತಿಯ ಕಿಡಿ ಹಾರಬೇಕು. ಆಗ ಮಾತ್ರವೇ ಗೆಲುವು."

"ಆ ದಿನ ಎಷ್ಟು ದೂರವೋ ?"

"ಅದೂ ಹತ್ತಿರ ಬರುತ್ತದೆ. ಜ್ವಾಲಾಮುಖಿ ಯಾವಾಗ ಸಿಡಿಯುತ್ತದೆ ಎಂದು ಹೇಳಲು ಬರುವುದೇನು ? ಮುಖ್ಯ ಜನ ಸಹಾಯ, ಧನ ಸಹಾಯ, ದೇಶಕ್ಕಾಗಿ ಪ್ರಾಣಾರ್ಪಣ ಮಾಡಬಲ್ಲ ತರುಣರ ನೆರವು ಬೇಕು."

"ನೀನು ಬಹಳ ತಿಳಿದುಕೊಂಡಿದ್ದೀಯ, ಕಿಶೋರ್."

"ಅದೇನೂ ಸಾಲದು, ನನ್ನದು ತೀರಾ ಅಲ್ಪ ಸೇವೆ. ಈಗ ನಮಗೆಲ್ಲ ದಾರಿ ತೋರುವ ಒಬ್ಬ ಮಹಾ ವೀರನಿದ್ದಾನೆ. ಅಂಥವರು ಹತ್ತಾರು ಮಂದಿ ಬೇಕು."

"ಅದಾರು......?"

"ಚಂದ್ರಶೇಖರ್ ಆಜಾದ್......"

"ರಾಶ್‌ಬಿಹಾರಿ ಘೋಷ್‌ರವರ ಗೆಳೆಯ......ಪೋಲಿಸರಿಗೆ ಸಿಗದೆ ಮರೆಯಾಗಿದ್ದಾರಂತೆ......ಅವರೇ ಏನು ?"

"ಅವರೇ ? ಬ್ರಿಟಿಷ್ ಸರಕಾರಕ್ಕೆ ಮಣ್ಣು ತಿನ್ನಿಸುತ್ತಿರುವ ವೀರ."

"ನೀನು ಅವರನ್ನು ನೋಡಿದ್ದೀಯಾ......"

"ನೋಡಿದ್ದೇನೆ, ಅಜಯ. ಆ ಗಾಂಭೀರ್ಯ, ಆ ಶಿಸ್ತು, ಆ ಸೌಜನ್ಯ, ದೇಶಪ್ರೇಮ......ನಾನು ಇನ್ನು ಯಾರಲ್ಲೂ ಕಂಡಿಲ್ಲ."

"ನನಗಿನ್ನೂ ಆ ಪುಣ್ಯವಿಲ್ಲ......"

"ನಿರಾಶನಾಗಬೇಡ ಅಜಯ. ಇಂದಿನ ದಿನಗಳಲ್ಲಿ ನಾವು ಯಾರೂ ಯಾರನ್ನೂ ನಂಬುವಂತಿಲ್ಲ. ಯಾರೊಡನೆಯೂ ನಮಗೆ ತಿಳಿದ ವಿಷಯ

ಹೇಳುವಂತಿಲ್ಲ. ನೀನು ಈ ವಿಚಾರ, ನನ್ನ ವಿಷಯ ಯಾರಿಗೂ ಹೇಳ ಕೂಡದು. ತಾಯಿಗೂ ಕೂಡಾ......"

ಬೇಣಿತಾಯಿ ಅಜಯನನ್ನು ಕೂಗಿದಳು. ಕಿಶೋರನೊಂದಿಗೆ ಆತ ಒಳನಡೆದ. ಉಪಾಹಾರ ತಿನ್ನುತ್ತ ಅವರಿಬ್ಬರೂ ಕುಳಿತರು.

"ಇಷ್ಟು ದೊಡ್ಡವನಾಗಿದ್ದೀಯಾ ಕಿಶೋರ್. ಒಂದು ಮದುವೆ ಮಾಡಿ ಕೊಂಡು ಹಾಯಾಗಿ ಇರಬಾರದೆ?"

"ಅದಕ್ಕಿನ್ನೂ ಕಾಲವಿದೆ ತಾಯಿ......"

"ಮುದುಕನಾಗಬೇಕೇನು?"

"ಆದರೂ ಆಗಲಿ. ಈ ದೇಶಕ್ಕೆ ಸ್ವಾತಂತ್ರ್ಯ ದೊರೆತ ಬಳಿಕ...... ಮದುವೆ......"

"ಸರಿ...ಸರಿ...ನಿನಗೂ ಈ ಹುಚ್ಚು ಹಿಡಿದಿದೆಯೇನು? ಹ್ಞಾ...... ನೆನಪಾಯಿತು ನೋಡು. ಈ ನಮ್ಮ ಅಜಯನಿಗೂ ಹುಚ್ಚು ಹಿಡಿದಿದೆ."

"ಅದೇನು......?"

"ಕೆಲವು ತಿಂಗಳಾಗಿರಬಹುದೇನೋ? ಅದೆಲ್ಲೋ ದರೋಡೆ ನಡೆಯಿತು. ಅದನ್ನೋದಿ ಅದೆಲ್ಲ ಕ್ರಾಂತಿಕಾರರ ಕೆಲಸ ಎಂದು ಗಡಬಡಿಸತೊಡಗಿದ."

"ಅವನ ಮಾತಿನಲ್ಲಿ ಸತ್ಯವಿದ್ದರೂ ಇರಬಹುದು."

"ನಾನೇ ಸರಿ......ಅಲ್ಲವೇ ಕಿಶೋರ್?" ಎಂದು ಅಜಯ ಹುಮ್ಮಸ್ಸಿನಿಂದ ಸೆಟೆದು ಕುಳಿತ.

"ಹಾಗೇ ಅಂದುಕೋ. ಆದರೆ, ಎಲ್ಲ ದರೋಡೆಗಳನ್ನೂ ಕ್ರಾಂತಿಕಾರರ ತಲೆ ಮೇಲೆ ಹೊರಿಸಬೇಡ, ತಿಳಿಯಿತೇ?" ಎಂದು ಕಿಶೋರ್ ಮಾತು ಬದಲಿಸಿದ. ಅವನ ಮದುವೆಯ ಮಾತು ಅಲ್ಲೇ ನಿಂತಿತು. ಬೇಣಿತಾಯಿಗೂ ಅದು ಮರವೆಯಾಯಿತು.

"ಇನ್ನೆಷ್ಟು ದಿನ ಇಲ್ಲೇ ಇರುತ್ತೀಯಾ ಕಿಶೋರ್? ಇಲ್ಲಿದ್ದಾಗ ನಮ್ಮಲ್ಲೇ ಇರಬಾರದೇನು?"

"ಅದಕ್ಕೇನು? ಆದರೆ, ನಾನು ಪೇಟೆ ಸುತ್ತಾಡುವವನು. ಮನೆಗೆ ಬರೋದಕ್ಕೆ ಹೊತ್ತು-ಗೊತ್ತು ಇಲ್ಲ. ಇನ್ನೂ ನಾಲ್ಕೆಂಟು ದಿನ ಇರ ಬೇಕಾದೀತು."

" ಎಷ್ಟು ಹೊತ್ತಿಗೆ ಬಂದರೂ ಇದು ನಿನ್ನ ಮನೆ ತಾನೆ ? "

" ಅದನ್ನು ನಾನು ಮರೆಯಲಾರೆ ತಾಯಿ. ಆಗಾಗ ಬರುತ್ತೇನೆ. ಹೋಟೆಲಿನಲ್ಲಿ ಕೋಣೆ ಗೊತ್ತುಮಾಡಿಕೊಂಡಿದ್ದೇನೆ. ಸ್ನೇಹಿತರನ್ನು ಭೇಟಿಯಾಗಲು ಅಲ್ಲಿ ಅನುಕೂಲವಾಗಿರುತ್ತದೆ."

" ಯಾಕೆ ? ಅಣ್ಣನನ್ನು ನೋಡಿಲ್ಲವೇ ? "

" ಆ ಮನೆ ಎಂದೋ ಕಳೆದುಹೋಗಿದೆ ತಾಯಿ. ಆದರೂ, ಅವನ ಪುಟಾಣಿ ಮಕ್ಕಳನ್ನು ನೋಡಲೆಂದು ನಿನ್ನೆ ಹೋಗಿದ್ದೆ. ಅವುಗಳಿಗಷ್ಟು ಮಿಠಾಯಿ ಕೊಟ್ಟು ಮುದ್ದಾಡಿಸಿ ಬಂದೆ," ಎಂದು ಭಾರವಾದ ಧ್ವನಿಯಿಂದ ಉತ್ತರಿಸಿದ ಕಿಶೋರ್. ತಾನು ಆ ಬಗೆಗೆ ಕೇಳಿದುದೇ ತಪ್ಪಾಯಿತೆಂದು ಬೇಣಿಗೂ ಅನಿಸಿತು.

ಕಿಶೋರ್ ಎದ್ದು ನಿಂತು ಹೊರಡಲು ಅನುವಾದ.

" ಮುಂದಿನ ಪ್ರಯಾಣ ಎಲ್ಲಿಗೆ ? "

ಕುತೂಹಲಿಯಾಗಿ ಅಜಯ ಕೇಳಿದ.

" ಅದನ್ನು ಹೇಳಲೂ ಬರುವಂತಿಲ್ಲ. ಹಾಗಿದೆ ನನ್ನ ಉದ್ಯೋಗ. ಕಂಪನಿಯವರು ಎಲ್ಲಿಗೆ ಹೋಗೆಂದರೆ ಅಲ್ಲಿಗೆ ಹೋಗಬೇಕು. ಊರೂರು ಸುತ್ತಬೇಕು. ಸಾಬೂನು ವಿಕ್ರಯಿಸಬೇಕು."

" ಒಳ್ಳೇ ಸೋಪು ಹಿಡಿದುಕೊಂಡೆ."

" ಹೌದಪ್ಪ ಅಜಯ. ಅದರಿಂದ ದೇಶದ ಕೊಳೆಯನ್ನು ತೆಗೆಯುತ್ತೇನೆ. ದೇಹದ ಕೊಳೆಯನ್ನೂ ಕಳೆಯುತ್ತೇನೆ."

" ನನಗೂ ಅಂಥ ಸೋಪು ಸಿಕ್ಕಿದ್ದರೆ......! "

" ಸಿಗುತ್ತೆ ; ಅವಸರ ಬೇಡ."

" ಅಂದರೆ ನೀನೆ ಏಜಂಟಾಗಬೇಕು...," ಎಂದು ಅಜಯ ಮಾರ್ಮಿಕವಾಗಿ ನಕ್ಕ.

" ತುಂಟ......ನೀನು ಮಾತನಾಡಲು ಕಲಿತಿದ್ದೀಯ," ಎಂದು ಕಿಶೋರ್ ಅವರನ್ನು ಬೀಳ್ಕೊಟ್ಟು ಹೊರಟ.

# ೮

ಆಗಸ್ಟ್—೧೯೨೫.

ಕಕೋರಿ ಮತ್ತು ಲಕ್ನೋಗಳ ನಡುವೆ, ಅಲಮ್‌ನಗರ ರೈಲ್ವೆಸ್ಟೇಷನ್‌ಗೆ ಹತ್ತಿರದಲ್ಲಿ......

ಎರಡನೇ ದರ್ಜೆಯ ರೈಲು ಗಾಡಿಯಲ್ಲಿ ಪ್ರಯಾಣಿಸುತ್ತಿದ್ದ ಎರಡು–ಮೂರು ಮಂದಿ ಎಚ್ಚರಿಕೆಯ ಸರಪಳಿ ಎಳೆದರು. ರೈಲು ನಿಂತಿತು.

ಕೂಡಲೇ ಬೇರೆ ಬೇರೆ ಗಾಡಿಗಳಲ್ಲಿದ್ದ ಹಲವಾರು ಮಂದಿ ರೈಲಿ ನಿಂದಿಳಿದು ಬ್ರೇಕ್‌ವ್ಯಾನ್ ಬಳಿಗೆ ಧಾವಿಸಿದರು. ಕಾವಲುಗಾರನನ್ನು ಹೊಡೆದು ಬೀಳಿಸಿದರು, ಸುಮ್ಮನಿರದಿದ್ದರೆ ಕೊಂದು ಹಾಕುತ್ತೇವೆ ಎಂದು 'ಗಾರ್ಡ್'ಗೆ ಎಚ್ಚರಿಕೆ ನೀಡಿದರು. ರೈಲಿನ ಇಕ್ಕಡೆಗೆ ನಿಂತವರಲ್ಲಿ ಇಬ್ಬರು ಗುಂಡು ಹಾರಿಸಿ ಎಲ್ಲರನ್ನು ಹೆದರಿಸಿ ದೂರವಿರಿಸಿದರು. ಇತರರು ವ್ಯಾನ್‌ನೊಳಗಿದ್ದ ಹಣದ ಟ್ರೆಜರಿಯನ್ನು ಎತ್ತಿ ಹೊರಗೆ ತಂದರು.

ರಾಮ್‌ಪ್ರಸಾದ್ ಮತ್ತು ಅವರ ಗೆಳೆಯರಿಂದ ತಿಜೋರಿ ಒಡೆಯು ವುದಾಗಲಿಲ್ಲ. ಆಗ ಕಾವಲಾಗಿ ನಿಂತಿದ್ದ ಭೀಮಕಾಯನಾದ ಅಶ್‌ಫಖುಲ್ಲಾ ತನ್ನ ರಿವಾಲ್ವರನ್ನು ರಾಮ್‌ಪ್ರಸಾದ್ ಕೈಗಿತ್ತು ತಾನೇ ತಿಜೋರಿಯನ್ನು ಒಡೆಯಲು ನಿಂತ. ತನ್ನ ಅದ್ಭುತ ಶಕ್ತಿಯಿಂದ ಅದನ್ನೊಡೆದ.

ಚಾಕು, ಕತ್ತಿ, ಸುತ್ತಿಗೆ ರಿವಾಲ್ವರ್‌ಗಳನ್ನು ಹೊಂದಿದ್ದ ಅವರು ೩,೫೮೧ ರೂಪಾಯಿ ಮೂರಾಣೆ ನಗದು ಮತ್ತು ಸಾವಿರ ರೂಪಾಯಿಗಳ ನೋಟಿನ ಕಂತೆ ಎತ್ತಿಕೊಂಡು ಓಡಿ ಹೋದರು. ಪೋಲಿಸರು ಅತ್ತ ಬಂದಾಗ ಅಲ್ಲಿ ಯಾರೂ ಇರಲಿಲ್ಲ. ಯಾವುದೇ ಕುರುಹೂ ದೊರೆಯ ಲಿಲ್ಲ.

ರೈಲ್ವೆ ಪೋಲಿಸರು ಈ ಬಗೆಗೆ ಶೋಧನೆ ನಡೆಸಲು ಮುಂದಾದರು. ಆ ಶಾಖೆಯಲ್ಲಿದ್ದ ಗೂಢಚಾರ ಅಧಿಕಾರಿ ಹಾರ್ಟನ್ ರಾಜಕೀಯ ಚಳು ವಳಿಗಾರರ ಬಗೆಗೆ ಪರಿಚಯವಿದ್ದವನು. ಹಿಂದೆ ನಡೆದ ಮೂರು ದರೋಡೆ

ಗಳ ಬಗೆಗೂ ಪತ್ತೆಯಾಗಿರಲಿಲ್ಲ. ಹಾರ್ಟನ್, ಈ ನಾಲ್ಕು ದರೋಡೆಗಳನ್ನು ಜತೆಗೂಡಿಸಿ ಶೋಧನೆ ಆರಂಭಿಸಿದ.

ಆದರೂ ಅವನಿಗೆ ಮುಂದಿನ ದಾರಿ ಕಾಣಲಿಲ್ಲ.

ಅಷ್ಟರಲ್ಲಿ ಕ್ರಾಂತಿಕಾರಿ ಜೋಗೇಶ್‌ಚಂದ್ರ ಚಟರ್ಜಿ ಕಲ್ಕತ್ತೆಯಲ್ಲಿ ಅಕ್ಟೋಬರ್ ತಿಂಗಳ ಹದಿನೆಂಟರಂದು ಪೋಲಿಸರ ಕೈಗೆ ಸಿಕ್ಕಿಬಿದ್ದ. ಅವನ ಬಳಿ ಇದ್ದ ಕಾಗದ ಪತ್ರಗಳಿಂದ ಕ್ರಾಂತಿಕಾರರು ನಡೆಸಿದ ಸಮಾಲೋಚನೆಯ ಬಗೆಗೆ ತಿಳಿದು ಬಂತು.

ಅತ್ಯಂತ ಸಾಹಸದ ಈ ದರೋಡೆ ಇಡೀ ದೇಶವನ್ನೇ ಅಚ್ಚರಿಗೊಳಿಸಿತು. ಇದು ರಾಜಕೀಯ ಸಾಹಸಿಗಳ ಕೃತಿ ಎಂದು ತಿಳಿದಾಗಲಂತೂ ಯುವ ಜನಾಂಗವೇ ಉತ್ಸಾಹದಿಂದ ನಲಿಯಿತು.

ಕ್ರಾಂತಿಕಾರಿ ಯೋಜನೆಯ ನೂರಾರು ತಂಡಗಳಿಗೆ ತಮ್ಮ ಪ್ರಯತ್ನ ಮುಂದುವರಿಯುತ್ತಿದೆ ಎಂಬ ನಂಬಿಕೆ ಮೂಡಿತು.

ಜನ ಕೋಟಿಯ ಪ್ರತಿಕ್ರಿಯೆ ಬಲವಾದಷ್ಟು ಬ್ರಿಟಿಷ್ ಸರಕಾರದ ಭೀತಿಯೂ ಅಧಿಕವಾಯಿತು. ತನ್ನ ಕೊನೆ ಹತ್ತಿರವಾಗುತ್ತಿದೆ ಎಂಬ ಹೆದರಿಕೆ ಮೂಡಿತು. ಈ ದರೋಡೆಯನ್ನು ಹೇಗಾದರೂ ರಾಜಕೀಯ ಕ್ರಾಂತಿಯೆಂದು ಸಿದ್ಧಮಾಡಿ, ಕ್ರಾಂತಿಕಾರರ ಹುಟ್ಟಡಗಿಸಬೇಕೆಂದು ಸರ್ಕಾರ ನಿರ್ಧರಿಸಿತು.

ಅದಾಗಲೇ ಕ್ರಾಂತಿಕಾರರು ಉತ್ತರ ಭಾರತದಲ್ಲಿ ಕಾಶ್ಮೀರದಿಂದ ಬಂಗಾಲದವರೆಗೂ ಸಂಘಟಿತರಾಗಿ, ತಮ್ಮ ಶಕ್ತಿ ಬೆಳೆಸಿಕೊಳ್ಳುತ್ತಿದ್ದರು. ಜೋಗೇಶ್ ಚಂದ್ರ ಚಟರ್ಜಿ ಕ್ರಾಂತಿಕಾರೀ ಸಂಘಟನೆಯನ್ನು ಉತ್ತರ ಪ್ರದೇಶದೆಡೆ ತಂದನು. ಅಲಹಾಬಾದ್‌ನಲ್ಲಿ ಅವನಿಗೆ ರಾಶ್‌ಬಿಹಾರಿ ಬೋಸ್‌ನ ಗೆಳೆಯ ಸಚೀಂದ್ರನಾಥ್ ಸನ್ಯಾಲ್‌ನ ಸ್ನೇಹವಾಯಿತು. ಬನ್‌ವರಿಲಾಲ್ ಎಂಬವನೂ ಜೊತೆಗೂಡಿದ.

ಸತೀಶ್ ಚಂದ್ರ ಸಿಂಹನ ಜೊತೆಗೂಡಿ ಜೋಗೇಶ್ ಬನಾರಸ್‌ಗೆ ತೆರಳಿ ಅಲ್ಲಿ ಸಂಘಟನೆ ನಡೆಸಿದರು. ಕಾಶಿ ವಿದ್ಯಾಪೀಠದಲ್ಲಿ ಸರಕಾರ ನಿಷೇಧಿಸಿದ ಅನೇಕ ಗ್ರಂಥಗಳಿದ್ದವು. ಅಲ್ಲಿನ ಕೆಲವು ಶಿಕ್ಷಕರೂ ಕ್ರಾಂತಿಕಾರಿಗಳಿಗೆ ಬೆಂಬಲಿಗರಾದರು.

ಕಾನ್‌ಪುರದಲ್ಲಿ ರಾಜೇಂದ್ರನಾಥ್ ಲಹಿರಿ ನಾಯಕತ್ವ ವಹಿಸಿ ದುಡಿದರು. ಶಹಜಾನ್ ಪುರದಲ್ಲಿ ರಾಮಪ್ರಸಾದ್‌ರವರು ಕ್ರಾಂತಿಯ ವ್ಯವಸ್ಥೆ ನಡೆಸಿದರು. ಸಂಯುಕ್ತ ಪ್ರಾಂತ್ಯದ ಪ್ರತಿಯೊಂದು ಜಿಲ್ಲೆಯಲ್ಲೂ ಕ್ರಾಂತಿಕಾರೀ ತಂಡ ಗಳನ್ನು ಸ್ಥಾಪಿಸುವ ವ್ಯವಸ್ಥೆ ನಡೆಯಿತು.

ಬಂಗಾಲದಿಂದ ಹರಡುತ್ತಿದ್ದ ಈ ಕ್ರಾಂತಿಕಾರೀ ಚಳುವಳಿಯ ಸಂಘ ಟನೆಯನ್ನು ಚಂದ್ರಶೇಖರ್ ಅಜಾದ್ ನಡೆಸುತ್ತಿದ್ದ. ಅವನನ್ನು ದಸ್ತಗಿರಿ ಮಾಡುವ ಸರ್ಕಾರದ ಪ್ರಯತ್ನ ಸಫಲವಾಗಿರಲಿಲ್ಲ. ಅಂತರಗಂಗೆಯಾಗಿ, ಲಾವಾರಸದಂತೆ, ಕ್ರಾಂತಿಕಾರೀ ಚಟುವಟಿಕೆಗಳು ನಡೆಯುತ್ತಿದ್ದುವು. ಅದರ ವ್ಯವಸ್ಥೆಗಾಗಿ ಅಗತ್ಯವಾದ ಧನ ಸಂಗ್ರಹಿಸಲು ಕ್ರಾಂತಿಕಾರರು ದರೋಡೆ ನಡೆಸಿದ್ದರು.

ಕಕೋರಿ, ದರೋಡೆ ಕ್ರಾಂತಿಕಾರರ ವ್ಯವಸ್ಥಿತ ಸಂಘಟನೆಗೇ ತುತ್ತಾ ಯಿತು.

ದೇಶಕ್ಕೆ ಸರಿಯಾದ ಮಾರ್ಗದರ್ಶನ ನೀಡಲೂ ಆಗ ಕಾಂಗ್ರೆಸ್ಸಿಗೆ ಶಕ್ತಿ ಇರಲಿಲ್ಲ. ಸ್ವರಾಜ್ಯ ವಾದಿಗಳು ಹಾಗೂ ಇದ್ದಂತೆ ಇರಲಿ ಎಂಬವರು—ಹೀಗೆ ಎರಡು ಗುಂಪುಗಳಾಗಿ ಕಾಂಗ್ರೆಸ್ ದುರ್ಬಲವಾಗಿತ್ತು. ಗಾಂಧೀಜಿ ರಚನಾತ್ಮಕ ಹಾದಿಯಲ್ಲಿ ನಡೆದರು, ಸುಭಾಷ್‌ಚಂದ್ರಬೋಸ್‌ರವರು ಬರ್ಮಾದ ಮಾಂಡಲೇ ಸೆರೆಮನೆಯಲ್ಲಿದ್ದರು. ದೇಶಬಂಧು ಚಿತ್ತರಂಜನ್‌ದಾಸ್‌ರವರು ನಿಧನ ರಾಗಿದ್ದರು. ಜವಾಹರಲಾಲ್ ನೆಹರೂ ಅವರು ಯೂರೋಪಿನ ಸಂಚಾರದಲ್ಲಿದ್ದರು. ಸ್ವರಾಜ್ಯ ವಾದಿಗಳ ಪಕ್ಷವೂ ಕೇವಲ ಹೆಸರಿಗಷ್ಟೇ ಇತ್ತು. ಇಡೀ ದೇಶವೇ ದಾರಿ ಕಾಣದೆ ಕತ್ತಲಲ್ಲಿ ಚಡಪಡಿಸುತ್ತಿತ್ತು.

ಸೆಪ್ಟೆಂಬರ್ ೨೦ ರಂದು ಈ ದರೋಡೆಗಳ ಸಂಬಂಧದಲ್ಲಿ ಹತ್ತು ಮಂದಿಯ ದಸ್ತಗಿರಿಯಾಯಿತು. ಕೆಲವು ದಿನಗಳ ನಂತರ ಇನ್ನೂ ಒಂಭತ್ತು ಮಂದಿ ಸೆರೆಸಿಕ್ಕರು. ಒಟ್ಟು ೨೧ ಮಂದಿಯ ಮೇಲೆ ಮೊಕದ್ದಮೆ ಹೂಡಲಾ ಯಿತು. ಆಪಾದಿತರಲ್ಲಿ ನಾಲ್ಕು ಮಂದಿ ಆಗಲೇ ಸೆರೆಯಲ್ಲಿದ್ದರು.

ಹೆಮಿಲ್ಟನ್‌ರ ಮುಂದೆ ಸೆಶನ್ಸ್‌ನಲ್ಲಿ ವಿಚಾರಣೆ ಆರಂಭವಾಯಿತು. ಆಪಾದಿತರ ಪರವಾಗಿ ಪಂಡಿತ್ ಗೋವಿಂದ್ ವಲ್ಲಭ ಪಂತ್ ಅವರು ವಾದಿಸಿ ದರು.

ವಿಚಾರಣೆಯ ವರದಿಯು ದೇಶದ ಯುವಜನತೆಗೆ ಕ್ರಾಂತಿಯ ಶಿಕ್ಷಣ ನೀಡಿತು. ಅಸಹಕಾರ ಚಳುವಳಿಯ ವಿಫಲತೆಯಿಂದ ನಿರಾಶರಾಗಿ ಸುಪ್ತ ರಾಗಿದ್ದ ಜನಕೋಟಿಯನ್ನು ಜಾಗೃತಗೊಳಿಸಿತು.

ಹೆಮಿಲ್ಟನ್‌ರ ಕೋರ್ಟು ಏಳು ಸುತ್ತಿನ ಕೋಟೆಯಂತೆ ಇತ್ತು. ಮಿಲಿಟರಿ, ಪೋಲಿಸರು, ಗೂಢಚಾರರು ಅಸಂಖ್ಯಾತ ಮಂದಿ ಬಲ ವಾದ ಕಾವಲು ನಡೆಸಿದ್ದರು. ಜನತೆಗೆ ಆ ಕಡೆ ಸುಳಿಯುವುದೂ ಸಾಧ್ಯ ವಿರಲಿಲ್ಲ.

ಸಿ. ಐ. ಡಿ. ಶಾಖೆಯ ಹಾರ್ಟನ್ ಸಾಧ್ಯವಾದ ಎಲ್ಲ ಆಧಾರಗಳನ್ನು ಸಿದ್ಧಗೊಳಿಸಿದ್ದರು. ಕ್ರಾಂತಿಕಾರರದು ಹಿಂದೂಸ್ಥಾನ್ ರಿಪಬ್ಲಿಕನ್ ಅಸೋಸಿ ಯೇಷನ್ ಅದರ ಧ್ಯೇಯ ಸಾರುವ "ಹಳದಿ ಕೈಪಿಡಿ" ಯಲ್ಲಿ ಕೇಂದ್ರ ಸಮಿ ತಿಯು ಸಂಘದ ಆಡಳಿತೆ ನಡೆಸಬೇಕೆಂದೂ, ಅದಕ್ಕೆ ಎಲ್ಲಾ ಪ್ರಾಂತ್ಯಗಳ ನಿಕಟ ಸಂಪರ್ಕವಿರಬೇಕೆಂದೂ, ಸೂಚಿಸಲಾಗಿತ್ತು. ಪ್ರಾಂತ್ಯದಲ್ಲೂ ಪ್ರಾಂತ್ಯ ಸಮಿತಿಯಿದ್ದು, ಸಾಮಾನ್ಯವಾಗಿ ಐದು ಮಂದಿ ಸದಸ್ಯರಿರಬೇಕು. ಅವರು ಐದು ಮಂದಿ ಪ್ರಚಾರ, ಸದಸ್ಯ ಸಂಗ್ರಹ, ನಿಧಿ ಶೇಖರಣೆ, ಕ್ರಾಂತಿ ಮತ್ತು ಶಸ್ತ್ರಾಸ್ತ್ರ ಹಾಗೂ ಮದ್ದು ಗುಂಡುಗಳ ಸಂಗ್ರಹದ ಶಾಖೆ ಗಳನ್ನು ನೋಡಿಕೊಳ್ಳಬೇಕಾಗಿತ್ತು. ಪಾರ್ಟಿಯು ಸಹಸ್ರಾರು ಮಂದಿ ಸದಸ್ಯ ರನ್ನು ಸಂಗ್ರಹಿಸಿತ್ತು.

ಕಲ್‌ಕತ್ತೆಯಲ್ಲಿ ಬಾಂಬ್ ತಯಾರಿಸುವ ಕಾರ್ಖಾನೆಯಿತ್ತು.

ವಿಚಾರಣೆ ಆರಂಭವಾಯಿತು.

ಹಲವಾರು ದಿನಗಳ ಕಾಲ ಪೋಲಿಸರು ಆಪಾದಿತರನ್ನು ವಿವಿಧ ಪೋಲಿಸ್ ಸ್ಟೇಷನ್‌ಗಳಲ್ಲಿರಿಸಿ, ಚಿತ್ರಹಿಂಸೆಗೆ ಗುರಿಪಡಿಸಿದರು. ಅವರಿಂದ ವಿಷಯ ಸಂಗ್ರಹಿಸಲು ಯತ್ನಿಸಿದರು. ಈ ಹಿಂಸೆಯನ್ನು ಸಹಿಸಲಾರದೆ, ಇಂದುಭೂಷಣ ಮಿತ್ರ ಮತ್ತು ಬನ್‌ವರೀ ಲಾಲ್ ಅವರು ಪೋಲಿಸರ ಕಡೆಗೆ ಸಾಕ್ಷಿ ಹೇಳಲು ಸಮ್ಮತಿಸಿದರು. ಬನ್‌ವರೀ ಲಾಲ್ ನಡೆದುದೆಲ್ಲವನ್ನು ಹೇಳಿ ಪೋಲಿಸರಿಗೆ ನೆರವಾದರೂ ಮುಂದೆ ಕೋರ್ಟಿನಲ್ಲಿ ತಿರುಗಿನಿಂತ.

ತಮ್ಮ ಗುರುತು ಸಿಗದಿರಲಿ ಎಂದು ಮುಖವನ್ನು ಮುಚ್ಚಿಕೊಂಡು, ಕ್ರಾಂತಿಕಾರರು ದರೋಡೆ ನಡೆಸಿದ್ದರು.

ನೂರಾರು ಮಂದಿ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದರೂ, ಗುಂಡಿನ ಸದ್ದು ಕೇಳಿದ ಅವರು, ಹೊರಗಡೆ ತಲೆಹಾಕಿರಲಿಲ್ಲ. ದರೋಡೆಗಾರರನ್ನು ನೋಡಿದವರಿಗೂ ಅವರಾರೆಂದು ತಿಳಿದಿರಲಿಲ್ಲ.

ಆದರೂ, ಪೋಲಿಸರು ಎಲ್ಲ ತಂತ್ರ, ಹಿಂಸೆಗಳನ್ನು ನಡೆಸಿ ಆರೋಪಿಗಳನ್ನು ಗುರುತು ಹಿಡಿದು ಸಾಕ್ಷಿ ನುಡಿಯುಬಲ್ಲವರನ್ನು ತರಬೇತಿಗೊಳಿಸಿದ್ದರು. ಆಪಾದಿತರನ್ನು ಆ ಸಾಕ್ಷಿಗಳಿಗೆ ನಿತ್ಯವೂ ತೋರಿಸಿ ಹೇಳಿ, ಶಿಕ್ಷಣ ನೀಡಿದ್ದರು.

ಬನಾರಸ್ ಕ್ರಾಂತಿಯ ಅನಂತರದಲ್ಲಿ ಸಂಯುಕ್ತ ಪ್ರಾಂತ್ಯ ಕ್ರಾಂತಿಕಾರೀ ಚಟುವಟಿಕೆಗಳಿಂದ ದೂರವಾಗಿತ್ತು. ಅದನ್ನು ನಡೆಸಿದ ರಾಶ್‌ಬಿಹಾರಿ ಬೋಸ್ ಮತ್ತು ಅವರ ಬಂಗಾಳಿ ಸಹಚರರೆಲ್ಲ ಸೋತರು. ಆದರೆ, ಈಗ ಈ ಬಂಗಾಳಿ ಕ್ರಾಂತಿಕಾರರು ಸಂಯುಕ್ತ ಪ್ರಾಂತ್ಯ ಮತ್ತು ಪಂಜಾಬ್‌ನೊಡನೆ ಹೊಂದಾಣಿಕೆ ನಡೆಸಲು ಮುಂದಾಗಿದ್ದಾರೆ. ಈ ಕ್ರಾಂತಿಯನ್ನೀಗ ಸದೆ ಬಡಿಯಲಾಗಿದೆ. ಎಂದು ಸರ್ಕಾರೀ ಪ್ರಾಸಿಕ್ಯೂಟರ್ ಪಂಡಿತ್ ಜಗತ್ ನಾರಾಯಣ್‌ರವರು ಉದ್ವೇಗದಿಂದ ವಾದಿಸಿ, ಆರೋಪಗಳನ್ನು ಮಂಡಿಸಿದರು.

ಪಂಡಿತ ಗೋವಿಂದ ವಲ್ಲಭ ಪಂತ್‌ರವರು ಆಪಾದನೆಗಳನ್ನು ತುಂಡು ತುಂಡಾಗಿ ಕತ್ತರಿಸಿ ಹುಡಿಗೂಡಿದರು. ಆಪಾದಿತರು ಬರೆದರೆಂದು ಹೇಳಲಾದ ಪತ್ರಗಳ ಮೂಲ ಪ್ರತಿಯೊಂದೂ ಈ ಸರ್ಕಾರಕ್ಕೆ ದೊರೆತಿಲ್ಲ. ಎಲ್ಲವೂ ನಕಲುಗಳೇ. ಗುಪ್ತಚಾರ ದಳದವರ ಅದ್ಭುತ ವಿಚಾರಧಾರೆಯನ್ನೂ ಭಾವನಾ ಭವ್ಯತೆಯನ್ನೂ ಈ ಪತ್ರಗಳು ಸಾರುತ್ತವೆ. ಅಲ್ಲದೆ ಅದು ಆಪಾದಿತರ ಆಪಾದನೆಯನ್ನು ಸಿದ್ಧಪಡಿಸಿಕೊಡುವುದಿಲ್ಲ.

ವಿವಿಧ ಸಾಕ್ಷಿಗಳು ಆರೋಪಿಗಳನ್ನು ಗುರುತಿಸಿದ ನಾಟಕವನ್ನು ಪಂತ್‌ರವರು ಮೂದಲಿಸಿ, ಪರಿಹಾಸ್ಯ ಮಾಡಿದರು. ಜನರು ದಿನನಿತ್ಯ ಇತರರನ್ನು ಇಣಿಕಿ, ಹಣಿಕಿ, ದಿಟ್ಟಿಸಿ ನೋಡುತ್ತಲೇ ಇದ್ದಾರೆ. ಮುಂದೆ ಎಂದಾದರೂ ಹೀಗೆ ಗುರುತು ಹಿಡಿಯಬೇಕಾದಾಗ ಅದು ಅಗತ್ಯ ಎಂಬ ನೀತಿಯಿಂದ ನಮ್ಮ ಜನರು ಬಾಳುತ್ತಿದ್ದಾರೋ ಎಂಬ ಸಂದೇಹ ಬರುತ್ತಿದೆ. ಇಲ್ಲವಾದರೆ, ಮುಸುಕು ಹಾಕಿಕೊಂಡಿದ್ದರೆನ್ನಲಾದ ಆರೋಪಿಗಳ ಗುರುತು ಹಿಡಿಯುವ ಈ ಸಾಕ್ಷಿಗಳಿಗೆ ದಿವ್ಯದೃಷ್ಟಿಯೇ ಇರಬೇಕು ಎಂದು ಪರಿಹಾಸ್ಯ ಮಾಡುತ್ತ

ಮುಖ ಮುಚ್ಚಿದ ವ್ಯಕ್ತಿಯನ್ನು ಯಾವುದೇ ಹಳ್ಳಿಯವನು ಒಂದು ವರ್ಷದ ಅನಂತರ ಗುರುತು ಹಿಡಿಯುವುದು ಸಾಧ್ಯವೇ? ಎಂದು ಮೂದಲಿಸಿದರು. ಪಂತ್ ಅವರೊಂದಿಗೆ ಚಂದ್ರಭಾನು ಗುಪ್ತರವರೂ ಅಪರಾಧಿಗಳ ಪರ ವಾಗಿ ವಾದಿಸಿದರು.

ವಿಶೇಷ ಸೆಷನ್ಸ್ ನ್ಯಾಯಾಧೀಶರ ಕೋರ್ಟಿನಲ್ಲಿ ೧೯೨೬ ರ ಮೇ ತಿಂಗಳ ೩ ರಂದು ವಿಚಾರಣೆ ಆರಂಭವಾಗಿ ೧೯೨೭ ರ ಫೆಬ್ರವರಿ ೧೨ ರವರೆಗೂ ನಡೆ ಯಿತು.

ವಿಚಾರಣೆಯ ಅವಧಿಯಲ್ಲಿ ದಾಮೋದರ್ ಸ್ವರೂಪ್ ಸೇತ್ ತೀವ್ರ ಕಾಹಿಲೆಗೊಳಗಾಗಿದ್ದು, ಮುಂದೆ ಜಾಮೀನು ಮೇಲೆ ಬಿಡುಗಡೆಯಾದರು. ಅವರ ವಿಚಾರಣೆ ಸಾಧ್ಯವಾಗಲಿಲ್ಲ. ಚಂದ್ರಶೇಖರ್ ಆಜಾದ್ ಪೋಲೀಸರ ಕೈಗೆ ಸಿಗಲೇ ಇಲ್ಲ. ತಲೆ ಮರೆಸಿಕೊಂಡಿದ್ದ ಇನ್ನಿಬ್ಬರು ಆಪಾದಿತರನ್ನು ಆ ಬಳಿಕ ಹಿಡಿದು, ಪ್ರತ್ಯೇಕ ವಿಚಾರಣೆ ನಡೆಸಲಾಯಿತು.

ಅಸೆಸರರು ತೀರ್ಮಾನ ಕೊಡುವಲ್ಲಿ ಗೊಂದಲಕ್ಕೆ ಒಳಗಾದರು. ಆರೋಪಿಗಳು ಸರ್ಕಾರದ ವಿರುದ್ಧ ಬಂಡಾಯ ಹೂಡಿದರೆಂದು ಹೇಳಿದರೂ, ಯಾರೂ ನಿಜವಾದ ಅಪರಾಧಿಗಳನ್ನು ತಿಳಿಸಲಾಗಲಿಲ್ಲ. ಹೆಚ್ಚಿನವರು, ರಾಜೇಂದ್ರನಾಥ್ ಲಹಿರಿ, ಮನ್ಮಥನಾಥ ಗುಪ್ತ ಮತ್ತು ರಾಮ್‌ಪ್ರಸಾದ್ ಮಾತ್ರವೇ ಅಪರಾಧಿಗಳೆಂದರು.

ದರೋಡೆ ವಿಚಾರದಲ್ಲಂತೂ ಯಾರೊಬ್ಬರೂ ಆರೋಪಿಗಳಲ್ಲವೆಂದು ಅಸೆಸರ್‌ಗಳು ಖಚಿತವಾಗಿ ಹೇಳಿದರು.

ಆದರೆ, ಸೆಶನ್ಸ್ ನ್ಯಾಯಾಧೀಶ ಹ್ಯಾಮಿಲ್ಟನ್ ತಾನೇ ಪ್ರಾಸಿಕ್ಯೂಷನ್‌ನ ಹೊಣೆಗಾರಿಕೆಯನ್ನು ಹೊತ್ತು, ತೀರ್ಮಾನ ನೀಡಿದರು. ರಾಜೇಂದ್ರನಾಥ್ ಲಹಿರಿ, ರೋಷನ್‌ಸಿಂಗ್ ಮತ್ತು ರಾಮ್‌ಪ್ರಸಾದರಿಗೆ ಮರಣ ದಂಡನೆ ವಿಧಿಸಿದರು. ಇತರರಿಗೆ ೫ ವರ್ಷದಿಂದ ಜೀವಾವಧಿ ಶಿಕ್ಷೆ ವರೆಗೆ ಶಿಕ್ಷೆ ವಿಧಿಸ ಲಾಯಿತು. ಸಚೀಂದ್ರನಾಥ ಬಿಸ್ವಾಸ್ ಮತ್ತು ಹರ್‌ಗೋವಿಂದಕೌರ್ ಬಿಡುಗಡೆಯಾಯಿತು.

ಮತ್ತೊಮ್ಮೆ ಸಾಮ್ರಾಜ್ಯಶಾಹಿ ರಕ್ತದಾಹ ಪ್ರಕಟವಾಯಿತು.

ಮೂವರು ತರುಣರು ಮರಣದಂಡನೆಗೆ ಗುರಿಯಾದರು.

ಇಡೀ ದೇಶವೇ ರೊಚ್ಚಿಗೆದ್ದು ಪ್ರತಿಭಟಿಸಿತು. ಈ ಅನೀತಿಯುತ ದಬ್ಬಾಳಿಕೆಯನ್ನು ಗಾಂಧೀಜಿ ತೀವ್ರವಾಗಿ ಖಂಡಿಸಿದರು.

ಆದರೆ, ಹೈಕೋರ್ಟಿಗೆ ಮಾಡಿದ ಅಪೀಲೂ ಫಲ ತರಲಿಲ್ಲ. ಗವರ್ನರ್ ಜನರಲ್ ಲಾರ್ಡ್ ಇರ್ವಿನ್‌ರವರಿಗೆ ಮಾಡಿಕೊಂಡ ಕ್ಷಮಾದಾನದ ಮನವಿಗೂ ಮಾನ್ಯತೆ ದೊರೆಯಲಿಲ್ಲ. ಈ ಹಾದಿಯಲ್ಲಿ ಸರ್ ತೇಜ್‌ಬಹದ್ದೂರ್ ಸಪ್ರು ಅವರು ಎಲ್ಲ ಪ್ರಯತ್ನಗಳನ್ನು ನಡೆಸಿದರು.

ಅದೊಂದು ದಿನ ಮುಂಜಾನೆ......

ಮಾತೃಭೂಮಿಯ ಬಿಡುಗಡೆಗಾಗಿ ಸರ್ವಸ್ವವನ್ನು ತ್ಯಾಗಮಾಡಿದ ತಪ್ಪಿಗಾಗಿ ಮೂವರು ವೀರಪುಂಗವರು ನೇಣುಗಂಬವನ್ನೇರಿದರು.

ಮತ್ತೊಮ್ಮೆ ಕ್ರಾಂತಿಯ ಧಾವಾನಲಕ್ಕೆ ತಡೆಯಾಯಿತು.

೬

ದೇಶದ ರಾಜಕೀಯ ರಂಗದಲ್ಲಿ ನಡೆಯುತ್ತಿದ್ದ ಪ್ರತಿಯೊಂದು ಚಟುವಟಿಕೆಯೂ ಅಜಯನ ಉತ್ಸಾಹವನ್ನು ಹೆಚ್ಚಿಸಿ ಆಸಕ್ತಿ ಕೆರಳಿಸುತ್ತಿತ್ತು.

ಕಿಶೋರನ ಸುಳಿವಿಲ್ಲದೆ ಆಗಲೇ ಆರೇಳು ತಿಂಗಳುಗಳಾಗಿದ್ದುವು. ಅವನ ಪತ್ರಗಳೂ ಬರುತ್ತಿರಲಿಲ್ಲ. ದರೋಡೆಗಳ ಸುದ್ದಿ ಬಂದಾಗಲೆಲ್ಲ, ಬಾಂಬು ಹಾರಿದಾಗಲೆಲ್ಲ, ಅವನಿಗೆ ಕಿಶೋರನ ನೆನಪಾಗುತ್ತಿತ್ತು.

ವಿದ್ಯಾರ್ಥಿಗಳ ತಂಡದಲ್ಲೀಗ ಎಂಟು ಮಂದಿ ಇದ್ದರು. ಆದರೆ, ಮಧ್ಯಮ ವರ್ಗದ ಜನರ ಮನೋಧರ್ಮ ಅವರಲ್ಲಿ ಬೆಳೆದಿತ್ತು. ಒಬ್ಬೊಬ್ಬನದೂ ಒಂದೊಂದು ಬಗೆಯ ಚಿಂತೆ, ಯೋಚನೆ, ಅಭಿಪ್ರಾಯ. ಎಲ್ಲರೂ ತಮ್ಮ ತಂದೆ–ತಾಯಿ, ಬಂಧು–ಬಳಗದ ಪ್ರಭಾವಕ್ಕೆ ಒಳಗಾದವರು. ತಮ್ಮ ಉಡಿಗೆ ತೊಡಿಗೆ, ಊಟ ವಸತಿಗಳ ಬಗೆಗೆ ತೀವ್ರವಾಗಿ ಚಿಂತಿಸುವವರು.

ಒಮ್ಮೆ ದೇಶಕ್ಕಾಗಿ ಸರ್ವಸ್ವವನ್ನೂ ಧಾರೆ ಎರೆದು ಪ್ರಾಣಾರ್ಪಣೆ ಮಾಡುವ ನಿರ್ಧಾರ ಮೂಡಿದೊಡನೆಯೇ ಮತ್ತೊಮ್ಮೆ ತಮ್ಮ ಊಟ ವಸತಿಗಳ ನೆನಪಾಗಿ ಕುಗ್ಗುವವರು.

ಗಾಂಧೀಜಿ, ಯಂಗ್ ಇಂಡಿಯಾ ಪತ್ರಿಕೆಯಲ್ಲಿ ಬರೆಯುತ್ತಿದ್ದ ಲೇಖನಗಳು ಕೆಲವರ ಮೇಲೆ ಪರಿಣಾಮ ಬೀರಿದುವು. ಅಹಿಂಸಾತ್ಮಕವಾದ ಹಾದಿಯಲ್ಲಿ, ನಿರ್ಭಯತೆಯಿಂದ ಮುನ್ನಡೆಯಬೇಕು ಎಂಬ ಅವರ ವಾದಗಳಿಗೆ ತಲೆದೂಗುವವರೂ ಇದ್ದರು. ಒಡನೆಯೇ, ಶೀಘ್ರವಾಗಿ ಫಲ ನಿರೀಕ್ಷಿಸುವ ಅವರ ಯುವಚೇತನ ಅವರನ್ನು ಕ್ರಾಂತಿಯ ಕಡೆ ತಿರುಗಿಸುತ್ತಿತ್ತು.

ಹೈಸ್ಕೂಲು ವಿದ್ಯಾಭ್ಯಾಸವನ್ನು ಪೂರೈಸಿದ ಅಜಯ ಮುಂದೇನು ಮಾಡಲಿ ಎಂದು ಚಿಂತಿಸತೊಡಗಿದ.

ನೌಕರಿ ಹಿಡಿಯುವಂತೆ ಸೂಚಿಸಿ ಅವನ ಹಿರಿಯಣ್ಣ ಕಾನ್‌ಪುರದಿಂದ ಪತ್ರ ಬರೆದಿದ್ದ. ಅಲ್ಲಿ ನೌಕರಿ ಕೊಡಿಸುವದಾಗಿಯೂ ಹೇಳಿದ್ದ. ಕಾಲೇಜಿಗೆ ಸೇರಿ ಇನ್ನೂ ಓದೋಣ ಎಂಬ ಬಯಕೆ ಅಜಯನಲ್ಲಿತ್ತು. ವಿದ್ಯಾರ್ಥಿಯಾಗಿದ್ದು

ಕೊಂಡಷ್ಟೂ ದಿನ ಕ್ರಾಂತಿಕಾರೀ ಚಟುವಟಿಕೆಗಳಲ್ಲಿ ಸುಲಭವಾಗಿ ಭಾಗವಹಿಸ ಬಹುದು ಎಂಬುದು ಅವನ ಯೋಜನೆ.

ಮುಂದೇನು ಮಾಡಲಿ ಎಂದು ಚಿಂತಿಸುತ್ತಿದ್ದಂತೆ, ಆಗಲೇ ಅವನ ತಾಯಿಯನ್ನು ಪೀಡಿಸುತ್ತಿದ್ದ ಕಾಹಿಲೆ ಉಲ್ಬಣಾವಸ್ಥೆಗೆ ಬಂತು. ಬೇಣಿತಾಯಿ ಹಾಸಿಗೆ ಹಿಡಿದಳು. ಮನೆ ಖರ್ಚಿಗಾಗಿ ಜಮೀನಿನಿಂದ ದೊರೆಯುತ್ತಿದ್ದ ಅಲ್ಪ ಹಣವೂ ಸಾಲದಾಯಿತು. ಅಣ್ಣ ಸಹಾಯ ನೀಡಲು ನಿರಾಕರಿಸಿದ.

ಅಜಯನ ಚಿಂತೆ ಬೆಳೆಯಿತು.

ಅವನ ತಾಯಿಯ ಆರೈಕೆ ನೋಡಿಕೊಂಡು, ದೊರೆತ ಬಿಡುವಿನ ಸಮಯದಲ್ಲಿ ಗೆಳೆಯರನ್ನು ಭೇಟಿಯಾಗಬೇಕಾಗಿತ್ತು. ಅವನಿಗೀಗ ಬಿಡುವಿಲ್ಲ ವೆಂದೋ ಏನೋ ಕ್ರಾಂತಿಕಾರೀ ಕ್ಷೇತ್ರದಲ್ಲಿ ನುಗ್ಗಲು ಕೊಂಚ ದಾರಿಯೂ ಕಂಡುಬಂತು.

ಅದೊಂದು ದಿನ ಜಸವಂತ ಅಜಯನ ಮನೆಗೆ ಬಂದ. ಅಜಯ ಆಗತಾನೇ ಅಡುಗೆ ಮಾಡಿ, ತಾಯಿಗೆ ಉಣಬಡಿಸಿ, ಪುಸ್ತಕ ಓದುತ್ತ ಕುಳಿತಿದ್ದ.

ಇಬ್ಬರೂ ಮನೆಯ ಹೊರ ಜಗುಲಿಗೆ ಬಂದು ಕುಳಿತರು. ಅನಾರೋಗ್ಯ ದಿಂದಿರುವ ತಾಯಿಗೆ ತನ್ನ ಕ್ರಾಂತಿಕಾರೀ ಯೋಜನೆಗಳ ಬಗೆಗೆ ಏನೂ ತಿಳಿಯ ದಂತೆ ಅಜಯ ವರ್ತಿಸುತ್ತಿದ್ದ.

" ಇದುವರೆಗೂ ನಾನು ನಿನಗೆ ಹೇಳಿರಲಿಲ್ಲ–ಅಜಯ. ಸಕಾಲ ಒದಗಿ ಬರಲಿ ಎಂದು ಸುಮ್ಮನಿದ್ದೆ. ನಾನು ಬಹಳ ದೂರ ಸಾಗಿದ್ದೇನೆ, ಕ್ರಾಂತಿ ಕಾರಿಗಳ ತಂಡ ರೂಪಿಸಿದ್ದೇನೆ."

ಅಜಯನಿಗೆ ತೀರಾ ಆಶ್ಚರ್ಯವಾಯಿತು. ಗಾಂಧೀಜಿಯ ಅಭಿಪ್ರಾಯ ವನ್ನು ಸದಾ ಸಮರ್ಥಿಸುತ್ತಿದ್ದವನು ಜಸವಂತ. ಹಿಂಸೆಯಲ್ಲಿ ಅವನಿಗೆ ನಂಬಿಕೆ ಇದ್ದಿತಾದರೂ ಅದು ಫಲ ನೀಡುವ ಬಗೆಗೆ ಭರವಸೆ ಇರಲಿಲ್ಲ. ಇಂತಹವನು ಕ್ರಾಂತಿಕಾರೀ ಪಕ್ಷ ಸಂಘಟಿಸುವುದು ಸಾಧ್ಯವೇ ?

ಜಸವಂತನ ಮಾತು ಕೇಳಿ ಅಜಯನ ದೇಹದಲ್ಲಿ ವಿದ್ಯುತ್ ಸಂಚಾರ ವಾದಂತಾಯಿತು. ಎಲ್ಲವನ್ನು ಕೇಳಬೇಕು, ಬೇಗನೇ ತಿಳಿಯಬೇಕು, ಎಂಬ

ಕುತೂಹಲ ಕೆರಳಿತು. ಜಸವಂತ ಶಾಂತವಾಗಿ, ನಿಧಾನವಾಗಿ ನಡೆದುದೆಲ್ಲವನ್ನೂ ವಿವರಿಸಿದ.

"ಪಂಡಿತ್ ಇಂದ್ರಪಾಲ್‌ರವರ ಮನೆಯಲ್ಲಿ ನಾವು ಕೆಲವರು ಸೇರಿದ್ದೆವು. ಅಲ್ಲೇ ವಿಚಾರ ಚರ್ಚೆಯಾಯಿತು. ಕ್ರಾಂತಿಯೇ ದೇಶದ ಬಿಡುಗಡೆಗೆ ಹಾದಿ ಎಂದು ತೀರ್ಮಾನವಾಯಿತು."

"ಅದಕ್ಕೆ ನೀನು ಒಪ್ಪಿದೆಯೇನು ?"

"ನನ್ನ ವಿಚಾರ ಬೇರೆ. ಆದರೆ, ಅಹಿಂಸಾತ್ಮಕವಾದ ಚಳುವಳಿ ಸಫಲವಾಗಬೇಕಾದರೆ, ನಿರ್ದಿಷ್ಟ ಹಂತದ ಕ್ರಾಂತಿಕಾರಿ ಚಟುವಟಿಕೆಗಳು ಬೇಕು."

"ಅಂದರೆ, ನೀನೂ ಭಾಗವಹಿಸುತ್ತೀಯಾ ?"

"ನಾನು ಅದನ್ನು ಈಗಲೇ ಹೇಳಲಾರೆ. ನಿಮ್ಮೆಲ್ಲರ ಕೆಲಸದಲ್ಲಿ ನೆರವಾಗುತ್ತೇನೆ. ಪೂರ್ಣವಾಗಿ ಜತೆ ಸೇರಲು ಕೆಲವಾರು ತೊಡಕುಗಳಿವೆ."

"ಮನೆಯವರು......?"

"ಅಂತಹದೇನೂ ಇಲ್ಲ. ನನ್ನ ತಾಯಿ ಮಾತ್ರ. ಆಕೆ ನೊಂದುಕೊಳ್ಳುತ್ತಾಳೆ. ನಾನು ಕ್ರಾಂತಿಕಾರಿಯಾಗಿದ್ದೇನೆ ಎಂದು ತಿಳಿದರೆ ಅವಳ ಪ್ರಾಣ ಹಾರಿ ಹೋದೀತು."

"ನನ್ನ ಇಂದಿನ ಕತೆಯೂ ಹಾಗೇ ಇದೆ."

"ಆದರೂ ನೀನು ಕ್ರಾಂತಿಯಲ್ಲಿ ಪೂರ್ಣ ನಂಬಿಕೆ ಇರಿಸಿದವನು. ತುಂಬ ಧೈರ್ಯಶಾಲಿ......"

"ನೀನೇನೂ ಅಂಜುಬುರುಕನಲ್ಲವಷ್ಟೇ!" ಎಂದು ಅಜಯ ನಕ್ಕ.

"ಅಂಜುವವರಿಗೆ, ಅಳುಕುವವರಿಗೆ ದೇಶದ ಯೋಚನೆಯೇ ಬರುವುದಿಲ್ಲ. ಅವರು ಎಷ್ಟೇ ವರ್ಷ ಜೇಲಿನಲ್ಲಿದ್ದು ಹಿಂತಿರುಗಿದರೂ, ದೇಶವನ್ನು ಮರೆತು ಜನತೆಗೆ ದ್ರೋಹ ಬಗೆದೇ ಬಗೆಯುತ್ತಾರೆ."

"ಅಂದ ಮೇಲೆ ನೀನೇಕೆ ಆ ಗುಪ್ತ ಸಭೆಯಲ್ಲಿ ಭಾಗವಹಿಸಿದೆ ?"

"ಒಂದು ಕ್ರಾಂತಿಯು ದೇಶಕ್ಕೆ ನೀಡಬಲ್ಲ ಅದ್ಭುತವಾದ ನವಚೇತನ. ಎರಡನೆಯದು ನೀನು. ನಿನಗೆ ಈ ವಿಚಾರದಲ್ಲಿ ತೀವ್ರ ಆಸಕ್ತಿ ಇದೆ ಎಂಬುದರಿಂದ."

ಮುಂದೆ ಜಸವಂತ ಮಾತನಾಡಲಿಲ್ಲ, ಕ್ರಾಂತಿಕಾರೀ ತಂಡದ ಬಗೆಗೆ ಹೆಚ್ಚಿಗೆ ಹೇಳಲೂ ಇಲ್ಲ. ಎಲ್ಲವನ್ನೂ ನೀನೇ ನೋಡು, ಎಂದು ನುಡಿದು ಸುಮ್ಮನಾದ.

ಅಜಯನ ಸಂತೋಷಕ್ಕೆ ಪಾರವೇ ಇಲ್ಲ. ಆಗಲೇ ತಾನು ಬಾಂಬು ತಯಾರಿಸಿ, ಅದನ್ನೆಸೆದವನಂತೆ ಹೆಮ್ಮೆಯಿಂದ ಉಬ್ಬಿಹೋದ. ಭಾರತ ಮಾತೆಯನ್ನು ಬಂಧಿಸಿದ ಸಂಕೋಲೆಗಳು ಒಂದೊಂದಾಗಿ ತನ್ನ ಬಾಂಬುಗಳಿಂದ ಕಳಚಿ ಬಿದ್ದಂತೆ ಕನಸು ಕಂಡ.

ಜಸವಂತನು ಹೊರಟುಹೋಗಿ ಬಹಳ ಹೊತ್ತಾದರೂ, ಗೋಡೆಗೆ ಒರಗಿ ಕುಳಿತಿದ್ದ ಅಜಯನಿಗೆ ಎದ್ದೇಳಲೂ ಆಗಲಿಲ್ಲ. ಅಲ್ಲೇ ಕುಳಿತು ಏನೇನೋ ಯೋಚಿಸತೊಡಗಿದ್ದ. ಕ್ರಾಂತಿಕಾರರ ಜೀವನ ಹೇಗಿರುತ್ತದೆ, ಪೋಲೀಸರ ಕಣ್ಣಿಗೆ ಬೀಳದಂತೆ ಹೇಗೆ ದುಡಿಯುತ್ತಾರೆ ಎಂಬುದನ್ನೆಲ್ಲ ತಾನಾಗಿಯೇ ಊಹಿಸಲು ಪ್ರಯತ್ನಿಸಿದ.

ಬೇಣಿತಾಯಿ ಕರೆದಾಗಲೇ ಅವನಿಗೆ ಎಚ್ಚರವಾದುದು.

ಯಂತ್ರದಂತೆ ಮನೆಯ ಕೆಲಸ ಮಾಡಿದ. ಗೆಳೆಯರನ್ನು ಕಾಣಲೆಂದು ಇಸ್ಲಾಮಿಯಾ ಕಾಲೇಜಿನ ಆವರಣಕ್ಕೆ ನಡೆದ. ಖಲಸಾ ಹೈಸ್ಕೂಲಿನೆಡೆ ಬಂದ. ಹಲವಾರು ಗೆಳೆಯರೊಡನೆ ಮಾತುಕತೆ ನಡೆಸಿದ. ಉತ್ಸಾಹದಿಂದ ಉಬ್ಬಿದ. ಆದರೂ, ಜಸವಂತ ಹೇಳಿದ ಸುದ್ದಿ ಅವನ ತಲೆಯಲ್ಲಿ ಗುಂಯ್‌ಗುಡುತ್ತಲೇ ಇತ್ತು.

ಮನೆಗೆ ಬಂದೊಡನೆಯೇ ಅವನ ಉತ್ಸಾಹಕ್ಕೆ ನೀರೆರೆದಂತಾಯಿತು.

ತನ್ನ ರೋಗದ ಬಗೆಗೆ ಮಗನಿಗೆ ಏನೇನೂ ತಿಳಿಸದೆ ನೋವಿನಿಂದ ಬೇಣಿತಾಯಿ ನರಳುತ್ತಲೇ ಬಂದವಳು. ನೋವು ಅಧಿಕವಾಗಿ, ತೀರಾ ನಿಶ್ಶಕ್ತಳಾದ ಬಳಿಕವೇ ಅವಳು ಹಾಸಿಗೆ ಹಿಡಿದಿದ್ದಳು. ಆಗಲೇ ತಾಯಿಯ ತೀವ್ರವಾದ ರೋಗದ ಅರಿವು ಅಜಯನಿಗಾದುದು.

ಇಂದು ನೋವು ತೀವ್ರವಾಗಿತ್ತು. ಅವಳ ಸ್ಥಿತಿಯೇ ಚಿಂತಾಜನಕವೆಂಬಂತೆ ತೋರಿ ಬರುತ್ತಿತ್ತು. ಅಜಯ ವೈದ್ಯರಲ್ಲಿಗೆ ಓಡಿದ. ಔಷಧ ತಂದು ಕುಡಿಸಿ, ಅವಳ ಹಾಸಿಗೆ ಬಳಿಯಲ್ಲೇ ಕುಳಿತು ತಾನೂ ದುಃಖಿಸಿದ.

ಮಹಾಮೇರುವನ್ನೇರಿದ್ದ ಅವನ ಉತ್ಸಾಹ, ಆನಂದಗಳು ಕೆಳಗೆ ಜಾರುತ್ತಿದ್ದುದು ಅವನಿಗೆ ಗೋಚರವಾಯಿತು.

ಇದೇಕೆ ಹೀಗೆ ?

ಮುಂದಿನ ತನ್ನ ಜೀವನದ ಹೋರಾಟವೂ ಹೀಗೆಯೇ ಆಗಬಹುದೇ ? ಫಲವನ್ನು ಎತ್ತಿಕೊಳ್ಳಬೇಕು ಎನ್ನುವಾಗಲೇ ಅದು ಮರೆಯಾದೀತೇ ?

ಆದರೂ ಅಜಯ ನಿರಾಶಾವಾದಿಯಾಗಲು ಸಿದ್ಧನಿರಲಿಲ್ಲ. ಈ ತಾಯಿಯ ಸೇವೆ ನನ್ನ ಕರ್ತವ್ಯ, ಭಾರತ ಮಾತೆಯ ಸೇವೆ ನನ್ನ ಗುರಿ, ಎಂದುಕೊಂಡು ಕಣ್ಣು ಮುಚ್ಚಿ ಕುಳಿತ. ನಿದ್ದೆ ಅವನನ್ನು ಆವರಿಸಿತು. ಅಲ್ಲೇ ಉರುಳಿಕೊಂಡ.

ಮುಂಜಾನೆ ಬೇಣಿತಾಯಿಯ ಜ್ವರ ಕೊಂಚ ಕಡಿಮೆಯಾಗಿತ್ತು. ಆಕೆ ಕಣ್ಣು ತೆರೆದು ಮಾತನಾಡಲು ತೊಡಗಿದಳು. ದಿನ ಕಳೆದಂತೆ ಬೆಳೆದು ರಾತ್ರಿ ವಿಪರೀತವಾಗಿ ಹೆಚ್ಚುತ್ತಿದ್ದ ನೋವು ಕೊಂಚ ಇಳಿಮುಖವಾಗಿತ್ತು.

ಕಳೆದುಹೋದ ಉತ್ಸಾಹವನ್ನು ಮತ್ತೆ ತಂದುಕೊಂಡು ಅಜಯ ಮನೆ ಕೆಲಸ ಮಾಡಿ, ತಾಯಿಗೆ ಔಷಧ ಕುಡಿಸಿದ."

ಮಧ್ಯಾಹ್ನ ಮೂರು ಗಂಟೆಗೇ ಜಸವಂತ ಅಜಯನ ಮನೆಗೆ ಬಂದ.

"ನಾಲ್ಕು ಘಂಟೆಗೆ ಪಂಡಿತರ ಭೇಟಿ ಮಾಡಬಹುದು," ಎಂದ ಜಸವಂತ.

ಅಜಯನಿಗೆ ಸ್ವರ್ಗ ಕೈಗೆಟಕಿದಂತಾಯಿತು. ಹಿಂದಿನ ರಾತ್ರಿಯ ಎಲ್ಲ ದುಃಖವನ್ನೂ ಅವನು ಮರೆತುಬಿಟ್ಟ.

ನಿರ್ದಿಷ್ಟ ಕಾಲಕ್ಕೇ ಅಜಯನೂ ಜಸವಂತನೂ ಹೊರಟರು. ಚೌಕ್ ಝುಂಡಾದಲ್ಲಿನ ಒಂದು ತೀರಾ ಹಳೆಯ ಮನೆ. ಅದರ ಮಹಡಿ ಬಿರುಕು ಬಿಟ್ಟಿತ್ತು. ಹೆಂಚುಗಳು ಅಲ್ಲಲ್ಲಿ ಹಾರಿ ಹೋಗಿದ್ದವು. ಒಂದು ಬದಿಯ ಗೋಡೆ ತೀವ್ರವಾಗಿ ಬಾಗಿ, ಇನ್ನೇನು ಬೇಗನೇ ಉರುಳಿ ಬೀಳಲಿದೆ ಎನ್ನುವಂತಿತ್ತು. ನಿಜಕ್ಕೂ ಆ ಮನೆಯಲ್ಲಿರುವವರು ಧೈರ್ಯಶಾಲಿಗಳೇ ಆಗಿರಬೇಕು. ಅದರಲ್ಲೂ ಮಹಡಿಯಲ್ಲಿರುವವರಿಗೆ ಮರಣದ ಹೆಸರೇ ಮರೆತಿರಬೇಕು.

ಅಜಯ ಆ ಮನೆಯ ಹರುಕು ಮೆಟ್ಟಲುಗಳನ್ನೇರಿದ. ಅದೂ ಅಲುಗಾಡುತ್ತಿತ್ತು. ಮೆಟ್ಟಲೇರಿದ ಅಜಯ ಮಹಡಿಯ ಮೇಲಿನ ಹಾಲ್‌ನೊಳಗೆ ಇಣಿಕಿದ. ಅದು ಪೂರ್ಣ ಖಾಲಿಯಾಗಿತ್ತು. ಯಾರೂ ಅಲ್ಲಿ ವಾಸಿಸುತ್ತಿರುವಂತೆಯೇ ಕಾಣಿಸಲಿಲ್ಲ. ಅಜಯ ಸುತ್ತಲೂ ನೋಡಿದ. ಇದೇನಿದು ? ಇದೇ ಮನೆಯೇ ಅಲ್ಲವೇ ಎಂಬ ಸಂದೇಹವೂ ಅವನಿಗಾಯಿತು.

ದೂರದಿಂದ ಜಸವಂತ ಆ ಮನೆಯನ್ನು ಅಜಯನಿಗೆ ತೋರಿಸಿದ್ದ. ಅಜಯ ಅಲ್ಲೇ ನಿಂತುಕೊಂಡು ಏನೋ ವ್ಯಾಪಾರ ಮಾಡುವವನಂತೆ ನಟಿಸಿದ್ದ. ಜಸವಂತ ಯಾವುದೋ ಗಲ್ಲಿ ಹಿಡಿದು ಹೊರಟುಹೋದ. ಇಬ್ಬರೂ ಜೊತೆಯಾಗಿ ಹೋಗಬಾರದು, ಯಾರಾದರೂ ನೋಡಿದರೆ ತೊಡಕಿದೆ, ಎಂದು ಜಸವಂತ ಎಚ್ಚರಿಕೆ ನೀಡಿದ್ದ.

ಕೆಲವು ನಿಮಿಷಗಳಾದ ಮೇಲೆ ಅಜಯ ಅತ್ತ ಹೊರಟ. ಆ ಕಟ್ಟಡದ ಮಹಡಿಯನ್ನೇರಿದ.

ತಾನು ನೋಡಿದ ಮನೆ ಇದೇ ಎಂಬುದರಲ್ಲಿ ಅವನಿಗೆ ಸಂದೇಹವಿರಲಿಲ್ಲ. ಪಕ್ಕದಲ್ಲಿ ಇಂಥ ಹಾಳುಮನೆ ಬೇರಾವುದೂ ಇಲ್ಲ.

ಅಜಯ ಮತ್ತೊಮ್ಮೆ ಇಣಕಿ ಒಳಗಡೆ ನೋಡಿದ. ಆ ಹಾಲ್‌ನಿಂದ ಇನ್ನೊಂದು ದಾರಿ ಕಾಣಿಸಿತು. ಅಲ್ಲೂ ಮೆಟ್ಟಲು ಇತ್ತು.

ಅವನು ಹಾಲ್‌ನೊಳಗೆ ಹಾದು, ಆ ಮೆಟ್ಟಲನ್ನೇರಿ ನಡೆದ.

ಹಳೆಯ ಕಾಲದ ಒಂದು ತೆರವಡ (ಬಾಲ್ಕನಿ). ಹಾಸಿಗೆ, ದಿಂಬುಗಳನ್ನು ಹಾಸಲಾಗಿತ್ತು. ಮೂವರು ಕುಳಿತುಕೊಂಡು ಏನನ್ನೋ ಬರೆಯುವುದರಲ್ಲಿ ತಲ್ಲೀನರಾಗಿದ್ದರು. ಅವರಲ್ಲೊಬ್ಬ ಅಜಯನೆಡೆ ನೋಡಿದರು. ಅವನನ್ನು ಸ್ವಾಗತಿಸಿದರು. ಅಜಯ ಬಾಲ್ಕನಿಯೆಡೆ ನಡೆದ. ಅದೂ, ಗಾಳಿಯಲ್ಲಿ ತೇಲುವ ಅಲ್ಲಾವುದ್ದೀನನ ಕಂಬಳಿಯಂತೆ ಅಲುಗಾಡುತ್ತಿತ್ತು.

ತನ್ನ ಸುತ್ತಲೂ ಹರಡಿದ್ದ ಕಾಗದಗಳನ್ನು ಒಟ್ಟಿ ಒಂದು ಮೂಲೆಗೆ ಇರಿಸಿದರು ಪಂಡಿತ್. ಅಜಯನನ್ನು ಪಕ್ಕದಲ್ಲೇ ಕುಳಿತುಕೊಳ್ಳುವಂತೆ ಸೂಚಿಸಿದರು. ಜಸವಂತನೂ ನಗೆಯ ಮೂಲಕವೇ ಸ್ವಾಗತಿಸಿದ.

ಸಾದಾ ಉಡುಗೆಯ ತೆಳ್ಳಗಿನ ವ್ಯಕ್ತಿ ಪಂಡಿತ್. ಅವರ ವಿಶಾಲವಾದ ಹಣೆ, ತೀಕ್ಷ್ಣವಾದ ಕಣ್ಣುಗಳು ಥಳಥಳಿಸುತ್ತ ಭಾವನಾ ಪ್ರಪಂಚದ ಭಾವುಕ

ನೆಂದು ಸಾರಿ ಹೇಳುತ್ತಿದ್ದವು. ವಿನಯ, ಶಾಂತಿ ಅವರಲ್ಲಿ ಮನೆ ಮಾಡಿ ಕೊಂಡುತ್ತಿತ್ತು. ಯಾರಾದರೂ ಅವನನ್ನು ಕಂಡೊಡನೆಯೇ ಅಭಿಮಾನ ಬೆಳೆಯಬೇಕು. ಕಪಟವೆಂಬುದೇ ಅಲ್ಲಿ ಸೋಂಕಲಾರದು.

ಅವರನ್ನು ನೋಡುತ್ತಿದ್ದಂತೆ ತಾನು ಯಾವನೋ ಒಬ್ಬ ಮಹರ್ಷಿಯ ಮುಂದೆ ಕುಳಿತಿದ್ದೇನೆ ಎಂಬ ಭಾವನೆ ಅಜಯನಲ್ಲಿ ಮೂಡಿತು.

"ವಿಚಿತ್ರವಾದ ಸ್ಥಳ–ಅಲ್ಲವೇ ? ಮರದ ಗೂಡು ಇದು. ಇಲ್ಲಿ ಕುಳಿತು ಕೊಳ್ಳುವುದೂ ಸ್ವಲ್ಪ ತೊಡಕಿನದೇ," ಎಂದು ಮುಗುಳುನಗೆ ನಕ್ಕನು ಪಂಡಿತ್.

ಜಸವಂತ್ ಮತ್ತಿತರರು ಒಬ್ಬೊಬ್ಬರಾಗಿ ಕೋಣೆಯಿಂದ ಹೊರಟು ಹೋದರು.

"ಜಸವಂತ್ ಒಳ್ಳೆಯ ಮಿತ್ರ. ಆದರೆ, ಆದರ್ಶ ಕ್ರಾಂತಿಕಾರಿಯಲ್ಲ. ಅವನ ಅಣ್ಣನ ಪ್ರಭಾವ ಅವನ ಮೇಲಿದೆ. ನಮ್ಮೊಂದಿಗೆ ಸೇರಲು ಅಣ್ಣ ಅಡ್ಡಿಯಾಗಿದ್ದಾನೆ."

"ನಿಜ ಪಂಡಿತ್. ಆದರೆ, ಅವನಂತಹ ನಿಸ್ಪೃಹ ನಿಷ್ಠಾವಂತ ದೊರೆ ಯುವುದು ಕಷ್ಟ."

"ಅದೆಲ್ಲ ನಿಜ. ತನಗೆ ಸರಿ ಎನಿಸಿದ ಚಟುವಟಿಕೆಗಳಲ್ಲಿ ಭಾಗವಹಿಸಲು ಸಾಧ್ಯವಿಲ್ಲವಾದರೆ, ಆ ರಾಜಕೀಯ ವಿಚಾರದಲ್ಲಿನ ನಂಬಿಕೆಯಿಂದಾದರೂ ಏನಾದಂತಾಯಿತು ?"

"ನನಗೂ ಹಾಗೇ ಅನ್ನಿಸಿತ್ತು. ಆದರೆ, ತಾನು ಕ್ರಾಂತಿಕಾರಿ ಪಾರ್ಟಿಗೆ ಸೇರಿದ್ದೇನೆ ಎಂದು ನಿನ್ನೆ ತಾನೇ ಆತ ಹೇಳಿದ."

ಅಂಥ ಪಾರ್ಟಿ ಇನ್ನೂ ಹುಟ್ಟಿಕೊಂಡಿಲ್ಲ. ಜೊತೆ ಸೇರಿ ಮಾತುಕತೆ ನಡೆಸಿದ ಕೂಡಲೇ ಕೆಲಸವಾಗುವುದಿಲ್ಲ. ಹಾಗೆ ದೊಡ್ಡ ದೊಡ್ಡ ಮಾತುಗಳನ್ನೂ ನಾವು ಆಡಬಾರದು," ಎಂದು ಪಂಡಿತ್ ಬೇಡದ ಮಾತು ಗಳಿಗೆ ಮಂಗಳ ಹಾಡುವುದರ ಜೊತೆಗೆ, ಎಚ್ಚರಿಕೆಯನ್ನು ಕೊಟ್ಟ. "ಕ್ರಾಂತಿಯು ಚರ್ಚೆಯ ಗೋಷ್ಠಿಯಲ್ಲ. ಅದು ಪ್ರಾಣತ್ಯಾಗದ ಒಂದು ಜೂಜು. ಪ್ರಾಣವನ್ನೇ ಬಲಿದಾನವಾಗಿ ಅರ್ಪಿಸುವ ಭೀಕರ ಹೋರಾಟ. ತಾಯಿನಾಡಿಗೆ ರಕ್ತತರ್ಪಣ ನೀಡುವ ಪೂಜೆ," ಎಂದ.

ಬಹಳ ಹೊತ್ತು ಅವರಿಬ್ಬರೇ ಭಾರತದ ರಾಜಕೀಯ ಪರಿಸ್ಥಿತಿಗಳ ಬಗೆಗೆ ಚರ್ಚಿಸಿದರು. ಪಂಡಿತ್‌ಗೆ ಎಲ್ಲ ವಿಷಯಗಳಲ್ಲೂ ಸ್ಪಷ್ಟವಾದ ನಿರ್ದಿಷ್ಟ ಅಭಿಪ್ರಾಯವಿತ್ತು. ನೇರ ಮಾತು, ನೇರ ಉತ್ತರ, ಬಳಸಿ ಮಾತನಾಡುವ ರೀತಿಯೇ ಅವನಿಗೆ ಸಲ್ಲದು. ಉತ್ಸಾಹದ ಭರದಲ್ಲಿ ಅಜಯ ಮಾತುಗಳಿಗೆ ಸ್ವಾತಂತ್ರ್ಯ ನೀಡಿದಾಗ ಅದಕ್ಕೆ ಉಪಾಯವಾಗಿ ತಡೆ ಹಾಕುತ್ತಿದ್ದ.

"ಕ್ರಾಂತಿ ಈ ದೇಶಕ್ಕೆ ಹೊಸತೇನೂ ಅಲ್ಲ. ಯುಗಯುಗಾಂತರ ದಿಂದಲೂ ನಡೆದಿದೆ. ಈ ಶತಮಾನದಲ್ಲೂ ನಡೆದಿದೆ."

"ನಿಜ, ಪಂಡಿತ್. ನಮ್ಮ ದೇಶದ ನೆಲವೆಲ್ಲ ವೀರಪುತ್ರರ ನೆತ್ತರಿನಿಂದ ಒದ್ದೆಯಾಗಿದೆ."

"ಆದರೂ ಸಾಲದು. ಈಗ ಹಳೆಯ ಹೋರಾಟಗಳಿಂದ ಪಾಠ ಕಲಿತು ನಾವು ಮುಂದೆ ನಡೆಯಬೇಕು. ಒಬ್ಬ ನಾಯಕನನ್ನೇ ನಂಬಿ, ಆತ ಉರುಳಿದಾಗ, ದಿಕ್ಕು ಕಾಣದೆ ಮೂಕರಾಗಿ ಮೂಲೆ ಸೇರಬಾರದು. ಪ್ರತಿ ಯೊಬ್ಬನೂ ತಾನಾಗಿಯೇ ಹೊಸ ಗುಂಪು ಕಟ್ಟಿ, ಹೋರಾಟ ಮುಂದುವರಿಸು ವಂತಾಗಬೇಕು."

"ಇದು ನೀವೆಂದಂತೆ ನಿರಂತರ ಹೋರಾಟ, ಪಂಡಿತ್. ನಮ್ಮ ಪಾಲಿನ ಕರ್ತವ್ಯ ನಾವು ನಿರ್ವಹಿಸಬೇಕು–ಅಷ್ಟೆ."

"ಕ್ರಾಂತಿಕಾರೀ ಪರಂಪರೆ ಬೆಳೆಯುತ್ತಲೇ ಇದೆ. ಪ್ರತಿಯೊಂದು ದಬ್ಬಾಳಿಕೆಯಿಂದಲೂ ಅದು ಹೆಚ್ಚು ಪಕ್ವವಾಗುತ್ತಿದೆ."

"ಕಕೋರಿ ಕ್ರಾಂತಿಯ ಬಗೆಗೆ ಪತ್ರಿಕೆಗಳಲ್ಲಿ ಬಂದ ವರದಿ ನೋಡಿದರೆ, ಕ್ರಾಂತಿಕಾರರೆಲ್ಲರ ದಮನವಾಯಿತು ಎನ್ನುವಂತಿದೆ."

"ಅದು ಸಾಮ್ರಾಜ್ಯಶಾಹಿಯ ವಾದ. ಜನತೆಯನ್ನು ಮೋಸಗೊಳಿಸಿ ಅವರಲ್ಲಿ ನಿರಾಶೆ ಬಿತ್ತುವ ತಂತ್ರ. ಕ್ರಾಂತಿಕಾರಿ ಚಳುವಳಿ ಅನಂತರದಲ್ಲಿ ಇನ್ನೂ ಹೆಚ್ಚು ಸಂಘಟಿತವಾಗಿದೆ."

"ಚಂದ್ರಶೇಖರ್ ಆಜಾದ್ ಇನ್ನೂ ಸಾಮ್ರಾಜ್ಯಶಾಹಿ ಪೋಲೀಸರಿಗೆ ಸಿಗಲಿಲ್ಲ."

" ಅಷ್ಟೇ ಅಲ್ಲ ; ಅವರೊಬ್ಬರೇ ಅಲ್ಲ. ನಮ್ಮ ದೇಹದ ಒಂದೊಂದು ರಕ್ತದ ಹನಿಯೂ ನೂರಾರು ಮಂದಿಯಲ್ಲಿ ದೇಶಭಕ್ತಿ ಮೂಡಿಸುತ್ತದೆ. ಪ್ರತಿಯೊಬ್ಬನ ಬಲಿದಾನವೂ ಮತ್ತೆ ಹತ್ತು ಮಂದಿಯನ್ನು ನೇಣುಗಂಬ ಏರಲು ಪ್ರೋತ್ಸಾಹಿಸುತ್ತದೆ."

" ಅದಕ್ಕೇ ಇರಬೇಕು, ನನ್ನಂತಹವರಿಗೆ ಆ ಮರಣದಂಡನೆ ಬೆದರಿಕೆ ಹಾಕಿಲ್ಲ."

" ಹಿಂದೂಸ್ಥಾನ್ ಸೋಷಿಯಲಿಸ್ಟ್ ರಿಪಬ್ಲಿಕನ್ ಪಾರ್ಟಿ ಈಗ ರೂಪು ಗೊಂಡಿದೆ. ಅದರ ಪ್ರಮುಖ ಸದಸ್ಯರಿಬ್ಬರ ಪರಿಚಯವಾಗಿದೆ ನನಗೆ. ಆಗಾಗ ಹಣ ಸಹಾಯ ಪಡೆಯಲು ಅವರು ನನ್ನೆಡೆಗೆ ಬರುತ್ತಾರೆ. ಈಗ ಮೂರು ನಾಲ್ಕು ತಿಂಗಳಿಂದ ಬಂದೇ ಇಲ್ಲ."

" ಅದಾವ ತೊಂದರೆಯಾಯಿತೋ ?"

" ಹಾಗೆಲ್ಲ ಸಿಕ್ಕಿ ಬೀಳುವ ವ್ಯಕ್ತಿ ಅವರಲ್ಲ. ಇಂಥ ಕೆಲವರಿಗಿರುವ ಜಾಣ್ಮೆ ನಾವು ಅರಿತುಕೊಳ್ಳಲು ಬಹಳ ಕಾಲ ಹಿಡಿದೀತು. ಕ್ರಾಂತಿಕಾರಿ ಗುಪ್ತ ಗಾಮಿ ಚಳುವಳಿಯಲ್ಲಿ ಅವರಿಗೆ ಅಪಾರ ಅನುಭವವಿದೆ."

" ಬೇಗನೇ ಬರಬಹುದೇ ?"

" ಖಂಡಿತವಾಗಿಯೂ ಬಂದೇ ಬರುತ್ತಾರೆ. ಕ್ರಾಂತಿಕಾರೀ ಪಕ್ಷದ ಸದಸ್ಯನಾಗಬೇಕೆಂದು ಅವರೂ ನನ್ನನ್ನು ಕೇಳಿಕೊಂಡಿದ್ದಾರೆ. ಪಾರ್ಟಿಯಲ್ಲಿ ಅವರೊಬ್ಬ ಪ್ರಮುಖ ಸದಸ್ಯ."

" ತಾವು ಪಾರ್ಟಿಯ ಸದಸ್ಯರಾಗುತ್ತೀರಾ ? ಆಗ ನಮಗೆಲ್ಲ ತುಂಬಾ ನೆರವಾಗುತ್ತದೆ. ಹೋರಾಟಕ್ಕೆ ಮಾರ್ಗದರ್ಶನವಾಗುತ್ತದೆ."

" ಸದಸ್ಯತ್ವವಷ್ಟೇ ನನಗೆ ಸಾಲದು..."

" ಅಂದರೆ......?"

" ನಾವೇ ಏಕೆ ಸ್ವತಂತ್ರವಾದ ಪಾರ್ಟಿ ಕಟ್ಟಲು ಪ್ರಯತ್ನಿಸ ಬಾರದು......?"

" ಖಂಡಿತವಾಗಿಯೂ ಒಳಿತೇ," ಎಂದು ಅಚ್ಚರಿಗೊಂಡ ಅಜಯ ಉತ್ತರಿಸಿದ.

# ೧೦

ಐತಿಹಾಸಿಕ ಪ್ರದೇಶ ಎಂದಾದರೂ ಇತಿಹಾಸವನ್ನು ಸಾರಲೇಬೇಕು.

ಆಗ್ರಾ ಅಂಥ ಇತಿಹಾಸವನ್ನು ಮತ್ತೊಮ್ಮೆ ಸೃಷ್ಟಿಸಿತು.

ಔರಂಗಜೇಬನನ್ನು ಸಂಧಿಸಲೆಂದು ಛತ್ರಪತಿ ಶಿವಾಜಿ ಆಗ್ರಾಕ್ಕೆ ಬಂದ. ನೂರಿ ಉದ್ಯಾನವನದಲ್ಲಿ ಚಕ್ರವರ್ತಿಯ ಪರವಾಗಿ ರಜಪೂತ ರಾಜಕುಮಾರ ಕುಮರ್ ರಾಮ್‌ಸಿಂಗ್ ಶಿವಾಜಿಯನ್ನು ಸ್ವಾಗತಿಸಿದ.

ಆ ಘಟನೆ ಇತಿಹಾಸವನ್ನು ಸೇರಿತು.

ಅದೇ ತೋಟವಿತ್ತೆನ್ನಲಾದ ಪ್ರದೇಶವೀಗ ನೂರಿ ದರ್ವಾಜಾ ಎಂದು ಹೆಸರಾಗಿದೆ.

ಶಿವಾಜಿಯು ಪದಾರ್ಪಣ ಮಾಡಿದ ಪ್ರದೇಶದಲ್ಲೇ ಇರಬಹುದು—ಎರಡಂತಸ್ತಿನ ಮನೆಯೊಂದಿದೆ.

ತೀರಾ ಹಳೆಯ ಕಟ್ಟಡ. ಹೊರಗಡೆಗೆ ಮಾಡಿನ ಮೇಲೆಲ್ಲ ಪಾರಿವಾಳಗಳು ಕುಣಿದು ಕುಪ್ಪಳಿಸುತ್ತಿವೆ. ಒಳಗಡೆ ಕತ್ತಲ ಮರೆಯಲ್ಲಿ ಬಾವಲಿಗಳು ತೂಗಾಡುತ್ತಿವೆ.

ಈ ಕಟ್ಟಡದ ಸುತ್ತಲಿನ ತೋಟದಲ್ಲಿ ಭಾರತದ ಇತಿಹಾಸವನ್ನೇ ಬದಲಿಸುವ ಪ್ರಯತ್ನ ನಡೆಯಿತು.

ಗಂಭೀರ ಮುಖಮುದ್ರೆ, ಭೀಮ ಮೈಗಟ್ಟು, ಯಾರಿಗೂ ತಲೆ ತಗ್ಗಿಸದ ನಿಲುವು, ಉಕ್ಕಿನ ಮಾಂಸಖಂಡ, ಮಿಂಚಿನ ನಡೆ, ಪಾದರಸದಂತಹ ಚಲನೆಯುಳ್ಳ ವ್ಯಕ್ತಿಯೊಬ್ಬ ಗಿಡಗಳ ಮರೆಯಲ್ಲಿ ಕುಳಿತಿದ್ದ. ಸೊಂಟಕ್ಕೆ ಒಂದು ಲುಂಗಿ ಸುತ್ತಿ ಮೈಮೇಲೊಂದು ಜುಬ್ಬಾ ಧರಿಸಿದ ಈ ವ್ಯಕ್ತಿ ದಕ್ಷಿಣ ದೇಶದವನಂತೆ ತೋರಿ ಬರುತ್ತಿದ್ದ.

ಏನೂ ತಿಳಿಯದ, ಯಾವುದಕ್ಕೂ ಅಳುಕದ ಈ ವ್ಯಕ್ತಿಯ ಕಣ್ಣುಗಳು ಹದ್ದಿನ ಕಣ್ಣಿನಂತೆ ಸುತ್ತಲಿನ ಎಲ್ಲವನ್ನು ಗಮನಿಸುತ್ತಿದ್ದವು.

ಪೋಲಿಸರ ದೃಷ್ಟಿಯಲ್ಲಿ ಈತ ರಕ್ತಪಿಪಾಸಿ ದೈತ್ಯ.

ಅವನನ್ನು ಹಿಡಿಯಲು ಮಾಡಿದ ಅವರ ಎಲ್ಲ ಯತ್ನಗಳು ವಿಫಲ ವಾಗಿವೆ. ಮಿಂಚಿನಂತೆ ಆತ ಮಿಂಚಿ ಮಾಯವಾಗಿದ್ದಾನೆ. ಕ್ರಾಂತಿಕಾರಿಗಳ ಮಹಾಸೇನೆ ವ್ಯವಸ್ಥೆಗೊಳಿಸಿ ಎಲ್ಲೆಲ್ಲೂ ಮಾರ್ಗದರ್ಶನ ನೀಡುತ್ತಿದ್ದಾನೆ. ಪಂಜಾಬ್, ಸಂಯುಕ್ತ ಪ್ರಾಂತ್ಯ, ಬಿಹಾರ್‌ಗಳಲ್ಲಿ ಅವನ ಹೆಸರು ಹೇಳಿದರೆ ಸಾಕು, ಪೋಲಿಸ್ ಅಧಿಕಾರಿಗಳು ಥರಥರನೆ ನಡುಗು ತ್ತಿದ್ದರು.

ಆದರೂ, ಸದಾ ಹಸುಳೆಯಂತೆ ನಗುತ್ತ ನಗೆ ಮಾತುಗಳನಾಡುತ್ತ, ಗೆಳೆಯರ ಹಾಗೂ ಸ್ನೇಹಿತರ ಕ್ಷೇಮವನ್ನೇ ಚಿಂತಿಸುತ್ತ ಸಾಗುತ್ತಿದ್ದ ಕರುಣಾಮಯಿ ಆತ.

ಹಾಗೆಯೇ ಅತ್ಯಂತ ಕಠಿಣವಾದ ಶಿಸ್ತು ಪಾಲಿಸುವವನು. ಇತರರೂ ಹಾಗೆಯೇ ಇರಬೇಕೆಂದು ಬಯಸುವ ದಂಡನಾಯಕ. ಎಂತಲೇ ಅವನು ಮಾಡಿದ ನಿರ್ಧಾರ ಎಂದೂ ವಿಫಲವಾಗುವುದಿಲ್ಲ ಎಂಬ ಖಚಿತ ನಂಬಿಕೆ ಅವನ ಬೆಂಬಲಿಗರಲ್ಲಿತ್ತು.

ಚಂದ್ರಶೇಖರ್ ಆಜಾದ್ ಏನೋ ಯೋಚಿಸುತ್ತ ಮೀಸೆ ಹುರಿಮಾಡಿ ಕೊಂಡ.

ಕಕೋರಿ ದರೋಡೆಯಿಂದಾಗಿ ಪಾರ್ಟಿ ದುರ್ಬಲವಾಯಿತೆಂಬ ಚಿಂತೆ ಅವನಿಗಿರಲಿಲ್ಲ. ಗುರಿಸಾಧನೆ ದೂರವಾಯಿತಲ್ಲ ಎಂಬುದೇ ಕಳವಳವಾಗಿತ್ತು. ಆದರೂ, ಮತ್ತೊಮ್ಮೆ ಪಾರ್ಟಿ ಸಂಘಟಿಸುವದರಲ್ಲಿ ಆತ ಬಹಳ ದೂರ ನಡೆದಿದ್ದ.

ಸಾಕಷ್ಟು ಓದು ಬರದವನಾಗಿದ್ದರೂ ಯಾವುದೇ ವಿಷಯವನ್ನು ಗ್ರಹಿಸುವ ಶಕ್ತಿ ಅವನಲ್ಲಿತ್ತು. ಯಾವುದೇ ವ್ಯಕ್ತಿಯ ಮುಖ ನೋಡಿ ದೊಡನೆಯೇ ಅವನ ಬಗೆಗೆ ತಿಳಿಯುವ ಚೇತನವಿತ್ತು. ದೇಶದ ಮೂಲೆ ಮೂಲೆಗಳಲ್ಲೂ ಕ್ರಾಂತಿಕಾರರ ಸಂಘಟನೆಯಾಗಬೇಕು. ಒಂದೇ ಬಾರಿಗೆ ಎಲ್ಲೆಡೆಗೂ ಕ್ರಾಂತಿ ಹರಡಿ, ಈ ಸಾಮ್ರಾಜ್ಯವನ್ನು ಉರುಳಿಸಬೇಕು ಎಂಬುದೇ ಅವನ ಗುರಿಯಾಗಿತ್ತು.

ಅದುವರೆಗೆ ಅವನಿಗೆ ನಿದ್ರೆ, ಆಹಾರ, ವಿಶ್ರಾಂತಿ ಬೇಕಾಗಿರಲಿಲ್ಲ.

ಅಂಥ ವಿಶ್ರಾಂತಿಗೆ ಬ್ರಿಟಿಷ್ ಸರ್ಕಾರವೂ, ಪೋಲೀಸರೂ ಅವಕಾಶ ನೀಡುತ್ತಲೂ ಇರಲಿಲ್ಲ.

ಆಗಲೇ ಹತ್ತು ವರ್ಷಗಳ ಕಾಲ ಆತ ಕ್ರಾಂತಿಯ ಬೀಜ ಬಿತ್ತುತ್ತ ಪೋಲೀಸರ ದೃಷ್ಟಿಯಿಂದ ಮರೆಯಾಗಿ ದುಡಿದಿದ್ದಾನೆ. ಇನ್ನೂ ಹತ್ತು ವರ್ಷ ಅವಕಾಶ ಸಿಕ್ಕಿದರೆ ಸಾಕು......ಆಗ ಕನಸು ನಿಜವಾದೀತು...... ಎಂಬುದು ಅವನ ಬಯಕೆ.

ಕತ್ತಲು ಮುಸುಕುತ್ತಿದ್ದಂತೆ ಅತ್ತ ಇನ್ನೊಬ್ಬ ತರುಣ ನಡೆದು ಬಂದ.

ವಯಸ್ಸು......ಇನ್ನೂ ಹದಿನೆಂಟು–ಇರಬಹುದೇನೋ ? ಎತ್ತರ ವಾಗಿ, ಎತ್ತರಕ್ಕೆ ಸಮವಾದ ದೇಹದಾರ್ಢ್ಯ, ತೀಕ್ಷ್ಣವಾದ ಕಣ್ಣುಗಳು, ತುಂಬು ಯೌವನ, ಅಪಾರ ಧೈರ್ಯವನ್ನು ಸಾರುವ ಎದೆ. ಹಾಗೆಯೇ ಶಾಂತ ಪ್ರಶಾಂತ ಸಂದೇಶ ಸಾರುವ ಸನ್ಯಾಸಿಯ ಮುಖಭಾವ. ಕ್ರಾಂತಿಕಾರಿಯಲ್ಲಿರ ಬಹುದಾದ ಯಾವುದೇ ವರ್ಚಸ್ಸು ಅವನಲ್ಲಿ ಕಂಡುಬರುತ್ತಿರಲಿಲ್ಲ.

"ಎಷ್ಟು ಹೊತ್ತಾಯಿತೋ ಭಗತ್.........ಹೀಗೆ ಹೆಚ್ಚು ಕಾಲ ಕಾಯುವುದು ನನಗೆ ಒಳ್ಳೆಯದೇನು ?" ಎಂದು ಶಾಂತನಾಗಿ ಮೃದುವಾಗಿ ಆಜಾದ್ ಪ್ರಶ್ನಿಸಿದ.

"ಆ ನಾಯಿಗಳಿಂದ ತಪ್ಪಿಸಿಕೊಂಡು ಬರುವುದು ಒಂದು ಸಾಹಸವೇ. ಅದೇಕೋ ಕಾಟ ಬಲವಾದಂತಿದೆ," ಎಂದು ಕೊಂಚ ಉದ್ರೇಕದಿಂದಲೇ ಮಾತ ನಾಡಿದ ಭಗತ್‌ಸಿಂಗ್.

"ನೋಡಿದೆಯಾ ? ನಮ್ಮ ಪಾರ್ಟಿಯೊಳಗೆ ರೇಗಿದಂತೆ ಇಲ್ಲೂ ರೇಗುತ್ತೀಯಾ !"

"ಕ್ಷಮಿಸಿ ಭಾಯಿ. ದಣಿದು ಬಂದಿದ್ದೆ."

"ಇದೊಂದು ನಿನ್ನ ದೊಡ್ಡ ಗುಣ......"

"ಪಾರ್ಟಿಯ ಸಂಘಟನೆಯ ಕಾರ್ಯವೇನೋ ಸಾಗಬೇಕು ನಿಜ. ಆದರೆ, ಕ್ರಾಂತಿಕಾರೀ ಕಾರ್ಯಕ್ರಮ ನಿಲ್ಲುವುದು ಉಚಿತವಲ್ಲ. ಇದರಿಂದ ಆಗಲೇ ನಿರಾಶೆಗೊಂಡವರಲ್ಲಿ ಮತ್ತಷ್ಟು ನಿರಾಶೆ ಬೆಳೆಯುತ್ತದೆ. ಕಕೋರಿಯ ಸೇಡು ತೀರಿಸಬೇಡವೇ ?"

"ಆ ಬಗೆಗೇ ನಾನೂ ಯೋಚಿಸುತ್ತಿದ್ದೆ. ಕಿಶೋರನಿಗೂ ತಿಳಿಸಿದ್ದೇನೆ."

"ಮೊದಲು ಆ ಮೊಕದ್ದಮೆಯಲ್ಲಿ ನಮ್ಮ ವಿರುದ್ಧ ಸಾಕ್ಷಿ ನುಡಿದ ನಮ್ಮವರ ಕೊಲೆಯಾಗಬೇಕು."

"ನಿಜ........."

"ಮುಂದೇನು ನಡೆದಿದೆ......?"

"ಬಾಂಬ್ ತಯಾರಿಕೆಗೂ ಇಲ್ಲೆ ವ್ಯವಸ್ಥೆಯಾಗಬೇಕಾಗಿದೆ. ಅದಕ್ಕಾಗಿ ಬಂಗಾಲದ ಗೆಳೆಯರನ್ನು ಸಂಧಿಸಲು ಕಿಶೋರನಿಗೆ ಹೇಳಿದ್ದೇನೆ."

"ಆಮೇಲೆ......"

"ಇಲ್ಲಿ ಸೆರೆಯಲ್ಲಿರುವ ಸಚೀಂದ್ರನಾಥ್ ಸನ್ಯಾಲ್ ಮತ್ತು ಜೋಗೇಶ್ ಚಂದ್ರರನ್ನು ಕಾನ್‌ಪುರ ಜೇಲಿಗೆ ಒಯ್ಯುವ ಯೋಚನೆ ಇದೆಯಂತೆ."

"ಆ ಬಗೆಗೆ ನಿರ್ದಿಷ್ಟವಾದ ಸುದ್ದಿ ಬೇಕು. ಅವರನ್ನು ಬಿಡುಗಡೆ ಮಾಡುವ ಯತ್ನ ನಡೆಸಬೇಕು."

ಗೆಳೆಯರಿಬ್ಬರೂ ಪಾರ್ಟಿಯ ಪ್ರಗತಿಯ ಬಗೆಗೆ ಬಹಳ ಹೊತ್ತು ಮಾತುಕತೆ ನಡೆಸಿದರು.

"ನನ್ನನ್ನಂತೂ ನೀವೆಲ್ಲ ಸೆರೆಯಲ್ಲಿಟ್ಟಿದ್ದೀರಿ," ಎಂದು ಮುಗುಳು ನಗೆ ನಗುತ್ತ ಹೇಳಿದ ಆಜಾದ್.

"ಎಲ್ಲರ ಕಣ್ಣಿಗೂ ಬೀಳುವಂತಹ ವೈಚಿತ್ರ್ಯ ನಿಮ್ಮಲ್ಲೇನೂ ಇಲ್ಲ ನಿಜ. ಆದರೆ, ಪಾರ್ಟಿಗಾಗಿ ನಾವು ನಿಮ್ಮ ಚಲನವಲನವನ್ನು ನಿರ್ಧರಿಸ ಬೇಕಾಗಿದೆ."

"ಅದೂ ಆಗಲಿ......," ಎಂದು ಅಲ್ಲೇ ಇದ್ದ ಮಹಡಿ ಮನೆ ಯೊಳಗೆ ಆಜಾದ್ ತೆರಳಿದ.

ನಿರ್ಜನವಾದ ಆ ಕಟ್ಟಡವನ್ನು ತಲೆಮರಿಸಿಕೊಳ್ಳಲು ಕ್ರಾಂತಿಕಾರರು ಬಳಸುತ್ತಿದ್ದರು. ಅಲ್ಲೇ ಅನೇಕ ವೇಳೆ ಗುಪ್ತ ಸಭೆಗಳೂ ನಡೆಯುತ್ತಿದ್ದುವು. ಆ ಪ್ರದೇಶದತ್ತ "ಸರ್ಕಾರ"ವೂ ಕಣ್ಣು ಹಾಕಿರಲಿಲ್ಲವಾಗಿ ಅಲ್ಲಿ ನೆಮ್ಮದಿ ಯಿಂದ ಕ್ರಾಂತಿಕಾರರು ನಿದ್ರಿಸಬಹುದಾಗಿತ್ತು.

ಭಗತ್‌ಸಿಂಗ್ ಅಲ್ಲಿಂದ ಹೊರಟು ನಾಯಕಿಮಂಡಿ ಕಡೆಗೆ ನಡೆದ. ಅವನಿಗೆ ನಿದ್ರೆ, ಆಹಾರ ಒಂದೂ ಬೇಕಾಗಿರಲಿಲ್ಲ. ದುಡಿದು ದುಡಿದು

ತೀರಾ ಬಳಲಿದಾಗ ನಿದ್ರೆ ತಾನಾಗಿಯೇ ಬರುತ್ತದೆ. ಅದಕ್ಕಾಗಿ ಸ್ವಾಗತದ ಸಿದ್ಧತೆಗಳು ಯಾಕೆ ಎಂದು ಆತ ಪರಿಹಾಸ್ಯ ಮಾಡುತ್ತಿದ್ದ.

ನಾಯಕಮಂಡಿ ಪ್ರದೇಶದ ಭಾಗ್ ಕೇಸರೆ ಖಾನ್ ಎಂಬಲ್ಲಿ ಒಂದಂತಸ್ತಿನ ಪುಟ್ಟ ಮನೆ. ಅದನ್ನು ಆತ ಬಾಡಿಗೆಗೆ ಪಡೆದಿದ್ದ. ಬೇರೆ ಬೇರೆ ಪ್ರಾಂತ್ಯ ಗಳಿಂದ ಬರುವ ಕ್ರಾಂತಿಕಾರರು ಇಲ್ಲಿ ಗುಪ್ತವಾಗಿ ಸೇರುತ್ತಿದ್ದರು. ತಮ್ಮ ನಾಯಕರಿಗೆ ಸುದ್ದಿ ಮುಟ್ಟಿಸಿ ಅವರನ್ನು ಭೇಟಿಯಾಗುತ್ತಿದ್ದರು.

ಮನೆ ಯಾರಿಗೂ ಎಟುಕದಂತಿತ್ತು. ಅದು ದೆವ್ವದ ಮನೆ ಎಂಬ ಹೆಸರನ್ನು ಗಳಿಸಿತ್ತು. ಯಾವಾಗಲೋ ಅಲ್ಲಿ ಯಾರಾದರೂ ಕಾಣಿಸಿ ಕೊಳ್ಳುತ್ತಿದ್ದರು. ಒಮ್ಮೊಮ್ಮೆ ನೋಡಿದಾಗ ಯಾರೂ ಇರುತ್ತಿರಲಿಲ್ಲ. ಬೀಗವೊಂದು ಭದ್ರವಾಗಿದ್ದು, ಒಳಗಡೆ ಜನವಸತಿಯು ಯಾವ ಕುರುಹೂ ಕಂಡುಬರುತ್ತಿರಲಿಲ್ಲ. ಆದರೂ, ಮನೆಯ ಯಜಮಾನನಿಗೆ ಬಾಡಿಗೆ ಸಲ್ಲುತ್ತಿತ್ತು. ಯಾರೋ ವಿದ್ಯಾರ್ಥಿಗಳಿದ್ದಾರೆ, ಓದುವವರು ಎಂದು ಆತನು ಹೇಳುತ್ತಿದ್ದ.

ಆದರೆ, ಪಾರ್ಟಿಯ ಪರಸ್ಪರ ಹೊಂದಾಣಿಕೆ, ನಿಕಟ ಸಂಪರ್ಕ ಹಾಗೂ ಮಹತ್ವದ ನಿರ್ಧಾರಗಳ ಕೇಂದ್ರ ಇದೇ ಆಗಿತ್ತು. ತುಂಬ ಬಳಲಿದಾಗ ಭಗತ್‌ಸಿಂಗ್ ಕೂಡಾ ಇಲ್ಲೇ ಹಾಯಾಗಿ ನಿದ್ರಿಸುತ್ತಿದ್ದ. ಆಗ ಅಲ್ಲಿರುತ್ತಿದ್ದುದು, ಅವನ ಗೆಳೆಯರು ನೀರು ತುಂಬಿದ ಮಡಿಕೆ, ಪುಟ್ಟ ಸೀಮೆ ಎಣ್ಣೆ ದೀಪ ಮತ್ತು ಕೆಲವು ಪುಸ್ತಕಗಳು ಮಾತ್ರ.

ಆಗ್ರಾದಲ್ಲಿ ಕ್ರಾಂತಿಕಾರಿ ಸಂಸ್ಥೆಯ ಕೇಂದ್ರವನ್ನು ಸ್ಥಾಪಿಸಿದ ಭಗತ್ ಸಿಂಗ್ ಈಗ ಬಾಂಬ್ ತಯಾರಿಕೆಯ ಬಗೆಗೆ ಶ್ರಮಿಸತೊಡಗಿದ. ರಿವಾಲ್ವರ್, ಮದ್ದು ಗುಂಡುಗಳು, ದ್ರಾವಕಗಳು, ಹಾಗೂ ಬಾಕು–ಕತ್ತಿಗಳು ಆಗಲೇ ಸಂಗ್ರಹಿಸಲ್ಪಟ್ಟಿದ್ದವು.

ನಗರದ ಮುಸ್ಲಿಮ್ ಜನರು ಅಧಿಕವಾಗಿ ವಾಸಿಸುತ್ತಿದ್ದ ಹಿಂಗ್ ಕಿ ಮಂಡಿ ಎಂಬಲ್ಲಿ ಒಂದು ಮನೆಯನ್ನು ಬಾಡಿಗೆಗೆ ಹಿಡಿಯಲಾಯಿತು. ಪ್ರಚಂಡ ಶಕ್ತಿಯ ಬಾಂಬ್ ತಯಾರಿಕೆ, ಗುಂಡು ಹಾರಿಸುವಲ್ಲಿ ತರಬೇತಿ, ಆತ್ಮರಕ್ಷಣೆ ಮತ್ತು ಹೋರಾಟದಲ್ಲಿ ಶಿಕ್ಷಣವನ್ನು ಇಲ್ಲಿ ಕೊಡ ಲಾಯಿತು.

ಬಂಗಾಲದ ಕ್ರಾಂತಿಕಾರಿಯೂ ಬಾಂಬ್ ತಯಾರಿಕೆಯಲ್ಲಿ ನಿಷ್ಣಾತನೂ ಆದ ಜತೀಂದ್ರನಾಥ್ ದಾಸ್‌ನನ್ನು ಇಲ್ಲಿಗೆ ಕರೆಸಿಕೊಳ್ಳಲಾಯಿತು. ಬಾಂಬ್ ತಯಾರಿಕೆ ಭರದಿಂದ ನಡೆಯಿತು.

ಮುಸ್ಲಿಂ ಜನರೇ ವಾಸಿಸುತ್ತಿದ್ದ ಪ್ರದೇಶವಾದುದರಿಂದ ಸರ್ಕಾರದ ದೃಷ್ಟಿ ಈ ಕಡೆಗೆ ಹರಿಯಲಿಲ್ಲ. ಕ್ರಾಂತಿಕಾರರ ಚಟುವಟಿಕೆಗಳು ಇಲ್ಲಿ ನಡೆಯುವುದು ಸುಲಭವಾಯಿತು.

ದೇಶಭಕ್ತಿಯು ಪ್ರೇರಣೆಯೊಂದೇ ಈ ಕ್ರಾಂತಿಕಾರಿಗಳನ್ನು ಬದುಕಿಸಿ ಮುನ್ನಡೆಸಿದ ಚೇತನವಾಗಿತ್ತು.

ಆರ್ಥಿಕ ಮುಗ್ಗಟ್ಟು—ಪೋಲೀಸರ ಕಾಟಗಳಿಂದ ಅವರು ಬಳಲಿ ಬೆಂಡಾದರು. ಹಣದ ಕೊರತೆಯೊಂದು ಅವರ ಪಾಲಿಗೆ ಅತ್ಯಂತ ದೊಡ್ಡ ವೈರಿಯಾಗಿತ್ತು. ಅನೇಕ ವೇಳೆ ಭಗತ್‌ಸಿಂಗ್, ಆಜಾದ್ ಮತ್ತು ಅವರ ಜೊತೆಗಾರರು ಅನ್ನವಿಲ್ಲದೆ ಉಪವಾಸ ಬೀಳಬೇಕಾಗುತ್ತಿತ್ತು. ಅವರಿಗಿದ್ದ ಒಂದೇ ಒಂದು ಆಧಾರವೆಂದರೆ ಅವರಿದ್ದ ಮಹಡಿಯ ಕೆಳಗಡೆಗೆ ಹಾಲು ವಿಕ್ರಯಿಸುತ್ತಿದ್ದ ಮನುಷ್ಯ. ಆತ ಈ ತರುಣರ ಬಗೆಗೆ ಅನುಕಂಪ ಹೊಂದಿದ್ದ. ಅವರ ಸಾಹಸದ ಬಗೆಗೆ ತಿಳಿದು ಅಭಿಮಾನ ತಾಳಿದ್ದ. ವಾರಗಟ್ಟಲೆ ಅವನು ಈ ತರುಣರಿಗೆ ಸಾಲವಾಗಿ ಹಾಲು ಕೊಟ್ಟು ಅವರನ್ನು ಬದುಕಿಸಿದ. ಸಾಲ ನೂರು ರೂಪಾಯಿಗಳನ್ನು ಮೀರಿತು. ಆದರೂ ಅವನ ಉದಾರತೆ ಹಿಂಗಲಿಲ್ಲ. ಈ "ವಿದ್ಯಾರ್ಥಿ"ಗಳು ಎಂದಾದರೂ ಹಣ ಹಿಂತಿರುಗಿಸಬಹುದು ಎಂಬ ನಂಬಿಕೆ ಅವನದಾಗಿತ್ತು.

ಆಗ್ರಾ ದೆಹಲಿಗಳ ಚಳಿಯ ಅನುಭವವಿರುವವರಿಗೆ ಈ ಕ್ರಾಂತಿಕಾರರ ದುರಂತ ಬಾಳಿನ ಅರಿವಾದೀತು. ನೀರು ಹೆಪ್ಪುಗಟ್ಟುವಂತಹ ಚಳಿಗಾಲದಲ್ಲೂ, ಸರಿಯಾದ ಉಡಿಗೆ ತೊಡಿಗೆ ಇಲ್ಲದ ಉಣ್ಣೆ ಬಟ್ಟೆಗಳಿಲ್ಲದ ಈ ಕ್ರಾಂತಿಕಾರರು ಪತ್ರಿಕೆಯ ಕಾಗದವನ್ನೇ ನೆಲದ ಮೇಲೆ ಹಾಸಿ, ಮೇಲೆ ಹೊದೆದುಕೊಂಡು, ಶೂನ್ಯದೊಳಗೆ ಬೆರೆವಂತೆ ಮುದುಡಿ ನಿದ್ರಿಸಬೇಕಾಗಿತ್ತು.

ಬ್ರಿಟಿಷ್ ಸಾಮ್ರಾಜ್ಯ ಮತ್ತು ಅದರ ಅಂಕೆಯ ಪೋಲೀಸ್, ಗೂಢಚಾರರು ಮತ್ತು ಅಧಿಕಾರಿಗಳು, ಪ್ರಕೃತಿ ಸಹಜವಾದ ಅತ್ಯುಷ್ಣ, ಚಳಿ, ಗಾಳಿ, ಮಳೆ, ಇವೆಲ್ಲವನ್ನು ಇದಿರಿಸಿ ಈ ಕ್ರಾಂತಿಕಾರಿಗಳು ಹೋರಾಡಿದರು.

ಅವರ ಬಾಳಗುರಿ, ಬದುಕಿನ ಧ್ಯೇಯ, ಜೀವನದ ಧರ್ಮ ಒಂದೇ–
ಭಾರತದ ಬಿಡುಗಡೆಯಾಗಬೇಕು.
ಸಮಾಜವಾದೀ ಸಮಾಜ ಸ್ಥಾಪಿತವಾಗಬೇಕು.
ಅದಕ್ಕಾಗಿ ಅವರು ಈ ಭಾರತಮಾತೆಯ ಅಡಿದಾವರೆಯಲ್ಲಿ–
ತಮ್ಮನ್ನೇ ತಾವು ಅರ್ಪಿಸಿದರು, ಬಲಿಯಾಗಿ.

## ೧೧

ಹತ್ತಾರು ದಿನಗಳಿಂದ ಅಜಯನ ಜೀವನವೇ ಶೂನ್ಯವಾಗಿತ್ತು.

ಅವನಿಗೆ ಪ್ರೇಮದ ಅಮೃತವನ್ನು ಕುಡಿಸಿ ಪಾಲಿಸಿ ಬೆಳೆಸಿದ ಬೇಣಿ ತಾಯಿ ಅವನನ್ನು ಅಗಲಿದ್ದಳು.

ಅವಳ ಅಂತ್ಯಕ್ರಿಯೆಗಾಗಿ ಬಂದಿದ್ದ ಅಣ್ಣ ಹಾಗೂ ಇತರ ಬಂಧುಗಳೆಲ್ಲ ಹೊರಟುಹೋದರು.

"ಈ ಊರು ಇನ್ನು ಸಾಕು ಅಜಯ. ನನ್ನೊಂದಿಗೆ ಬಂದುಬಿಡು. ಯಾವುದಾದರೂ ನೌಕರಿ ಹಿಡಿದುಕೊಂಡು ಬಾಳುವೆ ನಡೆಸು," ಎಂದು ಅಣ್ಣನೂ ಅತ್ತಿಗೆಯೂ ಅವನಿಗೆ ಉಪದೇಶ ನೀಡಿದರು. ಅಣ್ಣನ ಮಕ್ಕಳೂ ಅವನ ಅಂಗಿ ಹಿಡಿದು ಜಗ್ಗಿ-ಬಾ-ಎಂದು ಕರೆದಿದ್ದುವು.

ಸ್ನೇಹಿತರ ಸೌಹಾರ್ದದಿಂದ ಉಸಿರಾಡಿದ ಅವನಿಗೆ ಬಂಧುಗಳ ಬಾಂಧವ್ಯದ ಅನುಭವವೂ ಕೊಂಚ ದಿನ ಆಯಿತು.

ಅಣ್ಣನ ಯಾವ ಮಾತಿಗೂ ಅವನು ಉತ್ತರ ಕೊಡಲಾಗಲಿಲ್ಲ.

ತಾಯಿಯನ್ನು ಕಳೆದುಕೊಂಡುದರಿಂದ ಉಂಟಾದ ಆಘಾತದಿಂದ ಅವನ ಉತ್ಸಾಹವೆಲ್ಲ ಹಿಂಗಿತ್ತು. ಕಣ್ಣಿಗೆ ಎತ್ತಲೂ ಕತ್ತಲೆಯೊಂದೇ ಇದಿರಾಗುತ್ತಿತ್ತು. ನಿರಾಶೆ, ಭವಿಷ್ಯದ ಬಗೆಗೆ ಭೀತಿ, ಅವನನ್ನು ಕಾಡುತ್ತಿದ್ದುವು.

ಅವನ ದುಃಖ ಮರೆಸಲು ಎಲ್ಲರೂ ಪ್ರಯತ್ನಿಸಿದರು.

ಅಣ್ಣನೂ ಬಂಧುಗಳೂ ಊರಿಗೆ ಹಿಂತಿರುಗುವ ಸಂದರ್ಭವೂ ಬಂತು.

"ಇನ್ನು ನಾಲ್ಕಾರು ದಿನ ಒಬ್ಬಂಟಿಗನಾಗಿ ಕುಳಿತು ಯೋಚಿಸು. ನಿನ್ನ ಸ್ನೇಹಿತರೊಡನೆಯೂ ಮಾತುಕತೆ ನಡೆಸು."

"ಆಗಲಿ..."

"ಇಲ್ಲೇ ನೌಕರಿ ಸಿಕ್ಕಿದರೂ ಸರಿಯೇ. ನಾನೇನು ಬೇಡವೆನ್ನುವುದಿಲ್ಲ. ಆದರೆ, ಅಲ್ಲಿ ನನ್ನ ಜೊತೆಗೇ ಇದ್ದರೆ ನನಗೂ ಆನಂದ; ನಿನ್ನ ಅತ್ತಿಗೆಗೂ ಸಂತೋಷ."

" ದೇವರ ಇಚ್ಛೆ..."

" ಅದೇನೋ ನಿಜ. ಆದರೊಂದಿಗೆ ನಮ್ಮ ಪ್ರಯತ್ನವೂ ನಡೆಯಲೇ ಬೇಕು."

ಅಜಯ ಎತ್ತಲೋ ನೋಡುತ್ತ ಏನೋ ಯೋಚಿಸುತ್ತ ಕುಳಿತಿದ್ದ.

ಅವನ ದುಃಖವನ್ನು ಅರ್ಥ ಮಾಡಿಕೊಂಡ ಅವನ ಅಣ್ಣ ಊರಿಗೆ ಹೊರಟುಹೋದ. ನಾಲ್ಕೆಂಟು ದಿನಗಳಲ್ಲಿ ಎಲ್ಲವೂ ಸರಿಹೋಗುತ್ತದೆ. ಮತ್ತೆ ಮನೆಯ ವಾತಾವರಣ, ಪ್ರೀತಿಯ ಬಯಕೆ ಬೆಳೆದಾಗ ಅವನಾಗಿಯೇ ಬರುತ್ತಾನೆ ಎಂದುಕೊಂಡ. ಅಜಯನ ಕೈಗೆ, ನಾಲ್ಕೆಂಟು ದಿನಗಳ ಹಾಗೂ ಪ್ರಯಾಣದ ಖರ್ಚಿಗೆಂದು ಕೊಂಚ ಹಣ ನೀಡಿದ.

ಮನೆಯೂ ಬರಿದಾಯಿತು. ಮನೆಯಲ್ಲಿದ್ದ ಪಾತ್ರೆ ಮತ್ತಿತರ ಸಾಮುಗ್ರಿಗಳನ್ನೆಲ್ಲ ಅಜಯನ ಅಣ್ಣ ಒಯ್ದ. ಅಲ್ಲಿದ್ದುದು ಅಜಯನ ಹಾಸಿಗೆ, ಬಟ್ಟೆ ಪುಸ್ತಕಗಳು ಮಾತ್ರ.

ಅವೆಲ್ಲವೂ ಹೋದಾಗಲೂ ಅವನಿಗೇನೂ ಅನಿಸಲಿಲ್ಲ. ಎಲ್ಲರನ್ನು ಬೀಳ್ಕೊಟ್ಟು ಅವನು ಮನೆಗೆ ಹಿಂತಿರುಗಿದ. ಅದೀಗ ಪೂರ್ಣ ಬರಿದಾಗಿತ್ತು. ಆಗ ಅವನಿಗೆ ಪರಿಸ್ಥಿತಿಯ ಅರಿವಾಯಿತು. ಮನೆಯೊಳಗೆ ಇರಲು ಸಾಧ್ಯವಾಗದೆ, ಹೊರಗಡೆ ಬಂದು, ಕಣ್ಣೀರು ಸುರಿಸುತ್ತ ಕುಳಿತುಬಿಟ್ಟ.

ಅವನ ತಳಮಳವೆಲ್ಲ ನೀರಾಗಿ ಹರಿದು, ಹೃದಯದ ಭಾರ ಕಡಮೆಯಾಯಿತು.

' ಈಗ ನಾನು ಸ್ವತಂತ್ರ......'

ಅವನ ಮನ ಕೂಗಿ ಹೇಳಿತು. ಅವನ ವಿಚಾರ ಶಕ್ತಿಯನ್ನು ಮುಸುಕಿದ್ದ ಮೋಡ ಮರೆಯಾದಂತೆ ಅನಿಸಿತು. ಹೆತ್ತ ತಾಯಿಯ ಸೇವೆ ಮಾಡುವ ಪುಣ್ಯವಿಲ್ಲ. ಅವಳೇ ತನ್ನ ಸೇವೆ ಮಾಡಿದಳು. ಈಗ ಹೊತ್ತ ತಾಯಿನೆಲದ ಸೇವೆ ಮಾಡಿ ಆ ಋಣ ತೀರಿಸಲು ಸ್ವಾತಂತ್ರ್ಯ ದೊರೆತಿತ್ತು......

ಯೋಚಿಸುತ್ತಿದ್ದಂತೆ ಅಜಯನ ದುಃಖ ಕಡಮೆಯಾಯಿತು, ಉತ್ಸಾಹ ಮೂಡಿತು.

ತನ್ನ ಮುಂದಿನ ಕರ್ತವ್ಯದ ಅರಿವಾದೊಡನೆ, ತಾನು ಗೆಳೆಯರನ್ನು ಕಾಣದೆ ಬಹಳ ಕಾಲ ಕಳೆದಂತೆ ಅನಿಸಿತು ಅವನಿಗೆ. ಆದರೆ, ಇದೀಗ ಆತ

ಮನೆಯಿಂದ ಹೊರಡದೆ ಎರಡೇ ದಿನವಾಗಿತ್ತಷ್ಟೆ. ಆ ಮೊದಲು ಒಂದೆರಡು ಬಾರಿ ಸ್ನೇಹಿತರನ್ನು ಕಂಡು ವಿಷಯ ತಿಳಿಸಿ ಹಿಂತಿರುಗಿದ್ದ.

ಮನೆಯ ಬಾಗಿಲು ಭದ್ರಪಡಿಸಿ ಆತ ಪಂಡಿತ್ ಇಂದ್ರಪಾಲನಲ್ಲಿಗೆ ನಡೆದ. ಅಜಯ ಆ ಹಳೆಯ ಮನೆಯ ಮಹಡಿಯನ್ನೇರಿ ಅವರ ಮುಂದೆ ನಿಂತ.

ಪಂಡಿತ ಅವನನ್ನು ಬರಮಾಡಿ ಬಳಿಯಲ್ಲೇ ಕುಳ್ಳಿರಿಸಿಕೊಂಡ. ವಿಷಯ ತಿಳಿದು, ಮಾತು ಅಜಯನ ಗಾಯಕ್ಕೆ ನೋವು ತಂದೀತೆಂದು ಸುಮ್ಮನಾಗಿದ್ದ. ಆಗಲೇ ಅವನು ಅದೇನೋ ಲೇಖನದ ಪ್ರತಿ ತೆಗೆಯುತ್ತಿದ್ದ. ತನ್ನ ಡೆಸ್ಕ್‌ನ ಬದಿಗಿದ್ದ ಎರಡು ಪುಸ್ತಕಗಳನ್ನು ಎತ್ತಿ ಅಜಯನ ಮುಂದಿರಿಸಿ ಅವನು ಬರೆವಣಿಗೆ ಮುಂದುವರಿಸಿದ.

ಅಜಯ ಆ ಪುಸ್ತಕಗಳನ್ನು ತೆರೆದು ನೋಡಿದ. ಅವನ ಕುತೂಹಲ ಕೆರಳಿತು. ಹಾಗೇ ಓದಲಾರಂಭಿಸಿದ.

ಆ ದಿನ ಅಲ್ಲಿ ಬೇರೆ ಯಾರೂ ಇರಲಿಲ್ಲ.

"ನನಗೊಬ್ಬ ಗೆಳೆಯರಿದ್ದಾರೆ ಎಂದಿದ್ದೆನಲ್ಲ. ಅವರು ಇದನ್ನು ತಂದು ಕೊಟ್ಟರು."

"ಇತ್ತೀಚೆಗೆ ಬಂದಿದ್ದರೇನು ?"

"ಹೌದು. ಹಾಗೇ ಈ ಕೆಲವು ಲೇಖನಗಳನ್ನು ಕೊಟ್ಟಿದ್ದಾರೆ. ನಾನೂ ಗೆಳೆಯರೂ ಪ್ರತಿ ಮಾಡುತ್ತಿದ್ದೇವೆ."

"ನಾನಿನ್ನು ಪೂರ್ಣಕಾಲ ದುಡಿಯಲು ಸಿದ್ಧನಾಗಿದ್ದೇನೆ ಪಂಡಿತ್‌ಜಿ."

"ಅಣ್ಣ ಏನೆಂದರು ?"

"ಭವಿಷ್ಯ ನಿರ್ಧರಿಸಲು ನನಗೇ ಸ್ವಾತಂತ್ರ್ಯ ನೀಡಿದ್ದಾರೆ."

"ಇಲ್ಲೇ ಇದ್ದಾರೇನು ?"

"ಇಲ್ಲ. ಮುಂಜಾನೆ ಎಲ್ಲರೂ ಹಿಂತಿರುಗಿದರು. ಮನೆಯಲ್ಲಿ ನಾನೊಬ್ಬನೇ."

"ಈ ಪುಸ್ತಕಗಳನ್ನು ಎಚ್ಚರಿಕೆಯಿಂದ ತೆಗೆದುಕೊಂಡು ಹೋಗಿ ಓದಿ ನೋಡಿ."

"ಆಗಲಿ ಪಂಡಿತ್‌ಜಿ..."

“ನನಗೇನೋ ಯೋಚಿಸಿದಷ್ಟಕ್ಕೂ ಈಗಲೇ ಪಾರ್ಟಿ ಕಟ್ಟಿ ಸದಸ್ಯರನ್ನು ಸೇರಿಸುವುದು ಉಚಿತವಲ್ಲವೆಂದು ಅನಿಸುತ್ತದೆ.”

“ನಿಜ! ತಮ್ಮ ಕರ್ತವ್ಯದಿಂದಲೇ ಪ್ರತಿಯೊಬ್ಬನೂ ಸದಸ್ಯನಾಗುವ ಯೋಗ್ಯತೆ ಗಳಿಸಲಿ. ಬಲಿದಾನಕ್ಕೆ ಸಿದ್ಧರಾದವರೇ ನಮ್ಮ ಜತೆ ಸೇರಲಿ.”

“ನನ್ನದೂ ಅದೇ ಯೋಚನೆ. ನಮಗೀಗ ಹಣದ ಕೊರತೆಯೂ ಇಲ್ಲ. ನಾಲ್ಕೆಂಟು ಜನರನ್ನು ನಾನು ಸಲಹಬಲ್ಲೆ. ನಾನು ತಿಂಗಳಿಗೆ ನೂರು ರೂಪಾಯಿ ಸಂಪಾದಿಸುತ್ತಿದ್ದೇನೆ. ಗೆಳೆಯ ಪಂಡಿತ್ ರೂಪ್‌ಚಂದ್ ಕೂಡ ಅಷ್ಟೇ ದುಡಿಯುತ್ತಾನೆ. ನಮ್ಮ ಸಂಶೋಧನೆಯನ್ನು ನಡೆಸಬಹುದು.”

“ಅದೀಗ ಬಹು ಮುಖ್ಯ......”

“ನಿಜ. ಸಾಧ್ಯವಾದಷ್ಟು ಶೀಘ್ರವಾಗಿ ನಾವು ಬಾಂಬ್ ತಯಾರಿಸಬೇಕು. ಅಷ್ಟಾಯಿತೆಂದರೆ ಪಾರ್ಟಿಯ ಸ್ಥಾಪನೆಯಾದಂತೆಯೇ.”

“ಜಸವಂತ್ ಬಂದಿದ್ದನೇ ?”

“ಬರುತ್ತಿದ್ದಾನೆ. ದೇಶಕ್ಕಾಗಿ ಎಂಥ ತ್ಯಾಗಕ್ಕೂ ಸಿದ್ಧನಾದ ಜೀವ ಅದು. ಆದರೆ, ಸಂಸಾರದ ಸಂಕಲೆ ಬಿಗಿದಿದೆ ಅಷ್ಟೆ. ಈಗ ವಿದ್ಯಾರ್ಥಿಗಳಲ್ಲಿ ಕ್ರಾಂತಿಕಾರಿ ಚಟುವಟಿಕೆ ಹರಡಲೆಂದು ಶ್ರಮಿಸುತ್ತಿದ್ದಾನೆ.”

“ನಮ್ಮ ಧ್ಯೇಯದ ಪ್ರಚಾರವಾದರೆ ಅದೂ ಒಳಿತೇ ಅಲ್ಲವೇ ?”

“ಹಾಗಾಗಲೇ ಬೇಕು. ಕೆಲಸ ಕೆಲವರದಾದರೂ ಬಹುಸಂಖ್ಯಾತರ ಬೆಂಬಲ, ಸಹಕಾರ, ಸಹಾನುಭೂತಿ ದೊರೆತಾಗಲೇ ನಮ್ಮ ರಕ್ಷಣೆಯೂ ಸುಲಭವಾಗುತ್ತದೆ.”

ಪಂಡಿತ್ ಯಾವುದೇ ವಿಷಯವನ್ನು ಎತ್ತಿಕೊಂಡರೂ ನಿರ್ದಿಷ್ಟವಾಗಿ ವಿವರಿಸಿ, ಖಚಿತವಾದ ಅಭಿಪ್ರಾಯಕ್ಕೆ ಬರುತ್ತಿದ್ದನು. ಅವನದು ಮೀನ-ಮೇಷದ ನೀತಿಯಲ್ಲ. ಅಸಗತ್ಯವಾದ ಚರ್ಚೆಯೂ ಇಲ್ಲ. ತೀರ ಮಿತ ಭಾಷಿ. ಗುರಿಸಾಧನೆಯ ಚಿಂತೆಯೊಂದೇ ಅವನದು.

ಅಜಯ ಅಲ್ಲಿಂದ ಹೊರಟು ನೇರವಾಗಿ ಮನೆಗೆ ಬಂದ. ಅವನಿಗೆ ಭಾಗ್ಯದ ಬಾಗಿಲು ತೆರೆದಂತಾಗಿತ್ತು. ಯಾವುದೋ ನಿಕ್ಷೇಪವನ್ನು ಅರಸುವವನಂತೆ ಅವನು ಆ ಪುಸ್ತಕಗಳನ್ನು ಓದ ತೊಡಗಿದ. ಅಲ್ಲಿನ ಮುಖ್ಯ ವಿಷಯುಗಳನ್ನು ಗುರುತು ಹಾಕಿಕೊಂಡ.

ಬಾಂಬ್ ತಯಾರಿಸುವಲ್ಲಿ ನಡೆಸಬೇಕಾದ ಸಂಶೋಧನೆಗಳೆಲ್ಲ ಅಜಯನ ಮೇಲೆ ಬಿದ್ದವು. ಪಂಡಿತ್ ಮತ್ತವನ ಗೆಳೆಯ ರೂಪ್‌ಚಂದ್ ಬೇರೆ ವಿಷಯಗಳಲ್ಲಿ ಬಿಡುವಿಲ್ಲದೆ ದುಡಿಯಬೇಕಾಗಿತ್ತು. ಅವನು ತಂದಿದ್ದ ಪುಸ್ತಕಗಳಲ್ಲಿ ಅದೇನೂ ಮಹತ್ವದ ವಿಷಯಗಳು ದೊರೆಯಲಿಲ್ಲ. ದಿಣ್ಣೆ ಉರುಳಿಸುವ, ಬೆಟ್ಟ ಕೊರೆವ ಬಗೆಗೆ ಅಲ್ಲಿ ಹೇಳಲಾಗಿತ್ತು. ಬಾಂಬ್ ತಯಾರಿಕೆಗೆ ಅದರಿಂದ ನೆರವಾಗಲಿಲ್ಲ.

ಇಷ್ಟರಲ್ಲಿ ಹಿಂದೂಸ್ಥಾನ್ ಸೋಷಲಿಸ್ಟ್ ರಿಪಬ್ಲಿಕನ್ ಪಾರ್ಟಿಯ ಪ್ರಮುಖ ಕಾರ್ಯಕರ್ತ ಯಶ್‌ಪಾಲ್ ಲಾಹೋರಿಗೆ ಆಗಾಗ ಭೇಟಿ ಕೊಡಲಾರಂಭಿಸಿದ. ಪಂಡಿತನನ್ನು ಸಂದರ್ಶಿಸಿ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದ. ತಾನು ತಿಳಿಸಿದ್ದ ಆ ಗೆಳೆಯ ಇವರೇ ಎಂದು ಪಂಡಿತ, ಯಶ್‌ಪಾಲನನ್ನು ಅಜಯನಿಗೆ ಪರಿಚಯ ಮಾಡಿಕೊಟ್ಟ.

ಯಶ್‌ಪಾಲ್ ಮೇಲೆ ಪೋಲೀಸರ ದೃಷ್ಟಿ ಇತ್ತು. ಅವನನ್ನು ಹುಡುಕಲು ಶ್ರಮಿಸುತ್ತಿದ್ದರು. ಪಾರ್ಟಿಗೆ ಅತ್ಯಗತ್ಯವಾಗಿ ಹಣ ಬೇಕಾಗಿತ್ತು. ಹಣ ಕೂಡಿಸಲೆಂದು ಯಶ್‌ಪಾಲ್ ತನ್ನ ರಕ್ಷಣೆಯನ್ನು ಮರೆತು ಸಂಚರಿಸುತ್ತಿದ್ದ. ಪಾರ್ಟಿಯ ವೆಚ್ಚಕ್ಕಾಗಿ ದರೋಡೆ ಮೂಲಕ ಹಣ ಸಂಗ್ರಹಿಸುವುದು ಯಶ್‌ಪಾಲ್‌ಗೆ ಒಪ್ಪಿಗೆಯಿರಲಿಲ್ಲ. ದರೋಡೆಯಿಂದಾಗಿ ಕೊಲೆಯೂ ನಡೆಯಬೇಕಾದೀತು. ಆಗ ಜನರಲ್ಲಿ ವಿಷಾದ ವ್ಯಕ್ತವಾಗಿಯೇ ಆಗುತ್ತದೆ. ಪಾರ್ಟಿಗೆ ಜನತೆಯ ಬೆಂಬಲ ಕಡಮೆಯಾಗುತ್ತದೆ. ಸರ್ಕಾರವೂ ಕೂಡಾ, ದೇಶಕ್ಕಾಗಿ ದುಡಿಯಬಹುದಾದ ಶ್ರೇಷ್ಠ ತರುಣರನ್ನು ಬಲಿಕೊಡುವಂತಾಗುತ್ತದೆ. ಹತ್ಯಾಕಾಂಡದ ಉದಾಹರಣೆಯನ್ನು ನೀಡಿ ಅದೆಷ್ಟು ಮಂದಿ ವೀರ ಯುವಕರು ಅದರಿಂದ ಆಹುತಿಯಾದರೆಂದು ಆತ ವಿವರಿಸುತ್ತಿದ್ದ.

ಹಾಗಿದ್ದರೆ ಮುಂದೇನು ದಾರಿ ?

ದರೋಡೆ ದೇಶಭಕ್ತರಿಗೆ ಹೇಳಿದ ಕೆಲಸವಲ್ಲ. ಜನತೆಯ ಉದಾರ ನೆರವಂತೂ ಇಲ್ಲವಾಗಿದೆ.

ಯಶ್‌ಪಾಲ್, ಪಂಡಿತ್ ಮತ್ತಿತರ ಗೆಳೆಯರು ಈ ಬಗೆಗೆ ದೀರ್ಘ ಚರ್ಚೆ ನಡೆಸಿದರು. ಖೋಟಾ ನಾಣ್ಯ ತಯಾರಿಕೆಯೇ ಯುಕ್ತ ಹಾದಿಯೆಂಬ

ಅಭಿಪ್ರಾಯಕ್ಕೆ ಬಂದರು. ಪಾರ್ಟಿಯ ಖರ್ಚಿಗೆ ಬೇಕಾದಷ್ಟೇ ತಯಾರಿಸಿದರಾಯಿತು.

"ಈ ಕೆಲಸ ತಿಳಿದವನೊಬ್ಬನ ಪರಿಚಯ ನನಗಿದೆ," ಎಂದು ಪಂಡಿತ್ ಧ್ವನಿಗೂಡಿಸಿದ.

"ಆ ಹೊಣೆಯನ್ನು ವ್ಯವಸ್ಥೆಯನ್ನು ನೀವೇ ಮಾಡಬೇಕಾಗುತ್ತದೆ," ಎಂದ ಯಶ್‌ಪಾಲ್.

ಪಂಡಿತ್ ಅಜಯನೆಡೆ ನೋಡಿದ. ಖೋಟಾ ನಾಣ್ಯ ತಯಾರಿಕೆಗಾಗಿ ಸೂಕ್ತ ವ್ಯವಸ್ಥೆ ಮಾಡುವ ಹೊಣೆಯನ್ನು ಅಜಯನಿಗೆ ವಹಿಸಲಾಯಿತು.

ನಿಂತಲ್ಲಿ ನಿಲ್ಲಲಾಗದೆ ಸಂಚರಿಸುತ್ತಿದ್ದ ಯಶ್‌ಪಾಲ್ ಹೊರಟು ಹೋದರು.

ಕ್ರಾಂತಿಯ ಮನೋಧರ್ಮ ಸುಲಭವಾಗಿ ಹರಡುತ್ತದೆ. ಆದರೆ, ಫಕ್ಕನೆ ಪುಟಿದು ಅಡಗುತ್ತದೆ.

ಅದೊಂದು ದಿನ ಇಸ್ಲಾಮಿಯಾ ಕಾಲೇಜಿನಲ್ಲಿ ಮಾಯಾಲಾಂದ್ರ ಪ್ರದರ್ಶನ ನಡೆದಿತ್ತು.

ಕತ್ತಲ ಕೋಣೆಯಲ್ಲಿ ವಿದ್ಯಾರ್ಥಿಗಳು ತುಂಬಿದ್ದರು. ಲಾಂದ್ರದ ಬೆಳಕಿನಲ್ಲಿ ಚಿತ್ರಗಳನ್ನು ನೋಡುತ್ತಿದ್ದರು. ಎಲ್ಲರ ಗಮನವೂ ಅತ್ತ ಸರಿದಿತ್ತು. ವಿದ್ಯಾರ್ಥಿಗಳೂ, ಶಿಕ್ಷಕರೂ ಎಲ್ಲರೂ ಅಲ್ಲೇ ಸೇರಿದ್ದರು.

ಇದೇ ಸಂದರ್ಭವನ್ನು ಬಳಸಲು ಕಾಲೇಜಿನ ಕ್ರಾಂತಿಕಾರೀ ವಿದ್ಯಾರ್ಥಿಗಳು ನಿರ್ಧರಿಸಿ, ಯೋಜನೆ ಸಿದ್ಧಪಡಿಸಿಕೊಂಡಿದ್ದರು.

ಮಾಯಾಲಾಂದ್ರ ಪ್ರದರ್ಶನ ನಡೆಯುತ್ತಿದ್ದ ಹಾಲ್‌ನಲ್ಲಿ ನಗು, ಗಲಭೆ, ಚರ್ಚೆಯ ಗೊಂದಲ ಸಾಗಿತ್ತು. ಹೊರಗಡೆ ಕತ್ತಲು ಆವರಿಸಿತ್ತು.

ವಿದ್ಯಾರ್ಥಿಗಳ ತಂಡವೊಂದು ಕಾಲೇಜಿನ ಲ್ಯಾಬೊರೇಟರಿ ಮೇಲೆ ಧಾಳಿ ನಡೆಸಲು ಸಿದ್ಧತೆ ಮಾಡಿತ್ತು. ಲ್ಯಾಬೊರೇಟರಿಯ ಕಿಟಿಕಿಯ ಬಾಗಿಲು ಒಡೆದು, ಒಳ ನುಗ್ಗಿದರು. ಅವರು ತಮಗೆ ಬಾಂಬ್ ತಯಾರಿಕೆಗೆ ಅಗತ್ಯವೆನಿಸಿದ ದ್ರಾವಕಗಳು, ವೈಜ್ಞಾನಿಕ ಸಾಧನಗಳು, ಇತರ ಸಾಮಗ್ರಿಗಳನ್ನು ಎತ್ತಿಕೊಂಡು ನಡೆದರು. ಅಷ್ಟೇ ಸಾಲದೆಂದು, ದೇಶದ ಹಿತಕ್ಕಾಗಿ ಇವನ್ನು ಒಯ್ಯುತ್ತಿದ್ದೇವೆ ಎಂದೂ ಗೋಡೆ ಮೇಲೆ ಬರೆದರು.

ಈ ಕ್ರಾಂತಿಕಾರಿಗಳಿಗೆ ಬಾಂಬ್ ತಯಾರಿಸುವ ಬಯಕೆ ತೀವ್ರವಾಗಿತ್ತು, ನಿಜ. ಆದರೆ, ಕಳ್ಳತನ ಮಾಡುವ ಗೊಂದಲದಲ್ಲಿ, ಉತ್ಸಾಹದಲ್ಲಿ ಬೇಕಾದಷ್ಟು ಸಾಮಗ್ರಿಗಳನ್ನು ದೋಚಿಕೊಂಡರು. ಅಗತ್ಯವಾದ ವಸ್ತುಗಳನ್ನೆಲ್ಲೋ ಮರೆತುಬಿಟ್ಟರು. ಅಂತೂ ಕೊನೆಗೆ ತಾವು ತಂದ ಸಾಮಗ್ರಿಗಳನ್ನು ಎಲ್ಲಿಡುವುದೆಂಬುದೇ ಅವರಿಗೆ ಚಿಂತೆಯಾಯಿತು.

ಆದರೂ ಬಾಂಬ್ ತಯಾರಿಕೆಗೆ ಅಗತ್ಯವಾದ ದ್ರಾವಕ ಅವರು ಕೈಬಿಟ್ಟಿದ್ದರು. ಈಗ ಅದನ್ನು ತಾವೇ ತಯಾರಿಸೋಣವೆಂದು ಈ ವಿಜ್ಞಾನ ಶಾಸ್ತ್ರದ ಉತ್ಸಾಹಿಗಳು ನಿರ್ಧರಿಸಿದರು.

ದೇವಾಲಯದಲ್ಲೇ ಅನೀತಿ ನಡೆದರೆ ಅದೂ ನೀತಿಯಾದೀತು, ಎನ್ನುವಂತೆ ಪೋಲೀಸ್ ಗೂಢಚಾರ ಅಧಿಕಾರಿಯೊಬ್ಬರ ಮನೆಯ ವಠಾರದಲ್ಲೇ ಈ ಕೆಲಸ ನಡೆಯಿತು. ಅಧಿಕಾರಿಯ ಅಳಿಯನೂ ಈ ಗುಂಪಿನಲ್ಲಿದ್ದ. ಸರಿ. ಮನೆಯ ಕೋಣೆಯೊಂದರಲ್ಲಿ ವಿದ್ಯಾರ್ಥಿಗಳೆಲ್ಲ ಸೇರಿದರು. ಅಧಿಕಾರಿ ಕಚೇರಿಗೆ ಹೊರಟೊಡನೆ ತಮ್ಮ ವಿಜ್ಞಾನ ಸಂಶೋಧನೆ ಆರಂಭಿಸಿದರು. ಅಂತೂ ಒಂದು ದಿನ ಯಾವುದೋ ದ್ರಾವಕಕ್ಕೆ ಮತ್ತಾವುದನ್ನೋ ಸೇರಿಸಿದರು. ಕೋಣೆಯಲ್ಲೆಲ್ಲ ಗ್ಯಾಸ್ ತುಂಬಿತು. ಇನ್ನೇನು ಅಧಿಕಾರಿ ಮನೆಗೆ ಬರುವ ವೇಳೆಯೂ ಆಗಿತ್ತು. ವಿದ್ಯಾರ್ಥಿಗಳು ಹೆದರಿ ನಡುಗಿದರು.

ಕಾಲೇಜಿನಲ್ಲಿ ಕಳ್ಳತನವಾದ ವಿಷಯವಂತೂ ಆ ಅಧಿಕಾರಿಗೆ ತಿಳಿದೇ ಇತ್ತು. ಕೋಣೆಯಲ್ಲಿದ್ದ ಸಾಮಗ್ರಿಗಳನ್ನು ಅಡಗಿಸಿಡಲು ವಿದ್ಯಾರ್ಥಿಗಳು ಮುಂದಾದರು. ಅಂತೂ ಎಲ್ಲರೂ ಸೆರೆ ಸಿಕ್ಕುವ ಘಳಿಗೆ ಬಂತೆಂದು ಹೆದರಿದರು.

ಆದರೆ, ಅಧಿಕಾರಿ ಹಿಂತಿರುಗುವ ವೇಳೆಗೆ ಗ್ಯಾಸ್ ವಾಸನೆ ಅಳಿದಿತ್ತು. ವಿದ್ಯಾರ್ಥಿಗಳಿಗೆ ಹೋದ ಜೀವ ಬಂದಂತಾಯಿತು.

ಈ ನೆಮ್ಮದಿ ಕೆಲವೇ ದಿನಗಳ ಕಾಲ. ಅಷ್ಟರಲ್ಲಿ ಕಳ್ಳತನದ ಬಗೆಗೆ ಪೋಲೀಸರಿಗೆ ಕುರುಹು ದೊರೆಯಿತು. ವಿದ್ಯಾರ್ಥಿಗಳಿಗೂ ದಸ್ತಗಿರಿಯ ದಿನ ಹತ್ತಿರವಾಯಿತೆಂಬುದು ಗೊತ್ತಾಯಿತು. ಲ್ಯಾಬೊರೇಟರಿಯಿಂದ ಕದ್ದ ಸಾಮಗ್ರಿಗಳನ್ನು ಎಲ್ಲಾದರೂ ಹೊತ್ತು ಹಾಕುವುದೇ ಅವರಿಗೆ ಸಮಸ್ಯೆಯಾಯಿತು.

ಆನಂದ್ ಅವರಲ್ಲೊಬ್ಬ. ಆತ ಅಜಯನ ಸಹಾಯ ಬೇಡಿದ.

ಅಜಯ ಆಗಲೇ ಕ್ರಾಂತಿಕಾರಿ ರಂಗದಲ್ಲಿ ಬಹಳ ಮುಂದೆ ಸಾಗಿ ಅನುಭವ ಗಳಿಸಿದ್ದ. ವಿದ್ಯಾರ್ಥಿಗಳ ಹಿಂದೆ ಗೂಢಚಾರರು ಸುಳಿಯುತ್ತಿರ ಬಹುದೆಂಬ ಶಂಕೆ ಆತನಿಗಾಯಿತು.

ಲ್ಯಾಬೊರೇಟರಿಯ ಸಾಮಗ್ರಿಗಳನ್ನೆಲ್ಲ ಗಾಡಿಯೊಂದರಲ್ಲಿ ತುಂಬಿ ಠಕ್ಸಾಲಿ ಗೇಟ್ ಬಳಿಯ ಖಾಲಿ ಮನೆಯೊಂದರ ಬಳಿಗೆ ಕಳುಹಿಸುವಂತೆ ಅಜಯ ಸೂಚಿಸಿದ.

ಅಲ್ಲಿಗೆ ಸಾಮಗ್ರಿಗಳು ಬಂದುವು. ಅದನ್ನು ಕೆಳಗಿಳಿಸಿ, ಗಾಡಿಯವ ನನ್ನು ಅಜಯ ಬೀಳ್ಕೊಟ್ಟ. ಅವನೂ ಆನಂದನ ಮತ್ತೊಬ್ಬ ಗೆಳೆಯನೂ ಕಣ್ಮರೆಯಾಗುವವರೆಗೂ ಕಾದಿದ್ದು, ಆ ಬಳಿಕ ಮತ್ತೊಂದು ಗಾಡಿಯಲ್ಲಿ ಅದನ್ನೆಲ್ಲ ತುಂಬಿ, ಸುರಕ್ಷಿತವಾದ ಪ್ರದೇಶಕ್ಕೆ ಮುಟ್ಟಿಸಿದ.

ಪೋಲೀಸರು ಸಂದೇಹಗೊಂಡು ವಿದ್ಯಾರ್ಥಿಗಳ ಬೆನ್ನುಹತ್ತಿದರು. ಖಾಲಿ ಮನೆ ಕಡೆಗೂ ಬಂದು ವಿಚಾರಿಸಿದರು. ಆದರೆ ಸುಳಿವು ಸಿಗಲಿಲ್ಲ.

ಕೆಲವು ದಿನಗಳಲ್ಲೇ ಹಲವಾರು ವಿದ್ಯಾರ್ಥಿಗಳ ದಸ್ತಗಿರಿಯಾಯಿತು. ಹೆಚ್ಚಿನವರೆಲ್ಲ ಮುಸ್ಲಿಮರು, ಒಬ್ಬ ಮಾತ್ರ ಹಿಂದೂ. ಅಚ್ಚರಿಯೆಂದರೆ ಆನಂದನ ದಸ್ತಗಿರಿಯಾಗಿರಲಿಲ್ಲ.

ಅಜಯನ ಬಗೆಗೆ ಪೋಲೀಸರು ವಿಚಾರಣೆ ನಡೆಸುತ್ತಿದ್ದರು. ಈಗ ಆನಂದನ ಸೆರೆಯೂ ನಡೆಯದಿದ್ದುದನ್ನು ಕಂಡು ಅಜಯನಿಗೂ ಕೊಂಚ ಸಂದೇಹ ಮೂಡಿತು. ಪಂಡಿತನೂ ಈ ಬಗೆಗೆ ಅಜಯನಿಗೆ ಎಚ್ಚರಿಕೆ ನೀಡಿದ.

"ಈ ಗೊಂದಲದಲ್ಲಿ ಸಿಲುಕಿದರೆ ನಮ್ಮ ಯೋಜನೆಗಳೆಲ್ಲ ವಿಫಲ ವಾಗುತ್ತವೆ."

"ಮುಂದೇನು ಮಾಡಲಿ ?"

"ಸಾಣ್ಯದ ಕಾರ್ಖಾನೆ! ಆ ಹಾದಿಯಲ್ಲಿ ಮುನ್ನಡೆ. ನಗರದಿಂದ ಮರೆಯಾಗಬೇಕಾದೀತು," ಎಂದು ಪಂಡಿತ್ ಇಂದ್ರಪಾಲ್ ತಿಳಿಸಿದ.

ಆಗಲೇ ಯಶ್‌ಪಾಲ್ ಜಮ್ಮುವಿನಲ್ಲಿ ಸೂಕ್ತ ವ್ಯವಸ್ಥೆ ಮಾಡಿದ್ದ. ನಾಣ್ಯ ತಯಾರಿಕೆ ಬಗೆಗೆ ಬೇಕಾದ ಕುಲುಮೆ, ದ್ರಾವಕ, ಲೋಹ ಇತ್ಯಾದಿಗಳನ್ನೆಲ್ಲ ಸಂಗ್ರಹಿಸಲಾಗಿತ್ತು.

“ನಾಣ್ಯ ತಯಾರಿಕೆ ತಿಳಿದ ಭಾಗ್‌ರಾಮ್ ಬೇಗನೇ ಬರುವವರಿದ್ದಾನೆ. ಆ ಬಳಿಕ ಮುಂದಿನ ಕಾರ್ಯ ನಿರ್ಧರಿಸೋಣ,” ಎಂದ ಪಂಡಿತ್ ಇಂದ್ರಪಾಲ್.



# ೧೨

" ಇಲ್ಲಿ ಅವನನ್ನು ಜಮುನಾ ನದಿಗೆ ಆಹುತಿ ಕೊಡಲೇಬೇಕು."

" ತೀರಾ ಹಿಂಸೆಯಾಗುವುದು......"

" ಹಿಂಸೆಗೆ ಹೆದರಿದರೆ, ನಮ್ಮ ಪಾರ್ಟಿಗೇ ಭೀಕರ ಅಪಾಯ ಒದಗುವುದು. ನಮ್ಮೆಲ್ಲರನ್ನು ನಾಶಪಡಿಸಲು ಇಂಥ ಒಬ್ಬ ಹೇಡಿ ಇದ್ದರೆ ಸಾಕು," ಎಂದು ಜತೀನ್‌ದಾಸ್ ರೋಷದಿಂದ ಕಿಡಿಕಿಡಿಯಾಗಿ ಎಚ್ಚರಿಕೆ ನೀಡಿದ.

" ಅಂಥ ಕೆಲಸಕ್ಕೂ ಈತ ಅಯೋಗ್ಯ. ಧೈರ್ಯವಾಗಿ ಇಲ್ಲಿ ನಡೆದುದನ್ನು ಹೇಳಲಾರ."

" ಅದು ನಿನ್ನ ಊಹೆ ಸರ್ದಾರ್. ಪೋಲೀಸರ ಕನಸು ಬಿದ್ದರೂ ಸಾಕು. ಈತ ಅವರ ಕಡೆ ಸೇರಿ ನಮ್ಮೆಲ್ಲರ ವಿರುದ್ಧ ಸಾಕ್ಷಿ ನುಡಿದಾನು."

ಜತೀನ್ ತೀವ್ರವಾಗಿ ವಾದಿಸಿದ. ಆದರೆ, ಅಕಾರಣವಾಗಿ ವಿದ್ಯಾರ್ಥಿಯೊಬ್ಬನ ಬಾಳನ್ನು ಮುಟುಕುಗೊಳಿಸಲು ಭಗತ್‌ಸಿಂಗ್ ಒಪ್ಪಲಿಲ್ಲ. ತಾವು ಆತನನ್ನು ಕರೆತಂದುದೇ ಅವಿವೇಕವಾಯಿತು. ಉದ್ವೇಗ ಉತ್ಸಾಹಗಳ ಪರಿಣಾಮವಾಗಿ ಅವನನ್ನು ಕರೆದುದಾಯಿತು. ಈಗ ಮನ್ನಿಸಿ ಕಳುಹಿಸಿಬಿಡೋಣ, ಎಂದು ಭಗತ್‌ಸಿಂಗ್ ವಾದಿಸಿದ.

ಈ ಯೋಜನೆಗೆ ಜತೀನ್ ಒಪ್ಪದಿದ್ದರೂ ಮುಂದೆ ವಾದಿಸಲಿಲ್ಲ.

ಕ್ರಾಂತಿಕಾರೀ ಕ್ಷೇತ್ರದಲ್ಲಿ ಬಹಳ ಕಾಲದಿಂದ ದುಡಿದು ಅನುಭವ ಗಳಿಸಿದ ಜತೀನ್‌ಗೆ ಅಂಜುಬುರುಕರಿಂದ ಆಗುವ ಹಾನಿಯ ಅರಿವಿತ್ತು.

ಆಗ್ರಾದಲ್ಲಿ ಬಾಂಬ್ ತಯಾರಿಸಲು ತೀರ್ಮಾನಿಸಿದ ಕ್ರಾಂತಿಕಾರರು, ತಮ್ಮ ಕಾರ್ಯ ಶೀಘ್ರವಾಗಿ ಹಾಗೂ ಸಫಲವಾಗಿ ನಡೆಯಲೆಂದು ಕೆಲ ವಿಜ್ಞಾನದ ವಿದ್ಯಾರ್ಥಿಗಳ ನೆರವು ಪಡೆಯಲು ನಿರ್ಧರಿಸಿದರು. ಹಲವಾರು ಮಂದಿ ತಜ್ಞರಿದ್ದಲ್ಲಿ ಶೀಘ್ರವಾಗಿ ಹೆಚ್ಚಿನ ಪ್ರಗತಿ ಸಾಧ್ಯವೆಂದು ಅವರ ಚಿಂತನೆಯಾಗಿತ್ತು.

ತನಗೆ ಅರಿತಿದ್ದ ವಿಜ್ಞಾನ ಪದವೀಧರನೊಬ್ಬನನ್ನು ಭಗತ್‌ಸಿಂಗ್ ಸೂಚಿಸಿದರು. ಅವನನ್ನು ಕರೆಸಲಾಯಿತು.

ಆಗ್ರಾದ ಬಾಂಬ್ ತಯಾರಿಕಾ ಕೇಂದ್ರದಲ್ಲಿನ ಸಿದ್ಧತೆಗಳನ್ನು ಕಂಡೇ ಆ ಯುವಕ ನಡುಗಲಾರಂಭಿಸಿದ. ಇಷ್ಟೊಂದು ಬಾಂಬ್‌ಗಳ ತಯಾರಿಕೆಯ ಬಗೆಗೆ ಅವನಿಗೆ ಕಲ್ಪನೆಯೇ ಇರಲಿಲ್ಲ. ಅಲ್ಲಿರುವ ದ್ರಾವಕ, ಮತ್ತಿತರ ವಸ್ತುಗಳನ್ನು ಕಂಡು ಭೀತಿಯಿಂದ ಅವನ ಮುಖ ಬಿಳಚಿಕೊಂಡಿತು. ಹೆದರಿ, ನಡುಗಿ ಅವನಿಗೆ ಜ್ವರವೂ ಬಂತು. ತನ್ನನ್ನು ಬಿಟ್ಟುಬಿಡಿ, ತಾನು ಇಲ್ಲಿರಲಾರೆ ಎಂದು ಅಂಗಲಾಚಿ ಬೇಡಿಕೊಳ್ಳಲಾರಂಭಿಸಿದ.

ಬಾಂಬ್ ತಯಾರಿಕಾ ಕೇಂದ್ರವನ್ನು ನೋಡಿ, ಅಲ್ಲಿನ ಪ್ರಮುಖರನ್ನು ಕಂಡ ಈ ವಿದ್ಯಾರ್ಥಿಯನ್ನು ಹೋಗಗೊಟ್ಟರೆ ಪಾರ್ಟಿಯೇ ಅಪಾಯಕ್ಕೆ ಒಳಗಾದೀತೆಂದು ಜತೀನ್‌ದಾಸ್ ಹೆದರಿ ಎಚ್ಚರಿಕೆ ನೀಡಿದರು. ಅವನನ್ನು ಹಿಂದಕ್ಕೆ ಹೋಗಗೊಡಬಾರದು, ಯಮುನಾನದಿಯಲ್ಲಿ ಮುಳುಗಿಸಿ ಕೊಂದರೂ ಚಿಂತೆಯಿಲ್ಲ, ಎಂದು ಜತೀನ್ ಖಂಡಿತವಾಗಿ ತಿಳಿಸಿದ.

ಭಗತ್‌ಸಿಂಗ್‌ನ ಉದಾರತೆ ಅವನನ್ನು ಬದುಕಿಸಿತು.

ಆದರೆ ಜತೀನ್‌ದಾಸನ ಸಂದೇಹ ನಿಜವಾಯಿತು.

ಆ ವಿದ್ಯಾರ್ಥಿ ಪೋಲೀಸರಿಗೆ ನೆರವಾದುದರಿಂದ ಸಂಯುಕ್ತ ಪ್ರಾಂತ್ಯದ ಹಲವಾರು ಕ್ರಾಂತಿಕಾರರ ದಸ್ತಗಿರಿಯಾಯಿತು.

ಭಗತ್‌ಸಿಂಗ್ ಮತ್ತು ಅವರ ಗೆಳೆಯರು ಆಗ್ರಾದಿಂದ ಬೇರೆ ಕಡೆಗೆ ಸಾಗುವ ಪರಿಸ್ಥಿತಿಯೂ ಒದಗಿಬಂತು.

ಆದರೂ, ಜತೀನ್‌ದಾಸನ ಹಿರಿತನದಲ್ಲಿ ಆಗ್ರಾದ ಬಾಂಬ್ ಕಾರ್ಖಾನೆಯಲ್ಲಿ ನಾಲ್ಕು ಬಾಂಬ್‌ಗಳು ಸಿದ್ಧವಾದುವು.

ಬ್ರಿಟಿಷ್ ಸರ್ಕಾರದ ದಬ್ಬಾಳಿಕೆ ತೀವ್ರವಾದಷ್ಟೂ ಕ್ರಾಂತಿಕಾರೀ ತರುಣರ ಉತ್ಸಾಹ ಬೆಳೆಯುತ್ತ ಸಾಗಿತು.

ಯಾವುದೇ ನಿರ್ಣಯಗಳಿಗೂ ಘೋಷಣೆಗಳಿಗೂ ಸರ್ಕಾರ ಮಣಿಯುವುದಿಲ್ಲ ಎಂಬ ಅರಿವು ಸ್ವರಾಜ್ಯ ಪಾರ್ಟಿಗೂ ಈಗ ಆಯಿತು. ಆದರೆ, ಮುಂದೇನು ಮಾಡಬೇಕೆಂಬ ನಿರ್ಧಾರ ಮಾತ್ರ ಇನ್ನೂ ಆಗಿರಲಿಲ್ಲ. ಜನತೆಯ

ಪ್ರಚಂಡ ಜಾಗೃತಿ, ಅವರ ಮುನ್ನಡೆ, ಬಯಕೆ, ಬೇಡಿಕೆಗಳೇ ಕಾಂಗ್ರೆಸ್ ನಾಯಕರನ್ನು ಮುನ್ನಡೆಸುವ ಸಾಧನವಾಗಿದ್ದುವು.

ಬ್ರಿಟಿಷ್ ಸಾಮ್ರಾಜ್ಯವು ಭಾರತದಲ್ಲಿ ಆಡಳಿತೆ ನಡೆಸುವ ಬಗೆಗೆ ತಮ್ಮ ಸಹಕಾರ ಪಡೆಯಬೇಕು, ಆಂತರಿಕ ಆಡಳಿತೆಯನ್ನು ಭಾರತೀಯರಿಗೆ ವಹಿಸಿ ಕೊಡಬೇಕು, ಎಂಬುದಷ್ಟೆ ಕಾಂಗ್ರೆಸ್ ನಾಯಕರ ಅಂದಿನ ಬಯಕೆಯಾಗಿತ್ತು.

ಆದರೆ, ಜನಕೋಟಿ ಅವರಿಗಿಂತಲೂ ಒಂದು ಹೆಜ್ಜೆ ಮುನ್ನಡೆದಿತ್ತು.

ನಾಯಕರು ಜನತೆಯನ್ನು ಮುನ್ನಡೆಸುವ ಬದಲಾಗಿ ಈಗ ಜನತೆಯೇ ನಾಯಕರನ್ನು ಮುನ್ನಡೆವಂತೆ ಒತ್ತಾಯಿಸುವ ವಾತಾವರಣ ಮೂಡಿತ್ತು.

ಬ್ರಿಟಿಷ್ ಸಾಮ್ರಾಜ್ಯ ಮಾತ್ರ ಜನತೆಯ ಯಾವ ಬೇಡಿಕೆಯನ್ನೂ ಗಮನಿಸಿಲ್ಲ. ಅದರ ದೃಷ್ಟಿಯಲ್ಲಿ ಜನತೆಯ ಪ್ರಚಂಡ ಮೆರವಣಿಗೆ, ಸಭೆ, ಪ್ರತಿಭಟನೆ, ಕ್ರಾಂತಿಗಳೆಲ್ಲ ಪುಂಡಾಟಿಕೆ; ದೇಶದ ಪ್ರಮುಖರ, ಕಾಂಗ್ರೆಸ್ ಸಂಸ್ಥೆಯ ನಿರ್ಣಯಗಳೆಲ್ಲ ಕೇವಲ ಅರ್ಜಿಗಳು.

ಭಾರತದ ಆಡಳಿತೆಯಲ್ಲಿ ಏನು ಸುಧಾರಣೆಯಾಗಬೇಕೆಂದು ಪರಿಶೀಲಿಸಿ ವರದಿ ಮಾಡಲು ಬ್ರಿಟಿಷ್ ಸರ್ಕಾರವು ಒಂದು ಸಮಿತಿಯನ್ನು ನೇಮಿಸಿತು. ಸಮಿತಿಯ ನೇಮಕದ ಮೂಲಕ ಭಾರತದಲ್ಲಿನ ಗೊಂದಲವನ್ನು ಬಗೆಹರಿಸಲು ಅದು ಯೋಚಿಸಿತು. ಸ್ಟಾನ್ಲೇ ಬಾಲ್ಡ್ವಿನ್‌ರವರ ಕನ್‌ಸರ್‌ವೇಟಿವ್ ಬ್ರಿಟಿಷ್ ಸರ್ಕಾರವು ಭಾರತದಲ್ಲಿ ಆಗಬಹುದಾದ ಸುಧಾರಣೆಗಳ ಬಗೆಗೆ ವರದಿ ಮಾಡಲು ಸೈಮನ್ ಎಂಬುವರ ನೇತೃತ್ವದಲ್ಲಿ ಏಳು ಮಂದಿಯ "ಕಮಿಷನ್" (ಸಮಿತಿ) ನೇಮಿಸಿತು. ಈ ಸಮಿತಿಯಲ್ಲಿ ಭಾರತೀಯನೊಬ್ಬನೂ ಇರಲಿಲ್ಲ.

ಜನತೆಯ ನಿಜವಾದ ಬೇಡಿಕೆಗಳನ್ನು ಕಡೆಗಣಿಸುವ ಅಥವಾ ಮುಂದೆ ದೂಡುವ ಈ ಸಮಿತಿ ನೇಮಕದ ರಾಜತಂತ್ರವನ್ನು ಕಾಂಗ್ರೆಸ್ ವಿರೋಧಿಸಿತು.

೧೯೨೭ ರ ಡಿಸೆಂಬರ್‌ನಲ್ಲಿ ಡಾ॥ ಎಂ. ಎ. ಅನ್ಸಾರಿಯವರ ಅಧ್ಯಕ್ಷತೆಯಲ್ಲಿ ಮದ್ರಾಸಿನಲ್ಲಿ ಕಾಂಗ್ರೆಸ್ ಅಧಿವೇಶನ ಸೇರಿತು. ಪ್ರತಿಯೊಂದು ಹಂತದಲ್ಲೂ ಪ್ರತಿಯೊಂದು ರೀತಿಯಿಂದಲೂ ಈ "ಸೈಮನ್ ಕಮಿಷನ್" ಬಹಿಷ್ಕರಿಸಬೇಕೆಂದು ಕಾಂಗ್ರೆಸ್ ನಿರ್ಣಯಿಸಿತು. ಪ್ರಚಂಡ ಪ್ರತಿಭಟನಾ ಪ್ರದರ್ಶನ ನಡೆಸಲೂ ಜನತೆಗೆ ಕರೆ ನೀಡಿತು.

ಮರುವರ್ಷ ಫೆಬ್ರವರಿ ಮೂರರಂದು ಸರ್‌ಜಾನ್ ಸೈಮನ್‌ರವರ ನಿಯೋಗ ಬೊಂಬಾಯಿಗೆ ಕಾಲಿಟ್ಟಾಗ ಬ್ರಿಟಿಷ್ ಸಾಮ್ರಾಜ್ಯದ ಸೇವಕರಾಗಿ ಸರ್ ಬಿರುದು ಪಡೆದ ಇಪ್ಪತ್ತೆರಡು ಮಂದಿ ಭಾರತೀಯರಲ್ಲಿ ಒಬ್ಬರೂ ಅವರನ್ನು ಸ್ವಾಗತಿಸಲು ಮುಂದಾಗಲಿಲ್ಲ. ದೇಶದಾದ್ಯಂತ ಹರತಾಳ, ಪ್ರದರ್ಶನ, ಸಭೆಗಳು ನಡೆದುವು. "ಸೈಮನ್, ಹಿಂದೆ ಹೋಗಿ!" ಎಂಬ ಘೋಷಣೆಗಳು ದೇಶದ ಮೂಲೆ ಮೂಲೆಗಳಲ್ಲೂ ಮೊಳಗಿದುವು.

ಬಲವಾದ ಮಿಲಿಟರಿ ಮತ್ತು ಪೋಲೀಸ್ ಕಾವಲಿನಲ್ಲಿ ಸಮಿತಿಯು ದೇಶದ ವಿವಿಧ ಪ್ರದೇಶಗಳಿಗೆ ಭೇಟಿ ನೀಡಿತು. ಎಲ್ಲೆಲ್ಲೂ ಕಪ್ಪುಬಾವುಟವನ್ನು ಕಂಡಿತು.

ಈ ಜನಜಾಗೃತಿ, ಪ್ರತಿಭಟನೆಗಳು ಕ್ರಾಂತಿಕಾರರಲ್ಲಿ ನೂತನ ಸ್ಫೂರ್ತಿ ತುಂಬಿದುವು. ಹಾಗೇ ಪೋಲೀಸರ ಸರ್ಪಕಾವಲೂ ಬಲವಾಗತೊಡಗಿತ್ತು.

ಸಂಯುಕ್ತ ಪ್ರಾಂತ್ಯ (ಉತ್ತರ ಪ್ರದೇಶ) ದ ಕ್ರಾಂತಿಕಾರರು ಕೆಲವು ರಿವಾಲ್ವರ್‌ಗಳನ್ನು ಪಿಸ್ತೂಲುಗಳನ್ನು ಸಂಗ್ರಹಿಸಿದ್ದರು. ಹಿರಿಯ ಪೋಲೀಸ್ ಅಧಿಕಾರಿ ರಾಯ್ ಬಹದ್ದೂರ್ ಜೆ. ಎನ್. ಬ್ಯಾನರ್ಜಿಯವರನ್ನು ಕೊಲೆ ಮಾಡಲೂ ಅವರು ಯೋಚಿಸಿದ್ದರು. ಲಲಿತ್ ಕುಮಾರ್ ಮುಖರ್ಜಿ ಮತ್ತು ಅಜಯ ಕುಮಾರ್ ಘೋಷ್ ಈ ಗುಂಪಿನಲ್ಲಿದ್ದರು.

ಪಂಜಾಬ್ ಶಾಖೆಯನ್ನು ಯಶ್‌ಪಾಲ್ ಸಂಘಟಿಸುತ್ತಿದ್ದರು. ಶುಕದೇವ್ ಈ ಪ್ರಾಂತ್ಯದ ನಿಜವಾದ ನಾಯಕರೆನಿಸಿದ್ದು, ಭಗತ್‌ಸಿಂಗ್‌ರೊಂದಿಗೆ ಅವರಿಗೆ ನಿಕಟ ಸಂಪರ್ಕವಿತ್ತು. ಇಡೀ ಉತ್ತರ ಭಾರತದ ಕ್ರಾಂತಿಕಾರಿ ತಂಡಗಳ ಹೊಂದಾಣಿಕೆಯ ಹೊಣೆ ಭಗತ್‌ಸಿಂಗ್ ಮೇಲಿತ್ತು. ಬಂಗಾಲದ ಕ್ರಾಂತಿಕಾರ ತಂಡಗಳ ಸಂಪರ್ಕವೂ ಇದ್ದಿತು.

ಆಗ್ರಾ, ಲಾಹೋರ್, ಫಿರೋಜ್‌ಪುರ್, ಬಿಹಾರ್, ಕಾನ್‌ಪುರ, ಅಲಹಾಬಾದ್, ದೆಹಲಿ, ಮುಂತಾದ ವಿವಿಧ ಕಡೆಗಳಲ್ಲೀಗ ಕ್ರಾಂತಿಕಾರೀ ಯುವಕರ ಬಲವಾದ ತಂಡಗಳು ಸ್ಥಾಪಿತವಾಗಿದ್ದವು.

ಈ ಎಲ್ಲ ಸಂಘಟನೆಯನ್ನೂ ಒಂದುಗೂಡಿಸುವ ಅಗತ್ಯ ಈಗ ಬಲವಾಯಿತು. ಸೈಮನ್ ಕಮಿಷನ್ ಆಗಮನ, ಅದಕ್ಕೆ ಜನತೆ ವ್ಯಕ್ತಪಡಿಸಿದ ಪ್ರತಿಭಟನೆಯನ್ನು ಕ್ರಾಂತಿಕಾರೀ ನಾಯಕರು ಅರ್ಥಮಾಡಿಕೊಂಡರು. ದೇಶ

ದಾದ್ಯಂತ ಒಮ್ಮೊಂದೊಮ್ಮೆ ಕ್ರಾಂತಿ ನಡೆದರೆ ಜನತೆ ಜತೆಗೂಡುತ್ತಾರೆ ಎಂಬ ವಿಶ್ವಾಸ ಉಂಟಾಯಿತು.

ಅಖಿಲ ಭಾರತ ವ್ಯಾಪ್ತಿಯ ಕೇಂದ್ರೀಕೃತ ಸಂಸ್ಥೆಯೊಂದನ್ನು ಸ್ಥಾಪಿಸಲು ಭಗತ್‌ಸಿಂಗ್ ಮತ್ತು ಚಂದ್ರಶೇಖರ ಆಜಾದ್ ನಿರ್ಧರಿಸಿದರು.

ದೆಹಲಿಯ ಫಿರೋಜ್‌ಶಹಾ ತೊಘ್ಲಕ್ ಕೋಟೆಯಲ್ಲಿ ೧೯೨೮ ರ ಸೆಪ್ಟೆಂಬರ್ ಒಂಭತ್ತರಂದು ಉತ್ತರ ಭಾರತದ ವಿವಿಧ ಕಡೆಗಳ ಕ್ರಾಂತಿಕಾರಿ ನಾಯಕರ ಗುಪ್ತ ಸಭೆಯೊಂದು ನಡೆಯಿತು.

ಕೋಟೆಯ ಕಾವಲಿಗಿದ್ದವನು ಒಬ್ಬ ಕಾವಲುಗಾರ.

ನಾವೆಲ್ಲ ವಿದ್ಯಾರ್ಥಿಗಳು, ಪರೀಕ್ಷೆಗೆ ಓದುತ್ತಿದ್ದೇವೆ, ಎಂದು ಭಗತ್ ಸಿಂಗ್ ಅವನಿಗೆ ಸಮಾಧಾನ ನೀಡಿದ.

ಸುಮಾರು ಎಂಟು ಘಂಟೆಗಳ ಕಾಲ ಚರ್ಚೆ ನಡೆಯಿತು. ಪರಿಣಾಮ ವಾಗಿ " ಹಿಂದೂಸ್ಥಾನ್ ಸೋಷಲಿಸ್ಟ್ ರಿಪಬ್ಲಿಕನ್ ಆರ್ಮಿ " ಎಂಬ ಪಕ್ಷ ಸ್ಥಾಪಿತ ವಾಯಿತು.

ಕೇಂದ್ರ ಸಮಿತಿಗೆ ಭಗತ್‌ಸಿಂಗ್, ಚಂದ್ರಶೇಖರ ಆಜಾದ್, ಶುಕದೇವ್, ಕುಂದನ್‌ಲಾಲ್, ಬಿಜೋಯ್ ಕುಮಾರ ಸಿನ್ಹ, ಶಿವವರ್ಮ ಮತ್ತು ಫಣೀಂದ್ರನಾಥ್ ಘೋಷ್ ಆಯ್ಕೆಯಾದರು.

ಶುಕದೇವ್ ಪಂಜಾಬ್ ಪ್ರಾಂತ್ಯದ ಸಂಚಾಲಕನಾದ. ಉತ್ತರ ಪ್ರದೇಶಕ್ಕೆ ಶಿವವರ್ಮ, ಬಿಹಾರ್‌ಗೆ ಫಣೀಂದ್ರನಾಥ್ ಘೋಷ್ ಸಂಚಾಲಕ ರಾದರು. ಚಂದ್ರಶೇಖರ ಆಜಾದ್ ಮಿಲಿಟರಿ ಶಾಖಾಧಿಕಾರಿಯೂ, ಭಗತ್ ಸಿಂಗ್ ಮತ್ತು ಬಿಜೋಯ್ ಕುಮಾರ್ ಸಿನ್ಹರವರು ವಿವಿಧ ಭಾಗಗಳ ಸಂಪರ್ಕಾಧಿಕಾರಿಗಳಾಗಿಯೂ ಕಾರ್ಯ ವಹಿಸಿಕೊಂಡರು.

ಏನಾದರೂ ಮಹೋನ್ನತ ಸಾಹಸ ನಡೆಸಬೇಕು, ಇಡೀ ದೇಶವನ್ನೇ ಜಾಗೃತಗೊಳಿಸುವ ಕಾರ್ಯ ಮಾಡಬೇಕು, ಎಂದು ಎಲ್ಲ ನಾಯಕರೂ ತೀರ್ಮಾನಿಸಿದರು.

ಮುಂದಿನ ಹೋರಾಟಕ್ಕಾಗಿ ಎಲ್ಲರೂ ಹೊರಟರು.

ಸಿಂಹದ ನೆಲೆಯಾದ ಕಾಡಿನೊಳಗೇ ನುಗ್ಗಲು ಸೈಮನ್ ಕಮಿಷನ್ ನಿರ್ಧರಿಸಿತ್ತು.

ಅಕ್ಟೋಬರ್ ತಿಂಗಳ ಮೂವತ್ತರಂದು ಅದು ಲಾಹೋರ್‌ಗೆ ಭೇಟಿ ಕೊಡುವುದೆಂದು ಪ್ರಕಟಿಸಿತು.

ಪಂಜಾಬಿನ ಕೇಸರಿ, ಲಾಲಾ ಲಜಪತ್‌ರಾಯ್ ಅವರು, ಆ ದಿನ ರಾಜ್ಯ ದಾದ್ಯಂತ ಕಪ್ಪುಬಾವುಟ ಪ್ರದರ್ಶನ, ಹರತಾಳ, ಮೆರವಣಿಗೆ ನಡೆಸಲು ಕರೆ ನೀಡಿದರು. ಪಂಡಿತ ಮದನಮೋಹನ ಮಾಲವೀಯರೂ ಪ್ರದರ್ಶನದಲ್ಲಿ ಭಾಗವಹಿಸಲು ಅಲಹಾಬಾದ್‌ನಿಂದ ಆಗಮಿಸಿದರು.

ಸರ್ಕಾರವೂ ಮತ್ತೊಮ್ಮೆ ಜಲಿಯನ್‌ವಾಲಾ ಬಾಗ್ ಹತ್ಯಾಕಾಂಡ ನಡೆಸಲು ಸಿದ್ಧತೆ ನಡೆಸಿತ್ತು. ಮೂವರು ಅತ್ಯಂತ ದಬ್ಬಾಳಿಕೆಯ ಅಧಿಕಾರಿ ಗಳು ಇಲ್ಲಿದ್ದರು. ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟ್ ಸ್ಕಾಟ್, ಅಸಿಸ್ಟೆಂಟ್ ಸೂಪರಿಂಟೆಂಡೆಂಟ್ ಸಾಂಡರ್ಸ್ ಮತ್ತು ಡೆಪ್ಯುಟಿ ಸೂಪರಿಂಟೆಂಡೆಂಟ್ ಮಾರಿಸ್, ಆಂಗ್ಲೋ ಇಂಡಿಯನ್ ಆಗಿದ್ದ ಸ್ಕಾಟ್ ಅಂತೂ, ತಾನೇ ಡಾಯರ್ ಎಂಬಂತೆ ವರ್ತಿಸುತ್ತಿದ್ದು, ಈ ಜನತೆಗೆ ಬುದ್ಧಿ ಕಲಿಸಲೇಬೇಕೆಂದು ಪಣತೊಟ್ಟಿದ್ದ. ಎಂತಲೇ ಪೋಲೀಸ್ ಪಡೆ ಅತ್ಯಧಿಕವಾಗಿ ಸಂಗ್ರಹಿತವಾಗಿತ್ತು. ಮಿಲಿಟರಿಯೂ ನೆರವು ನೀಡಲು ಸಿದ್ಧವಾಯಿತು.



ಅಕ್ಟೋಬರ್ ಮೂವತ್ತರಂದು ಇಡೀ ಲಾಹೋರಿನ ಜನತೆಯೆಲ್ಲ ತಮ್ಮ ಮನೆಗಳನ್ನು ಬಿಟ್ಟು ಹೊರ ಬಂದರು. ಸಾವಿರಾರು ಕರಿ ಬಾವುಟಗಳನ್ನು ಹಿಡಿದು, "ಸೈಮನ್, ಹಿಂತಿರುಗು!" ಎಂಬ ಘೋಷಣೆ ಕೂಗುತ್ತ ಲಾಹೋರಿನ ಮುಖ್ಯ ಬೀದಿಗಳಲ್ಲಿ ಮೆರವಣಿಗೆ ಹೊರಟಿತು. ಇಡೀ ನಗರವೇ ಪ್ರತಿಭಟನೆ ಸೂಚಿಸಿತ್ತು.

ಮೆರವಣಿಗೆಯ ಮುಂದೆ ನಿಂತು, ಲಾಲಾ ಲಜಪತ್‌ರಾಯ್ ಮತ್ತು ಮದನಮೋಹನ ಮಾಲವೀಯರು ನಾಯಕತ್ವ ವಹಿಸಿದ್ದರು.

ಪೋಲೀಸ್ ಅಧಿಕಾರಿಗಳೇ ಈ ಪ್ರಚಂಡ ಜನಸಮೂಹ, ಉತ್ಸಾಹ, ಉದ್ರೇಕ ಕಂಡು ಭೀತರಾದರು. ಭೀತಿಯಿಂದ ತಬ್ಬಿಬ್ಬಾಗಿ, ಸ್ವೇಚ್ಛಾ ವರ್ತನೆಗೂ ನಿರ್ಧರಿಸಿದರು.

ಮೆರವಣಿಗೆ ಹೊರಟ ಕೆಲ ಹೊತ್ತಿನಲ್ಲೇ ಯಾರೋ ಅಪರಿಚಿತನೊಬ್ಬ ಲಾಲಾಜಿ ಬಳಿಗೆ ಬಂದ. "ಸೈಮನ್, ಹಿಂತಿರುಗು!" ಎಂದು ಬರೆಯಲಾದ ಕೊಡೆಯೊಂದನ್ನು ಲಾಲಾಜಿಯ ಕೈಗಿತ್ತ. ಯೂರೋಪಿಯನ್ ಅಧಿಕಾರಿ

ಗಳಿಗೆ ಲಾಲಾಜಿಯ ಗುರುತು ಹಿಡಿಯಲು ಪೋಲೀಸರೇ ಈ ತಂತ್ರ ನಡೆಸಿದ್ದರು.

ಸ್ಕಾಟ್ ಮತ್ತು ಸಾಂಡರ್ಸ್ ನೂರಾರು ಮಂದಿ ಪೋಲೀಸರೊಂದಿಗೆ ಅಡ್ಡ ಬಂದರು. ಮೆರವಣಿಗೆಯನ್ನು ಚದುರಿಸಲು ಅಪ್ಪಣೆ ನೀಡಿದರು.

ಜನತೆ ತಮ್ಮ ನಿರ್ಧಾರ ಬದಲಿಸಲಿಲ್ಲ. ನಾಯಕರೂ ಕದಲಲಿಲ್ಲ.

ಶಾಂತವಾಗಿ ಸಾಗುತ್ತಿದ್ದ ಮೆರವಣಿಗೆಯ ಮೇಲೆ ಪೋಲೀಸರು ಲಾಠಿ ಪ್ರಹಾರ ಆರಂಭಿಸಿದರು. ಸ್ಕಾಟ್ ಮತ್ತು ಸಾಂಡರ್ಸ್ ತಾವೇ ಲಾಠಿ ಹಿಡಿದು ನಾಯಕರನ್ನು ಬಡೆದರು.

ಜನ ರೊಚ್ಚಿಗೆದ್ದಿತು.

ಲಾಲಾಜಿಗೆ ಅನೇಕ ಲಾಠಿ ಏಟುಗಳನ್ನು ಕೊಡಲಾಯಿತು. ಅವರ ಎದೆಗೆ ಕೋವಿಯ ಬ್ಯಾಟನ್‌ನಿಂದ ಪೋಲೀಸರು ತಿವಿದರು. ತೀವ್ರ ಗಾಯ ಗೊಂಡ ಅವರ ಎದೆಯಿಂದ ರಕ್ತ ಹರಿದು ಚಿಮ್ಮಿ, ಅಂಗಿಯನ್ನೆಲ್ಲ ತೊಯ್ಸಿತು.

ಸಾವಿರಾರು ಮಂದಿ ಲಾಠಿ ಪ್ರಹಾರಕ್ಕೆ ಒಳಗಾದರು. ಅಸಂಖ್ಯಾತ ಜನ ಗಾಯಗೊಂಡರು. ಪ್ರಹಾರ ನಡೆಸಿ ಕೈಸೋತು ಪೋಲೀಸರು ಸುಸ್ತಾದರು.

ಮಿಲಿಟರಿ ಹಾಗೂ ಸಶಸ್ತ್ರ ಪೋಲೀಸರು ತಮ್ಮ ಈ ಸೋಲನ್ನು ಇಡೀ ನಗರದ ಮೇಲೆ ಹೇರಿಸಿ ಬಹುಕಾಲ ಸೇಡು ತೀರಿಸಿಕೊಂಡರು.

ಲಾಹೋರ್ ಸ್ಮಶಾನ ಸದೃಶವಾಯಿತು.

ಲಾಲಾಜಿ ತೀವ್ರ ಗಾಯಗೊಂಡು ಚಿಕಿತ್ಸೆಗಾಗಿ ಆಸ್ಪತ್ರೆಗೆ ಸಾಗಿಸಲ್ಪಟ್ಟರು.

ತಮ್ಮ ನಾಯಕರಿಗಾದ ಆಘಾತ, ಅಪಮಾನಗಳಿಂದ ಜನತೆ ರೊಚ್ಚಿಗೆದ್ದು ಕುದಿದರು.

ಸೇಡಿನ ಕಿಡಿ ಪ್ರತಿಯೊಬ್ಬ ಕ್ರಾಂತಿಕಾರಿಯ ಎದೆಯಲ್ಲೂ ಹೊಗೆ ಯಾಡುತ್ತಿತ್ತು.

"ನನ್ನ ಮೇಲೆ ಬಿದ್ದ ಪ್ರತಿಯೊಂದು ಏಟೂ ಭಾರತದಲ್ಲಿನ ಬ್ರಿಟಿಷ್ ಸಾಮ್ರಾಜ್ಯದ ಶವದ ಪೆಟ್ಟಿಗೆಯ ಮೇಲೆ ಹೊಡೆದ ಮೊಳೆಗಳಾಗುತ್ತವೆ," ಎಂದು ಲಾಲಾಜಿ ಘರ್ಜಿಸಿ ಹೇಳಿಕೆ ನೀಡಿದರು.

ಶಾಂತಿ, ಅಹಿಂಸೆ, ತಾಳ್ಮೆ, ಸತ್ಯಾಗ್ರಹ, ಅಸಹಕಾರಗಳ ಯಾವ ಉಪ ದೇಶಗಳೂ ಜನತೆಯ ಮನಸ್ಸಿಗೆ ನೆಮ್ಮದಿ ತರಲಿಲ್ಲ.

ಇಡೀ ದೇಶವೇ ಮತ್ತೊಂದು ಮಹಾಕ್ರಾಂತಿಗೆ ಸಿದ್ಧವಾಗಿ ನಿಂತಿತ್ತು.

ಸೇಡು...ಸೇಡು...ಸೇಡು...

ಇದೇ ಕ್ರಾಂತಿಕಾರಿಗಳ ನಿತ್ಯದ ಚಿಂತನೆಯಾಯಿತು.

ಪಕ್ಷವನ್ನು ಬಲಪಡಿಸಿ, ಇಂಥ ಸಾಮ್ರಾಜ್ಯಶಾಹಿ ಅನೀತಿಯನ್ನು ಅಳಿಸಲೇ ಬೇಕೆಂದು ಕ್ರಾಂತಿಕಾರಿಗಳು ನಿರ್ಧರಿಸಿದರು.

ಆದರೆ, ಆರ್ಥಿಕ ಅಭಾವ ಅವರ ಎಲ್ಲ ಉತ್ಸಾಹವನ್ನು ಹಿಂಗಿಸುತ್ತಿತ್ತು. ಅದನ್ನು ಬಗೆಹರಿಸಲು ಅವರು ಯತ್ನಿಸಲೇಬೇಕಾಯಿತು.

ಮುಂದೇನು ಉಪಾಯ ?

ಕ್ರಾಂತಿಕಾರೀ ನಾಯಕರು ಶೀಘ್ರವಾಗಿ ಕೆಲಸ ಮಾಡಬೇಕೆಂದು ಯೋಚಿಸುತ್ತಿದ್ದಂತೆ ಪತ್ರಿಕೆಗಳಲ್ಲಿ ಚಿತ್ರವೊಂದು ಪ್ರಕಟವಾಯಿತು.

ದೆಹಲಿಗೆ ಕಾಂಗ್ರೆಸ್ ಸಭೆಗೆ ತೆರಳಿದ್ದ ಲಾಲಾಜಿ ತಮ್ಮ ಎದೆಯಲ್ಲಾದ ಗಾಯವನ್ನು ಸ್ನೇಹಿತರಿಗೆ ತೋರಿಸಿದ್ದರು. ಮೂರು ಅಂಗುಲ ಉದ್ದದ ತೀವ್ರ ಗಾಯವಾಗಿತ್ತು. ಒಂದಂಗುಲ ಆಳವಾಗಿತ್ತು ಅದು. ತನ್ನ ಅಂಗಿಯನ್ನು ಬಿಚ್ಚಿ ಲಾಲಾಜಿ ಗಾಯವನ್ನು ತೋರಿಸುತ್ತಿದ್ದ ಚಿತ್ರ ಪತ್ರಿಕೆಗಳಲ್ಲಿ ಬಂತು.

ಲಾಲಾಜಿಯ ಎದೆಯ ಮೇಲಾದ ಗಾಯ ಭಾರತೀಯರ ಹೃದಯದ ಮೇಲೆ ನೋವಿನ ಪ್ರಭಾವ ಬೀರಿತು.



## ೧೩

" ದೇಶದ ಯುವ ಜನಾಂಗ ಇನ್ನೂ ಬದುಕಿದೆಯೇ ? ಅಥವಾ ಅವರೆಲ್ಲ ಸ್ವಾಭಿಮಾನ್ಯ ಶೂನ್ಯರಾಗಿದ್ದಾರೆಯೇ ? ಎಂತಲೇ ಲಾಲಾಜಿಯ ಮರಣವಾದರೂ ಅವರೆಲ್ಲ ಮೂಕ ಪಶುಗಳಂತೆ ಮುದುಡಿ ಮೂಲೆ ಸೇರಿರಬಹುದು. ದೇಶದ ಮಹಾನಾಯಕರಲ್ಲೊಬ್ಬರನ್ನು ಕ್ರೂರವಾಗಿ ಹೊಡೆದು ಅವರ ಮರಣ ಬೇಗನೆ ಬರುವಂತೆ ಸರ್ಕಾರ ವರ್ತಿಸಿದೆ. ವಿದೇಶೀ ಅಧಿಕಾರಶಾಹಿ ದೇಶದ ಜನಕೋಟಿಗೇ ಸವಾಲು ಹಾಕಿದೆ. ಈ ಸವಾಲನ್ನು ಅಂಗೀಕರಿಸಲು ಯುವಕರಿಗೆ ಕೆಚ್ಚು ಇದೆಯೇನು ? ನನಗಿದಕ್ಕೆ ಉತ್ತರ ಬೇಕು. ಮಾತಿನಲ್ಲಲ್ಲ, ಕೃತಿಯಲ್ಲಿ ! "

" ಲಾಲಾಜಿ ಅಮರರಾದರು, ಅವರು ಅಮರತ್ವ ಗಳಿಸಲಿ."

ದೇಶಬಂಧು ಚಿತ್ತರಂಜನ್ ದಾಸ್ ಅವರ ಪತ್ನಿ ವಸಂತೀ ದೇವಿಯವರು ಲಾಲಾಜಿಯ ಮರಣ ವಾರ್ತೆ ಕೇಳಿ ಕಣ್ಣೀರು ಸುರಿಸಲಿಲ್ಲ ; ಕಿಡಿಕಾರಿದರು.

ದೇಶವೆಲ್ಲ ಪಂಜಾಬ್ ಕೇಸರಿಯ ಅಕಾಲ ಮರಣಕ್ಕಾಗಿ ಮರುಗಿ ಕಣ್ಣೀರು ಸುರಿಸಿತು.

ಪೋಲೀಸ್ ಅತ್ಯಾಚಾರದ ಪರಿಣಾಮವಾಗಿ ಕೆಟ್ಟುಹೋದ ಅವರ ಆರೋಗ್ಯ ಉತ್ತಮಗೊಳ್ಳಲಿಲ್ಲ. ಅವರು ನವೆಂಬರ್ ೧೭ ರಂದು ಇಹಯಾತ್ರೆ ಪೂರೈಸಿದರು.

ದೇಶದ ಎಲ್ಲ ಪಕ್ಷ-ಪಂಗಡಗಳ ನಾಯಕರೂ ಲಾಲಾಜಿಯವರಿಗೆ ಅಶ್ರುತರ್ಪಣ ನೀಡಿದರು. ಕೇಂದ್ರ ಶಾಸನ ಸಭೆಯಲ್ಲಿ ಸ್ವರಾಜ್ಯ ಪಕ್ಷದ ಸದಸ್ಯರು ಸರ್ಕಾರವನ್ನು ಖಂಡತುಂಡವಾಗಿ ಖಂಡಿಸಿದರು. ಸತ್ಯವನ್ನು ಇದಿರಿಸಲಾಗದೆ ಬ್ರಿಟಿಷ್ ಸದಸ್ಯರು ನುಣುಚಿಕೊಂಡರು. ಪೋಲೀಸ್ ಅಧಿಕಾರಿಗೆ ಅವರೇ ಲಾಲಾಜಿ ಎಂದು ತಿಳಿದಿಲ್ಲವೋ ಏನೋ ಎಂದರು ಸರ್ ಜೇಮ್ಸ್ ಕ್ರೇರರ್.

"ಲಾಲಾಜಿ ಯಾರೆಂದು ತಿಳಿಯದ ವ್ಯಕ್ತಿ ಪಂಜಾಬ್ ಪೋಲೀಸ್ ಪಡೆಯಲ್ಲೇ ಇರಲು ಅನರ್ಹ," ಎಂದು ಥಟ್ಟನೆ ಶ್ರೀನಿವಾಸ ಅಯ್ಯಂಗಾರ್ ಉತ್ತರಿಸಿದರು.

ಪ್ರತಿಯೊಬ್ಬ ಸದಸ್ಯನೂ ಲಾಲಾಜಿ ಬಗೆಗೆ ಗೌರವವಿತ್ತು ತಮ್ಮ ಅಭಿಮಾನ ವ್ಯಕ್ತಪಡಿಸಿದರು.

ದುರಂತವನ್ನು ತಿಳಿದೊಡನೆಯೇ ಕ್ರಾಂತಿಕಾರಿಗಳು ಲಾಹೋರ್‌ಗೆ ಬಂದರು. ಫಿರೋಜ್‌ಪುರದಿಂದ ಚಂದ್ರಶೇಖರ ಆಜಾದ್ ಮತ್ತು ಮಹಾವೀರ್ ಸಿಂಗ್ ಆಗಮಿಸಿದರು. ರಾಜಗುರು ಮತ್ತು ಕುಂದನ್‌ಲಾಲ್ ಧಾವಿಸಿದರು. ಭಗತ್‌ಸಿಂಗ್, ಶುಕದೇವ್ ಮತ್ತು ಕಿಶೋರ್‌ಲಾಲ್ ಆಗ ಲಾಹೋರ್‌ನಲ್ಲೇ ಇದ್ದರು.

ಕ್ರಾಂತಿಕಾರಿಗಳು ತಮ್ಮ ಕರ್ತವ್ಯದ ಕಾಲ ಸನ್ನಿಹಿತವಾಯಿತೆಂದು ತಿಳಿದರು. ಮೊಜಾಂಗ್ ಗೃಹದಲ್ಲಿ ಅವರೆಲ್ಲರ ಸಭೆ ನಡೆಯಿತು.

"ಸೇಡು..." ಎಂಬುದೇ ಅವರೆಲ್ಲರ ಧ್ವನಿ.

ಕೊನೆಯ ಹೋರಾಟಕ್ಕಾಗಿ ಧನ ಸಂಗ್ರಹಿಸಲು ಅವರು ಯೋಚಿಸಿದರು.

ಹೇಗೆ... ?

ಪಂಜಾಬ್ ನ್ಯಾಷನಲ್ ಬ್ಯಾಂಕ್...ದರೋಡೆ !

"ಕಾಳಿಚರಣ್ ಬ್ಯಾಂಕಿನ ಟೆಲಿಫೋನ್ ತಂತಿ ಕತ್ತರಿಸಬೇಕು. ಶುಕದೇವ್ ಕಾವಲಿನವನ ಕೋವಿ ಕಸಿದುಕೊಂಡು, ಅವನು ಸ್ಥಳದಿಂದ ಅಲುಗಾಡದಂತೆ ನೋಡಿಕೊಳ್ಳಬೇಕು. ಹಂಸರಾಜ್ ವೊಹ್ರಾ ಮತ್ತು ಶಿವರಾಮ್ ರಾಜಗುರು ಬ್ಯಾಂಕಿನ ಕಾರ್ಯದರ್ಶಿ ಹಾಗೂ ಇತರ ಪ್ಯಾದೆಗಳ ಬಗೆಗೆ ಕಾವಲು ವಹಿಸಬೇಕು."

ಆಜಾದ್‌ನ ಸೂಚನೆಗೆ ಎಲ್ಲರೂ ತಲೆದೂಗಿದರು.

"ನಾನು ಕ್ಯಾಷಿಯರ್‌ನಿಂದ ಹಣದ ಪೆಟ್ಟಿಗೆ ಅಪಹರಿಸುತ್ತೇನೆ. ಕಿಶೋರ್ ಲಾಲ್ ಮತ್ತು ಜೈಗೋಪಾಲ್ ಅದನ್ನೆತ್ತಿಕೊಂಡು ಹೊರಗೆ ನಡೆಯಲಿ. ನಾನು ಸೂಚನೆ ನೀಡಿದೊಡನೆಯೇ ಎಲ್ಲರೂ ಹೊರಗಡೆ ಧಾವಿಸಿ, ಅಲ್ಲೇ ನಿಂತ ಕಾರನ್ನು ಹತ್ತಬೇಕು. ಭಗತ್‌ಸಿಂಗ್ ಮತ್ತು ಮಹಾವೀರಸಿಂಗ್ ಕಾರಿನ ವ್ಯವಸ್ಥೆ ಮಾಡುತ್ತಾರೆ," ಎಂದ ಆಜಾದ್.

ನಿರ್ದಿಷ್ಟ ಪ್ರದೇಶದಲ್ಲಿ ಎಲ್ಲರೂ ಪಿಸ್ತೂಲು, ರಿವಾಲ್ವರ್ ಮತ್ತಿತರ ಆಯುಧವನ್ನು ಹಿಡಿದು ಕಾದು ನಿಂತರು.

ಅಷ್ಟರಲ್ಲಿ ಭಗತ್‌ಸಿಂಗ್ ಅತ್ತ ಬಂದ. ಟ್ಯಾಕ್ಸಿ ಸಿಗಲಿಲ್ಲ ಎಂದು ಅವನು ವಿವರಿಸಿದ.

ದೀರ್ಘಕಾಲ ಯೋಜನೆ ನಡೆಸಿ, ಅಂತಿಮ ಹೋರಾಟಕ್ಕಾಗಿ ಹಣ ಸಂಗ್ರಹಿಸುವ ಯತ್ನವೂ ವಿಫಲವಾದುದರಿಂದ ಎಲ್ಲರಿಗೂ ಬೇಸರ ವಾಯಿತು.

ಪ್ರತಿ ಹೆಜ್ಜೆಗೂ ನಿರಾಶೆಯನ್ನೇ ಇದಿರಿಸುತ್ತಿದ್ದ ಅವರು ಹತಾಶರಾಗ ಲಿಲ್ಲ. ಅಲ್ಲಿಂದ ಗುಪ್ತವಾಗಿಯೇ ಚದುರಿಹೋದರು.

ಮತ್ತೊಮ್ಮೆ ಎಲ್ಲರೂ ಸಭೆ ಸೇರಿದರು.

"ನಾವು ಕ್ರಾಂತಿ ನಡೆಸುವ ಬದಲಾಗಿ ಆಟವಾಡುತ್ತಿದ್ದೇವೆ, ಇದು ಹೋರಾಟವಲ್ಲ," ಎಂದು ಭಗತ್‌ಸಿಂಗ್ ಕೊಂಚ ಸಿಟ್ಟಿನಿಂದಲೇ ನುಡಿದ.

ವಸಂತಿ ದೇವಿಯವರ ಹೇಳಿಕೆ ಎಲ್ಲರನ್ನು ಆಗಲೇ ರೊಚ್ಚಿಗೆಬ್ಬಿಸಿತ್ತು. ಅದೂ ಸಭೆಯಲ್ಲಿ ಚರ್ಚೆಗೆ ಬಂತು.

"ರಕ್ತತರ್ಪಣವೀಗ ನಡೆಯಲೇಬೇಕು. ಆಗಲೇ ಲಾಲಾಜಿಯ ಆತ್ಮಕ್ಕೆ ಶಾಂತಿ," ಎಂದ ಆಜಾದ್.

ದೇಶದ ವಿವಿಧ ಕಡೆಗಳಿಗೆ ತೆರಳಿ, ಎಲ್ಲೆಡೆಗೂ ನಿರ್ದಿಷ್ಟವಾದ ದಿನವೇ ಕ್ರಾಂತಿ ಹರಡುವಂತೆ ಮಾಡಬೇಕು ಎಂಬ ಅವರ ಯೋಚನೆ ಹಣದ ಅಭಾವ ದಿಂದ ಹಿಂದೆ ಬಿದ್ದಿತ್ತು.

"ಆಗುವುದನ್ನು ಇಲ್ಲೇ ಮಾಡೋಣ," ಎಂದರು ಶುಕದೇವ್.

ಸಭೆಯು ಮುಂದಿನ ಕಾರ್ಯಕ್ಕೆ ಸಿದ್ಧವಾಯಿತು. ಈ ಬಗೆಗೆ ಅಗತ್ಯವಾದ ಎಲ್ಲ ವಿವರಗಳನ್ನು ಸಂಗ್ರಹಿಸುವಂತೆ ಜೈಗೋಪಾಲ್‌ಗೆ ತಿಳಿಸಲಾಯಿತು.

"ಇಂದೀಗ ಡಿಸೆಂಬರ್ ಒಂಭತ್ತು. ಡಿಸೆಂಬರ್ ಹದಿನೇಳು ನಮ್ಮ ಖಚಿತ ನಿರ್ಧಾರದ ದಿನ," ಎಂದು ಭಗತ್‌ಸಿಂಗ್ ಮತ್ತೊಮ್ಮೆ ಗೆಳೆಯರಿಗೆ ಎಚ್ಚರಿಕೆ ನೀಡಿದ. ಐದು ದಿನಗಳ ಕಾಲ ಜೈಗೋಪಾಲ್ ತನ್ನ ಕೆಲಸದಲ್ಲೇ ನಿರತನಾಗಿ, ಪೂರ್ಣ ವರದಿಯನ್ನು ಒಪ್ಪಿಸಿದ. ಆಜಾದ್ ಈ ಬಗೆಗೆ ರಾಜಗುರು ಮತ್ತು ಭಗತ್‌ಸಿಂಗ್‌ರೊಡನೆ ಸಮಾಲೋಚನೆ ನಡೆಸಿದ.

"ಲಾಲಾಜಿಯ ಮರಣವಾದ ಮೂವತ್ತು ದಿನಗಳಲ್ಲಿ ಸೇಡು ತೀರಿಸಬೇಕು," ಎಂದ ಆಜಾದ್.

ಅಷ್ಟೇ ಸಾಲದು. ಅದೇಕೆ ನಡೆಯಿತು ಎಂಬುದು ಜನರಿಗೂ ತಿಳಿಯಬೇಕು," ಎಂದು ಸೂಚಿಸಿದ ಭಗತ್‌ಸಿಂಗ್.

"ಅದಕ್ಕೆ ಬೇಕಾದ ಕೆಲಸ ನೀವೇ ಮಾಡಿ," ಎಂದ ಅಜಾದ್.

೧೭ ಡಿಸೆಂಬರ್, ೧೯೨೮.

ಸಂಜೆ ೪ ಘಂಟೆ......

ಅಸಿಸ್ಟೆಂಟ್ ಪೋಲೀಸ್ ಸೂಪರಿಂಟೆಂಡೆಂಟ್ ಸಾಂಡರ್ಸ್ ಕಚೇರಿಯಿಂದ ಹೊರಬಂದ. ತನ್ನ ಮೋಟಾರ್ ಸೈಕಲನ್ನೇರಿ ಮನೆ ಕಡೆಗೆ ಹೊರಟ. ಅವನ ಹಿಂದೆ ಹೆಡ್ ಕಾನ್ಸ್‌ಟೇಬಲ್ ಚನನ್‌ಸಿಂಗ್ ಬಂದ.

ಲಾಲಾಜಿಯೇ ಸ್ಥಾಪಿಸಿದ್ದ ಡಿ. ಎ. ವಿ. ಕಾಲೇಜಿನ ಇದಿರಲ್ಲೇ ಪೋಲೀಸ್ ಕಚೇರಿ ಇತ್ತು.

ಸಾಂಡರ್ಸ್ ರಸ್ತೆಯಲ್ಲಿ ಸಾಗುತ್ತಿದ್ದಂತೆ ಯುವಕನೊಬ್ಬ ಅವನ ಕಡೆಗೆ ಗುಂಡು ಹಾರಿಸಿದ. ಗಾಯಗೊಂಡ ಸಾಂಡರ್ಸ್ ಉರುಳಿದ.

ಮತ್ತೊಬ್ಬ ತರುಣ ರಿವಾಲ್ವರ್‌ನಿಂದ ಕೆಲವು ಗುಂಡುಗಳನ್ನು ಸಾಂಡರ್ಸ್ ಕಡೆಗೆ ಹಾರಿಸಿದ.

ಚನನ್‌ಸಿಂಗ್ ಮತ್ತು ಇನ್ನೊಬ್ಬನು ತರುಣರನ್ನು ಬೆನ್ನಟ್ಟಿದರು. ಅವರೆಡೆಗೆ ಗುಂಡುಗಳು ಹಾರಿದವು. ತರುಣರು ಕಾಲೇಜಿನ ಗೋಡೆ ಹಾರಿ ಧಾವಿಸಿದರು. ಬೆನ್ನಟ್ಟಿದ ಚನನ್‌ಸಿಂಗ್‌ನಿಗೂ ಗುಂಡಿನೇಟು ಬಿತ್ತು.

ಹಂತಕರನ್ನು ಹಿಡಿಯಲು ಪೋಲೀಸರಿಗೆ ಸಾಧ್ಯವಾಗಲಿಲ್ಲ. ಅವರಿಗೆ ದೊರೆತುದು ಗುಂಡುಗಳು ಮಾತ್ರ.

ಸಂಜೆಗೆ ನಗರದ ಎಲ್ಲೆಡೆಗೂ ಕೆಂಪು ಅಕ್ಷರದ ಭಿತ್ತಿ ಪತ್ರಗಳು ಗೋಡೆಗಳ ಮೇಲೆ ಕಾಣಿಸಿಕೊಂಡವು.

"ಸ್ಕಾಟ್‌ನ ಕೊಲೆಯಾಯಿತು. ಲಾಲಾಜಿಯ ಮರಣದ ಸೇಡು ತೀರಿತು," ಎಂದು ಅದರಲ್ಲಿತ್ತು.

ಸ್ಕಾಟ್‌ನನ್ನು ಕೊಲೆಮಾಡಲೆಣಿಸಿ ಸಿದ್ಧತೆ ಮಾಡಿದ್ದ ಕ್ರಾಂತಿಕಾರರು ಈಗ ಸಾಂಡರ್ಸ್‌ನನ್ನು ಕೊಲೆ ಮಾಡಿದ್ದರು. ಭಿತ್ತಿ ಪತ್ರಗಳು ಮೊದಲೇ ಸಿದ್ಧವಾಗಿದ್ದುವು. ಆ ಬಳಿಕ ಕಾಣಿಸಿಕೊಂಡವುಗಳಲ್ಲಿ ಸಾಂಡರ್ಸ್ ಹೆಸರಿತ್ತು.

ಸಂಜೆ ನಗರದ ಮೂಲೆ ಮೂಲೆಗಳಲ್ಲಿ ಕೊಲೆಯ ಬಗೆಗೆ ಉರ್ದು ಭಾಷೆಯ ಪೋಸ್ಟರ್‌ಗಳೂ ಕಾಣಿಸಿಕೊಂಡವು.

ಸಾಂಡರ್ಸ್ ಕೊಲೆಯು ಪಂಜಾಬ್ ಪ್ರಾಂತ್ಯದ ಪೋಲೀಸ್ ಶಾಖೆಯನ್ನೇ ನಡುಗಿಸಿತು. ಪೋಲೀಸರು ಸಿಡಿಲೆರಗಿದವರಂತೆ ಮೂಕರಾದರು. ಸಾಮ್ರಾಜ್ಯಶಾಹಿ ತನ್ನ ಅತ್ಯಂತ ದೊಡ್ಡ ಆಘಾತವನ್ನು ಈ ರಾಜ್ಯದಲ್ಲಿ ಕಂಡಿತು. ಹಚ್ಚ ಹಗಲಿನಲ್ಲಿ ರಾಜ್ಯಬೀದಿಯಲ್ಲಿ ಬ್ರಿಟಿಷ್ ಅಧಿಕಾರಿಯೊಬ್ಬ ಕೊಲೆಯಾದುದು ಸರ್ಕಾರದ ಮುಖಕ್ಕೆ ಮಂಗಳಾರತಿಯಾದಂತಾಗಿತ್ತು.

ಕೊಲೆಯ ಆರೋಪಿಗಳ ಪತ್ತೆ ಹಚ್ಚಲು ಸರ್ಕಾರ ಎಲ್ಲ ಪ್ರಯತ್ನವನ್ನೂ ನಡೆಸಿತು. ಕೊಲೆಗಡುಕರನ್ನು ಎಲ್ಲ ಬಗೆಯ ಚಿತ್ರಹಿಂಸೆಗಳಿಂದ ಅಳಿಸಬೇಕೆಂಬ ಉದ್ವೇಗ ಅಧಿಕಾರಿಗಳಲ್ಲಿ ಬೆಳೆದಿತ್ತು. ಲಂಡನ್‌ನಿಂದ "ಸ್ಕಾಟ್‌ಲೆಂಡ್ ಯಾರ್ಡ್"ನ ಗೂಢಚಾರರನ್ನು ಕರೆಸಿಕೊಳ್ಳಲಾಯಿತು. ಡಿ. ಎ. ವಿ. ಕಾಲೇಜಿನ ನೂರಾರು ವಿದ್ಯಾರ್ಥಿಗಳನ್ನು ಪೋಲೀಸರು ವಿಚಾರಣೆ ನಡೆಸಿದರು. ಆದರೆ ಯಾವುದೇ ಕುರುಹೂ ದೊರೆಯಲಿಲ್ಲ.

ಸರ್ಕಾರದ ಗೌರವ, ಪ್ರತಿಷ್ಠೆಗಳು ಮಣ್ಣುಪಾಲಾದುವು.

ಪೋಲೀಸ್ ಹಾಗೂ ಗೂಢಚಾರರು ಸಪ್ಪೆಮೋರೆ ಹಾಕಿಕೊಂಡರು.

ಈ ಮಹೋನ್ನತ ಸಾಹಸದಲ್ಲಿ ಭಾಗವಹಿಸಿದ್ದ ಕ್ರಾಂತಿಕಾರರೆಲ್ಲ ಒಬ್ಬೊಬ್ಬರಾಗಿ ಲಾಹೋರ್‌ನಿಂದ ಪರಾರಿಯಾದರು.

ಸಾಂಡರ್ಸ್ ಕೊಲೆ ಬಿಡಿಸಲಾಗದ ಸಮಸ್ಯೆಯಾಗಿಯೇ ಉಳಿಯಿತು.

ಅದೇ ತಿಂಗಳು ಲಾಹೋರ್‌ನಲ್ಲಿ ಕಾಂಗ್ರೆಸ್ ಅಧಿವೇಶನ ನಡೆಸಲು ಗೊತ್ತಾಗಿತ್ತು. ಕಾಂಗ್ರೆಸ್ ನಾಯಕರು ಪ್ರಗತಿಶೀಲ ಹೆಜ್ಜೆ ಕೈಗೊಂಡು, ಚಳುವಳಿ ಆರಂಭಿಸಬೇಕೆಂಬುದು ದೇಶದ ಯುವಜನತೆಯ ಅಭೀಷ್ಟವಾಗಿತ್ತು. ಇಂಥ ಬಯಕೆಯ ಪ್ರತೀಕ ಸಾಂಡರ್ಸ್ ಹತ್ಯಾಕಾಂಡವೂ ಒಂದು ಎನ್ನಬಹುದು.

ಲಾಹೋರಿಗೆ ಆಗಮಿಸಿದ್ದ ನಾಯಕರು ಹಿಂತಿರುಗಿದರೂ ಲಾಹೋರ್‌ನಲ್ಲೇ ಹುಟ್ಟಿ ಬೆಳೆಯುತ್ತಿರುವ ಕ್ರಾಂತಿಕಾರೀ ತಂಡ ತನ್ನ ಹೋರಾಟ ಮುಂದುವರಿಸಿತು.

ಕಾಂಗ್ರೆಸ್ ಅಧಿವೇಶನದ ಸಕಲ ಸಿದ್ಧತೆಗಳೂ ನಡೆದಿದ್ದುವು.

ಅದೊಂದು ದಿನ ಯಶ್‌ಪಾಲ್ ಪಂಡಿತನೊಡನೆ ಸಮಾಲೋಚನೆ ನಡೆಸಿದ. ಪಾರ್ಟಿಯ ಕೆಲಸಕ್ಕಾಗಿ ಪಂಡಿತ್ ಲಾಹೋರಿನಿಂದ ಹೊರಟು ಹೋಗಬೇಕಾಗಿತ್ತು.

ಪಂಡಿತ್ ಹೊರಟುಹೋದ ನಂತರ ಪಾರ್ಟಿಯ ವೆಚ್ಚ ಕಡಮೆ ಮಾಡಲು ರೂಪ್‌ಚಂದ್, ಕೇಂದ್ರವನ್ನು ಗೋಪಾಲ್ ಮಂಡಿಯಲ್ಲೊಂದು ಮನೆಗೆ ಬದಲಾಯಿಸಿದ. ಹಾಗೇ ಅಜಯನ ನಾಣ್ಯ ತಯಾರಿಕಾ ಸಂಶೋಧನೆಯೂ ನಿಂತಿತು.

ಕಾಂಗ್ರೆಸ್‌ನೊಳಗಿನ ಪ್ರಗತಿಪರರು ಹೋರಾಟವನ್ನು ಬಯಸಿದ್ದರು. ಆದರೆ, ಗಾಂಧೀಜಿ ಸಂಧಾನದ ಯತ್ನ ನಡೆಸಿ, ವೈಸ್‌ರಾಯ್ ಲಾರ್ಡ್ ಇರ್ವಿನ್‌ರೊಡನೆ ಪತ್ರ ವ್ಯವಹಾರ ನಡೆಸಿದ್ದರು. ಚಳುವಳಿ ಆರಂಭಿಸಿದರೆ ಅದು ಹತೋಟಿ ಮೀರಿ, ಮಹಾ ಕ್ರಾಂತಿಯಾದೀತೆಂಬ ಭೀತಿ ಮಂದಗಾಮಿಗಳಿಗೆ ಇದ್ದಿತು.

ಅಷ್ಟರಲ್ಲಿ ವೈಸ್‌ರಾಯ್ ಪ್ರಯಾಣ ಮಾಡುತ್ತಿದ್ದ ರೈಲಿನ ಮೇಲೆ ಬಾಂಬ್ ಸಿಡಿಯಿತು. ರೈಲನ್ನೇ ಹುಡಿಗೊಡುವ ಪ್ರಯತ್ನ ನಡೆಯಿತು. ಪ್ರಯತ್ನ ಸಫಲವಾಗಲಿಲ್ಲವಾದರೂ ಸಾಕಷ್ಟು ಪರಿಣಾಮ ಬೀರಿತು.

ಆಸ್ಫೋಟನೆ ನಡೆದ ಮರು ದಿನ ಪಂಡಿತ್ ಇಂದ್ರಪಾಲ್ ಲಾಹೋರಿಗೆ ಹಿಂತಿರುಗಿದ. ಈ ಘಟನೆಯಲ್ಲಿ ತನ್ನ ಪಾತ್ರದ ಬಗೆಗೆ ಅಜಯನಿಗೂ ಇತರರಿಗೂ ತಿಳಿಸಿದ.

ಕೆಲವು ದಿನಗಳಲ್ಲಿ ಯಶ್‌ಪಾಲ್ ಕೂಡ ಲಾಹೋರಿಗೆ ಆಗಮಿಸಿದ. ಈ ಬಾರಿ ಬಾಂಬ್ ತಯಾರಿಕೆಗೆ ಸಂಬಂಧಿಸಿದ ಕಾಗದ ಪತ್ರಗಳನ್ನು ಅವನು ತಂದಿದ್ದ. ಇದರಲ್ಲಿ ಬಾಂಬ್ ತಯಾರಿಕೆಗೆ ಉಪಯುಕ್ತವಾದ ಸೂಚನೆಗಳಿದ್ದುವು. ಅದನ್ನು ಅಜಯ ಪ್ರತಿ ಮಾಡಿದ.

ಲಾಹೋರ್‌ನಲ್ಲೂ ಬಾಂಬ್ ತಯಾರಿಕಾ ಕೇಂದ್ರವೊಂದು ಹುಟ್ಟಿ ಕೊಂಡಿತು. ಆದರೆ ಅದಿನ್ನೂ ಕಾಗದಗಳಲ್ಲೇ ಅಡಗಿತ್ತು. ಮುಂದಿನ ಕಾರ್ಯಕ್ಕೆ ಯಾರಲ್ಲೂ ಹಣವಿರಲಿಲ್ಲ.

ಹಣ ಕೂಡಿಸುವ ಕಾರ್ಯ ಅತ್ಯಂತ ಪ್ರಾಮುಖ್ಯ ಪಡೆಯಿತು.

"ಹಣ ಸಂಗ್ರಹಿಸುವ ನಮ್ಮ ಎಲ್ಲ ಸಾಹಸಗಳೂ ವಿಫಲವಾಗಿವೆ. ನಮಗಿಂದು ಪಾರ್ಟಿಯ ನಿತ್ಯ ಕೆಲಸಕ್ಕಾಗಿ, ಸದಸ್ಯರ ಸಂಚಾರಕ್ಕಾಗಿ, ಶಸ್ತ್ರಾಸ್ತ್ರ ಸಂಗ್ರಹಕ್ಕಾಗಿ ಹಣ ಬೇಕು. ಹಾಗೇ ಗೆಳೆಯರು ಸೆರೆಯಾದಲ್ಲಿ ಅವರ ಬಿಡುಗಡೆ ಯತ್ನಕ್ಕೆ ಮೊಕದ್ದಮೆಗೆ ಹಣ ಬೇಕು," ಎಂದು ಯಶ್‌ಪಾಲ್ ಉದ್ವೇಗ ದಿಂದಲೂ ವಿಷಾದದಿಂದಲೂ ಹೇಳಿದ.

"ಕ್ರಾಂತಿಕಾರೀ ವೀರರು ದೊರೆಯುತ್ತಾರೆ. ಜೀವನವನ್ನೇ ಅರ್ಪಿಸುವ ಯೋಧರಿದ್ದಾರೆ. ಈ ಹಣವೊಂದೇ ಎಲ್ಲಕ್ಕೂ ಹೆಚ್ಚಿನ ಕಾಲ್ತೊಡಕಾಗಿದೆ," ಎಂದು ಇಂದ್ರಪಾಲ್ ಧ್ವನಿಗೂಡಿಸಿ ಅಜಯನ ಕಡೆಗೆ ನೋಡಿದ.

"ಲಾಹೋರಿನಲ್ಲಿ ತಲೆ ಮರೆಸಿಕೊಂಡಿರುವುದೂ ಸುಲಭವಲ್ಲ. ದಬ್ಬಾಳಿಕೆ ಅತ್ಯುಗ್ರವಾಗಿದೆ."

"ಈ ಖೋಟಾ ನಾಣ್ಯ ತಯಾರಿಕೆ ಮುಂದುವರಿಸೋಣ. ಭಾಗ್‌ರಾಮ್ ಹೇಗೂ ಬಂದಿದ್ದಾರೆ. ನಾನು ಅವರೊಂದಿಗೆ ಜಮ್ಮುವಿಗೆ ಹೊರಡುತ್ತೇನೆ."

ಅಜಯನ ಮಾತಿಗೆ ಎಲ್ಲರೂ ತಲೆದೂಗಿದರು.

ಭಾಗ್‌ರಾಮ್ ದೃಢಕಾಯದ ಉತ್ಸಾಹಿ ವ್ಯಕ್ತಿ. ಸುಮಾರು ನಲ್ವತ್ತು ವಯಸ್ಸು. ನೋಟಕ್ಕೆ ಶಾಂತ ಸ್ವಭಾವದ ಸರಳ ವ್ಯಕ್ತಿ. ಸದಾ ಹಸನ್ಮುಖಿ, ಸರಳ ಮಾತುಗಾರ, ವಿನೋದಪ್ರಿಯ. ಹಾಗೇ ಕೆಲಸಕ್ಕೆ ತೊಡಗಿದ ನೆಂದರೆ ಬಿಡುವಿಲ್ಲದೆ ದುಡಿಯಬಲ್ಲ. ಆತ ಜಮ್ಮುವಿನ ನಿವಾಸಿ. ಅವನ ಬಂಧುಗಳೂ ಅಲ್ಲಿದ್ದರು. ಭಾಗ್‌ರಾಮ್‌ನೊಡನೆ ಅಜಯನು ಅದೊಂದು ದಿನ ಜಮ್ಮುವಿಗೆ ಪ್ರಯಾಣ ಬೆಳೆಸಿದ. ಖೋಟಾ ನಾಣ್ಯ ತಯಾರಿಕೆಗೆ ಬೇಕಾದ ಸಕಲ ವಸ್ತುಗಳೂ ಅವರ ಬಳಿಯಿದ್ದುವು.

ಭಾಗ್‌ರಾಮ್ ತನ್ನ ಬಂಧುಗಳ ಮನೆಯಲ್ಲಿ ಉಳಿದುಕೊಳ್ಳಲಿಲ್ಲ. ಅವನ ಸ್ನೇಹಿತರೊಬ್ಬರ ಮನೆಯಲ್ಲಿ ಇಬ್ಬರೂ ಇಳಿದರು. ಆತ ಶಿಕ್ಷಕ.

ಕೋಣೆಯೊಂದರಲ್ಲಿ ಖೋಟಾ ನಾಣ್ಯದ ಕಾರ್ಖಾನೆ ಆರಂಭವಾಯಿತು. ಭಾಗ್‌ರಾಮ್ ನಾಣ್ಯ ತಯಾರಿಕೆ ಬಗೆಗೆ ಪ್ರತಿಯೊಂದು ವಿಷಯವನ್ನೂ ಅಜಯು ನಿಗೆ ತಿಳಿಸಿದ. ವಿಜ್ಞಾನದ ಅರಿವು ಇದ್ದ ಅಜಯು ಅದನ್ನು ಕಾರ್ಯಗತ ಮಾಡುತ್ತ ಸಾಗಿದ್ದ. ಕೆಲಸ ಅಜಯುನದಾಗಿತ್ತು. ಸಲಹೆ ಸೂಚನೆ ಭಾಗ್ ರಾಮ್‌ನದು. ಪ್ರತಿ ಹೆಜ್ಜೆಗೂ ಅಜಯು ಅಡ್ಡಿ ಇದಿರಿಸಬೇಕಾಯಿತು. ಲೋಹ ಕರಗಿಸುವುದು, ಇತರ ಲೋಹಗಳ ಬೆರಕೆ, ಅಚ್ಚಿನಲ್ಲಿ ಹೊಯ್ಯುವುದು ಎಲ್ಲವೂ ಅಜಯುನ ಕಾರ್ಯವಾಗಿತ್ತು. ಭಾಗ್‌ರಾಮ್‌ನಿಗೆ ನಾಣ್ಯ ತಯಾರಿಕೆಯ ಸೂತ್ರಗಳೂ, ವಿಷಯವೂ ಪರಿಪೂರ್ಣವಾಗಿ ತಿಳಿದಿದ್ದರೂ, ಆತ ಕಾರ್ಯ ಕುಶಲನಲ್ಲ.

ಹಗಲಿರುಳೂ ದುಡಿದು, ನಿದ್ರಾಹಾರ ಮರೆತು ಕೆಲಸ ಮಾಡಿ, ಕೊನೆಗೆ ಒಂದು ರೂಪಾಯಿಯ ನಾಣ್ಯವನ್ನು ಅಜಯು ಸಿದ್ಧಗೊಳಿಸಿದ. ಲೋಹ ಮಿಶ್ರಣ ಕಂಡುಹಿಡಿದು, ಅದನ್ನು ಕರಗಿಸಿ, ಎರಕ ಹೊಯ್ಯುವದನ್ನು ಅಜಯು ಅರಿತ. ಆದರೆ, ದಿನಕ್ಕೆ ನಾಲ್ಕಾರು ನಾಣ್ಯ ತಯಾರಿಸುವುದೇ ಕಷ್ಟವೆನಿಸಿ, ಕೆಲಸ ಲಾಭದಾಯಕವಲ್ಲ ಎಂಬ ಅನುಭವ ಅಜಯುನಿಗಾಯಿತು.

ಈ ನಡುವೆ ಎರಡು ಮೂರು ಬಾರಿ ಭಾಗ್‌ರಾಮ್ ಲಾಹೋರಿಗೆ ತೆರಳಿ ನಾಣ್ಯ ತಯಾರಿಕೆಗೆ ಅಗತ್ಯವಾದ ವಸ್ತುಗಳನ್ನು ತಂದಿದ್ದ. ಅದೊಂದು ದಿನ ಆತ ಹಿಂತಿರುಗಿದ ದಿನವೇ, ಯಾರೋ ಸರ್ಕಾರದ ವಿರುದ್ಧ ಕರಪತ್ರಗಳನ್ನು ನಗರದಲ್ಲಿ ಹಂಚಿದರು.

ವಿಸ್ತಾರ, ಜನಸಂಖ್ಯೆಗೆ ತೀರಾ ಹೆಚ್ಚೆನಿಸುವಷ್ಟು ಪೋಲೀಸ್ ಪಡೆಯಿದ್ದ ಈ ಆಳರಸ ರಾಜ್ಯದ ಪೋಲೀಸರು ತೀವ್ರ ಎಚ್ಚರಗೊಂಡು, ಪರಿಶೋಧನೆಗೆ ತೊಡಗಿದರು. ಆಗಲೇ ನಿರುದ್ಯೋಗಿ ಎಂದು ಪ್ರಸಿದ್ಧಿ ಗಳಿಸಿದ ಭಾಗ್‌ರಾಮ್‌ನ ಬಗೆಗೆ ಅವರಿಗೆ ಸಂದೇಹವೂ ಉಂಟಾಯಿತು. ಅವರು ಭಾಗ್‌ರಾಮ್ ವಾಸಿಸು ತ್ತಿದ್ದ ಮನೆಯಿರುವ ಬೀದಿಯಲ್ಲಿ ಗಸ್ತು ತಿರುಗಲಾರಂಭಿಸಿದರು. ಸಾದಾ ಉಡಿಗೆಯ ಕೆಲ ಗುಪ್ತ ದಳದವರು ಭಾಗ್‌ರಾಮ್ ಇದ್ದ ಮನೆಯ ಮುಂದೆ ಮೆಟ್ಟಲುಗಳ ಮೇಲೂ ಕುಳಿತಿದ್ದರು.

ಅಜಯುನಿಗೆ ತೀರಾ ಗಾಬರಿಯಾಯಿತು. ದೇಶದ ಬಿಡುಗಡೆಗಾಗಿ ಹೋರಾಡಿ ಕೀರ್ತಿ ಗಳಿಸಲು ಬಯಸಿದ್ದ ಆತ. ಈಗ ಕೇವಲ ನಾಣ್ಯ ತಯಾ

ರಿಕೆಯ ಆರೋಪದಿಂದ ಬಂಧಿತನಾಗಬೇಕೇ ಎಂಬ ಚಿಂತೆ ಮೂಡಿತು. ಜಮ್ಮುವಿನಲ್ಲಿ ಸೆರೆ ಸಿಕ್ಕಿದರಂತೂ ಕತೆ ಮುಗಿದಂತೆಯೇ ಸರಿ. ಅದು ಸ್ವತಂತ್ರ ರಾಜ್ಯ. ಪೋಲೀಸರು ಕತ್ತಲ ಕೋಣೆಯಲ್ಲಿ ಅವರನ್ನು ಸೆರೆ ಹಾಕಿದರೆ, ಆ ಸುದ್ದಿಯೂ ಹೊರ ಲೋಕಕ್ಕೆ ತಿಳಿಯುವಂತಿಲ್ಲ. ವಿಚಾರಣೆಯ ಮಾತೇ ಇರಲಿಲ್ಲ.

ಅವರಿಗೆ ಆಶ್ರಯ ನೀಡಿದವನಿಗೆ ಅವರ ಕಾರ್ಯ ತಿಳಿದಿದ್ದರೂ, ರಾಜಕೀಯದಲ್ಲಿ ಆಸಕ್ತಿ ಇರಲಿಲ್ಲ. ಅವರಿಗೆ ನೆರವಾಗಲೆಂದು ಇಡೀ ದಿನ ಮನೆಯಿಂದ ಹೊರಗಡೆ ಇದ್ದು, ರಾತ್ರಿ ಹಿಂತಿರುಗುತ್ತಿದ್ದ. ಈಗ ಅವನಿಗೂ ಅಪಾಯ ಉಂಟಾಗುವ ಭೀತಿ ತಲೆದೋರಿತು.

ಪೋಲೀಸರಿನ್ನೂ ಆ ಮನೆ ಶೋಧಿಸುವ ಯೋಜನೆ ಮಾಡಿರಲಿಲ್ಲ.

ದೀರ್ಘ ವಿಚಾರ ಮಾಡಿ ಅಜಯ ನಿರ್ಧಾರಕ್ಕೆ ಬಂದ. ಮೂರು ತಿಂಗಳ ಕಾಲ ಆಗಲೇ ಕಳೆದಿತ್ತು. ಪ್ರಯತ್ನವೆಲ್ಲ ವಿಫಲವಾಗಿತ್ತು.

ಸಂಜೆಯ ಕತ್ತಲ ಮರೆಯಲ್ಲಿ ಅಜಯ ಹಾಗೂ ಭಾಗ್‌ರಾಮ್, ನಾಣ್ಯ ತಯಾರಿಕೆ ಸಾಧನಗಳನ್ನೆಲ್ಲ ನಾಶಗೊಳಿಸಿ, ಪೋಲೀಸರಿಗೆ ತಿಳಿಯದಂತೆ ಆ ಮನೆಯಿಂದ ಹೊರಬಿದ್ದರು.

ನೇರವಾಗಿ ಲಾಹೋರಿಗೆ ಹೊರಡುವ ರೈಲು ಹತ್ತಿದರು.

# ೧೪

"ಯಾವುದೇ ಚಳುವಳಿಯನ್ನು ಹೋರಾಟವನ್ನು ಒಮ್ಮೆ ಆರಂಭಿಸಿದ ಬಳಿಕ ಮುಂದುವರಿಸಿಕೊಂಡು ಹೋಗಬೇಕು. ಅದಿಲ್ಲವಾದರೆ ಹೆಜ್ಜೆ ಹೆಜ್ಜೆಗೂ ಅದು ವಿಶ್ರಾಂತಿ ಪಡೆಯುತ್ತದೆ."

"ಈಗ ನಡೆದ ಘಟನೆ ಇಡೀ ದೇಶವನ್ನು ಬೆರಗುಗೊಳಿಸಿದೆ. ಇದರ ಹಿಂದೆಯೇ ಇನ್ನೂ ಹೆಚ್ಚಿನ ಸಾಹಸ ಅಗತ್ಯ."

"ಕ್ರಾಂತಿಗೆ ಜಯವಾಗಲಿ ಎಂಬುದು ದೇಶದ ಜನಕೋಟಿಯ ನಿತ್ಯ ಮಂತ್ರವಾಗಬೇಕು."

ನ್ಯಾಯ್‌ಕಿ ಮಂಡಿಯಲ್ಲಿನ ಒಂದಸ್ತಿನ ಮನೆಯಲ್ಲಿ ಸಭೆ ಸೇರಿದ್ದ ಕ್ರಾಂತಿಕಾರರು ಮುಂದಿನ ಕಾರ್ಯಕ್ರಮದ ಬಗೆಗೆ ಚರ್ಚಿಸಿದರು.

ತಮ್ಮ ಒಂದು ಸಾಹಸವನ್ನು ನಿರ್ದಿಷ್ಟಪಡಿಸಿದಂತೆ ನಿಖರವಾಗಿ ಸಾಧಿಸಿದ ಅವರಿಗೀಗ ಎಲ್ಲಿಲ್ಲದ ಧೈರ್ಯ, ಉತ್ಸಾಹಗಳು ಮೂಡಿದ್ದುವು.

"ಆದರೆ ಒಂದು ಮಾತು. ಇದೀಗ ಸರ್ದಾರ್ ತಾವೇನು ಮಾಡಬಲ್ಲಿರಿ ಎಂದು ತೋರಿದ್ದೀರಿ. ಮುಂದೆ ನೀವೂ ಆಜಾದ್‌ರವರೂ ಸ್ವತಃ ಭಾಗವಹಿಸ ಬಾರದು. ಆ ಕೆಲಸಕ್ಕೆ ನಾವಿದ್ದೇವೆ. ನೀವು ಮಾರ್ಗದರ್ಶನ ಮಾಡಿ."

"ಬಲಿದಾನದಲ್ಲಿ ಎಲ್ಲರ ನೆತ್ತರೂ ಒಂದೇ ಕಿಶೋರ್. ಇಲ್ಲಿ ಎಲ್ಲರೂ ಸಮಾನರು. ಎಲ್ಲರೂ ಮಾರ್ಗದರ್ಶಕರು, ಎಲ್ಲರೂ ನಾಯಕರು."

"ನಿಜ. ಆದರೆ ಸರ್ದಾರರ ಜೀವ ಅಮೂಲ್ಯವಾದುದು. ಅವರು ಈ ಕ್ರಾಂತಿಕಾರೀ ಸಂಘಟನೆಯ ಅಸ್ತಿಭಾರ."

"ನಾಯಕರ ಸೆರೆಯಾದೊಡನೆ ಇಡೀ ತಂಡವೇ ನಿಸ್ತೇಜನಗೊಂಡು ಕ್ರಾಂತಿಕಾರಿ ಕೆಲಸ ನಿಂತುಹೋದುದನ್ನು ಹಿಂದಿನ ಉದಾಹರಣೆಗಳಿಂದ ನಾವು ಕಂಡಿದ್ದೇವೆ."

ಇಡೀ ರಾತ್ರಿಯೆಲ್ಲ ಚರ್ಚೆ ನಡೆಯಿತು. ಸಂಘಟನೆ ಬಲಪಡಿಸಿ ಮಹೋನ್ನತ ಕ್ರಾಂತಿ ಸಾಧಿಸುವ ಕನಸು ಎಲ್ಲರದಾಗಿತ್ತು.

"ಕೇಂದ್ರ ಅಸೆಂಬ್ಲಿಯಲ್ಲೇ ಬಾಂಬ್ ಸ್ಫೋಟಿಸಬೇಕು......ಆಗಲೇ ಇಡೀ ದೇಶಕ್ಕೆ ಕಹಳೆ ಕೇಳಿಸೀತು," ಎಂಬ ಸಲಹೆ ಎಲ್ಲರಿಗೂ ಸ್ವಾಗತಾರ್ಹ ವಾಯಿತು. ಆದರೂ ಆ ಕಾರ್ಯದ ಸೂಕ್ಷ್ಮತೆಯ ಬಗೆಗೆ ಪ್ರಶ್ನೆ ಬಾರದಿರ ಲಿಲ್ಲ.

"ಈಗಾಗಲೇ ಸಾಂಡರ್ಸ್ ಕೊಲೆಯ ಗೊಂದಲ ತಣ್ಣಗಾಗಿದೆ. ನಮ್ಮನ್ನು ಹಿಡಿಯಲಾಗದೆ ಪೋಲೀಸರು ನಿರಾಶರಾಗಿದ್ದಾರೆ. ಆದರೆ, ಅವರು ನಮ್ಮ ಬೆನ್ನು ಬಿಟ್ಟಿಲ್ಲ. ಒಂದು ಕೊಲೆಯ ಕಾರಣದಿಂದ ನಾವಾರೂ ಸೆರೆಯಾಗಬಾರದು. ಆಗಬೇಕಾದುದನ್ನೆಲ್ಲ ಶೀಘ್ರವಾಗಿ, ಒಂದರ ಹಿಂದೊಂದ ರಂತೆ ಸಾಧಿಸಬೇಕು."

"ಮೂರು ತಿಂಗಳು ಕಳೆದಿದೆ. ನಾವು ವಿಜಯದಲ್ಲಿ ಮೈಮರೆತಂತಾಗಿದೆ. ಏನೇ ಆಗಲಿ, ಅಸೆಂಬ್ಲಿಯೊಳಗೆ ಬಾಂಬ್ ಎಸೆಯಲೇಬೇಕು."

ಭಗತ್‌ಸಿಂಗ್ ಅವರ ಈ ಖಚಿತ ನಿರ್ಧಾರವನ್ನು ಎಲ್ಲರೂ ಅನುಮೋದಿಸಿ ದರು. ಆ ಬಗೆಗೆ ಕಾರ್ಯ ಸಾಧಿಸುವ ವಿಚಾರದಲ್ಲಿ ಚರ್ಚೆ ನಡೆಯಿತು.

"ಅಧಿವೇಶನದ ಆರಂಭದ ದಿನವೇ ಕೆಲಸ ನಡೆಯಬೇಕು."

"ಹೌದು, ಆ ದಿನ ಸಭೆಯಲ್ಲಿ ಸೈಮನ್ ಕಮಿಷನ್‌ನವರೂ ಇರುತ್ತಾರೆ."

ದೆಹಲಿಗೆ ಹೋಗಿ ಎಲ್ಲಿ ತಂಗಬೇಕು ? ಹೇಗೆ ಬಾಂಬನ್ನು ಒಯ್ಯಬೇಕು ? ಹೇಗೆ, ಎಷ್ಟು ಹೊತ್ತಿನಲ್ಲಿ ಆಸ್ಫೋಟಿಸಬೇಕು ? ಎಂಬೆಲ್ಲ ವಿಚಾರಗಳ ಬಗೆಗೆ ವಿವರವಾದ ಚರ್ಚೆ ನಡೆಯಿತು.

ಸರ್ದಾರ್ ಭಗತ್‌ಸಿಂಗ್ ಈ ಕಾರ್ಯದಲ್ಲಿ ಭಾಗವಹಿಸಬಾರದೆಂದು ಇತರ ಸದಸ್ಯರು ಖಚಿತವಾಗಿ ತಿಳಿಸಿದರು.

ಬಾಂಬ್ ಎಸೆಯಲೇಬೇಕೆಂದೂ ನಿರ್ಧಾರವಾಗಿತ್ತು.

ಹಾಗಾದರೆ, ಇತರ ಯಾರು ಯಾರು ಈ ಕೆಲಸ ಮಾಡಬೇಕು ? ಯಾರು ಅಸೆಂಬ್ಲಿಯಲ್ಲಿ ಬಾಂಬೆಸೆದು ಕ್ರಾಂತಿಕಾರಿ ಘೋಷಣೆ ಮಾಡ ಬೇಕು ?

ಚರ್ಚೆ ನಡೆಯುತ್ತಿದ್ದಂತೆ ಶುಕದೇವ್ ಕೊಂಚ ರೋಷದಿಂದಲೇ ಹೇಳಿದ :

"ಸರ್ದಾರ್‌ಜೀ, ನಿಮ್ಮ ಮೌನ ನಮಗೆ ಅರ್ಥವಾಗುವುದಿಲ್ಲ. ನಿಮಗೆ ಪ್ರಾಣಭೀತಿ ಉಂಟಾದಂತಿದೆ. ನಿರ್ದಿಷ್ಟವಾಗಿ ನಿಮ್ಮ ಅಭಿಪ್ರಾಯ ಹೇಳ ಬಾರದೇನು ?"

ಈ ಬಗೆಯ ಮಾತನ್ನು ಇತರ ಸದಸ್ಯರು ನಿರೀಕ್ಷಿಸಿರಲಿಲ್ಲ. ಸರ್ದಾರ್‌ಗೆ ಇದರಿಂದಾಗಿ ತುಂಬ ನೋವಾಯಿತು. ತನ್ನ ನಿಸ್ಪೃಹತೆಯನ್ನೇ ಗೆಳೆಯರು ಪ್ರಶ್ನಿಸಿದ್ದಾರೆ ಎಂದೆನ್ನಿಸಿತು.

"ಶುಕದೇವ್, ನನ್ನ ನಿರ್ಧಾರವಂತೂ ಆಗಿಯೇ ಬಿಟ್ಟಿದೆ. ನಿಮಗೆ ತಿಳಿದಿಲ್ಲ ಎಂಬುದು ನಿಜ. ಈ ಬಗೆಗೆ ಇನ್ನು ಚರ್ಚೆ ಬೇಡ. ಭಗತ್‌ಸಿಂಗ್ ಅಸೆಂಬ್ಲಿಯಲ್ಲಿ ಬಾಂಬೆಸೆಯುತ್ತಾನೆ. ಇದು ಅಂತಿಮ ನಿರ್ಧಾರ."

ಪಾರ್ಟಿಯ ನಾಯಕನಾದ ಶುಕದೇವನ ಪ್ರಶ್ನೆ. ಅದಕ್ಕೆ ಉತ್ತರವಾಗಿ ಸರ್ದಾರ್ ಹೇಳಿದ ಮಾತುಗಳಿಂದಾಗಿ ದಿಙ್ಮೂಢರಾದ ಎಲ್ಲರೂ ಮೌನ ತಳೆದರು. ಒಲ್ಲದ ಮನಸ್ಸಿನಿಂದ, ದುಃಖದಿಂದ, ಕೇಂದ್ರ ಕ್ರಾಂತಿಕಾರಿ ಸಮಿತಿಯು ಸರ್ದಾರ್‌ರಿಗೆ ಅನುಮತಿ ನೀಡಿತು.

ಉದ್ವೇಗದ ಭರದಲ್ಲಿ ಭಗತ್‌ಸಿಂಗನಿಗೆ ಅನುಮತಿ ನೀಡಿದರೂ, ಸದಸ್ಯರ ಕಳವಳ ಬೆಳೆಯುತ್ತ ಬಂತು. ತಮ್ಮ ಪಾರ್ಟಿಗೆ ಇದು ಪರ್ವಕಾಲ ಎಂದೂ ತಿಳಿಯದೆ ಇರಲಿಲ್ಲ.

ವಾಸ್ತವವಾಗಿಯೇ, ಕ್ರಾಂತಿ-ಶಾಂತಿಗಳಲ್ಲಿ ಯಾವುದು ಈ ದೇಶಕ್ಕೆ ಬೇಕು ಎಂಬ ಬಗೆಗೆ ದೇಶದಾದ್ಯಂತ ಜಿಜ್ಞಾಸೆ ಸಾಗಿತ್ತು. ಗಾಂಧೀಜಿಯ ನಾಯಕತ್ವದಲ್ಲಿ ಶಾಂತಿ, ಸತ್ಯ, ಅಹಿಂಸೆಗಳ ಮಾರ್ಗಾನುಯಾಯಿಗಳ ಸಂಖ್ಯೆ ಅಪಾರವಾಗಿ ಬೆಳೆದಿತ್ತು. ಕ್ರಾಂತಿಗಷ್ಟೇ ಅಲ್ಲ ಶಾಂತಿಗೂ ಇದು ಪರ್ವಕಾಲ. ಮುಂದಿನ ಹೋರಾಟದಲ್ಲಿ ಯಾವುದು ಮಹಾಜನ ಬೆಂಬಲ ಗಳಿಸುವುದೋ ಅದು ಬಾಳುವುದು ಖಚಿತವಾಗಿತ್ತು.

ಸಭೆ ನಡೆದ ಬಳಿಕ ಪ್ರತಿಯೊಬ್ಬ ನಾಯಕನೂ ತನ್ನ ಪಾಲಿನ ಹೊಣೆ ನಿರ್ವಹಿಸಲೆಂದು ಹೊರಟರು. ಅವರೆಲ್ಲರೂ ಮತ್ತೆ ದೆಹಲಿಯಲ್ಲಿ ಸೇರ ಬೇಕೆಂದು ನಿರ್ಧಾರವಾಗಿತ್ತು. ಆಗ್ರಾದಲ್ಲಿನ ಬಾಂಬ್ ಕಾರ್ಖಾನೆಯಲ್ಲಿ ನಾಲ್ಕು ಬಾಂಬ್‌ಗಳು ಸಿದ್ಧವಾಗಿದ್ದುವು. ಅವುಗಳಲ್ಲಿ ಒಂದನ್ನು ಪರೀಕ್ಷಾರ್ಥವಾಗಿ

ಚಂದ್ರಶೇಖರ ಆಜಾದ್ ಬಂಡೇಲ್‌ಖಂಡ್ ಕಾಡಿನಲ್ಲಿ ಸಿಡಿಸಿದ. ಇನ್ನುಳಿದುದು ಮೂರು.

ಕ್ರಾಂತಿಕಾರೀ ಪಕ್ಷದ ನಾಯಕ ಶುಕದೇವ್ ಅವರು ಒಂದು ಬಾಂಬನ್ನು ತನ್ನಲ್ಲಿ ಇರಿಸಿಕೊಂಡರು. ಮತ್ತೆರಡು ಭಗತ್‌ಸಿಂಗ್‌ರಿಗೆ ಕೊಡಲಾಯಿತು.

ಇದಾದ ಒಂದು ವಾರದ ಅನಂತರ......

೧೯೨೯ ರ ಏಪ್ರಿಲ್......ಮಧ್ಯಾಹ್ನ......

ನವದೆಹಲಿಯಲ್ಲಿ.........ಸರ್ದಾರ್ ವಿಠ್ಠಲಭಾಯಿ ಪಟೇಲ್‌ರವರ ಅಧ್ಯಕ್ಷತೆಯಲ್ಲಿ ಶಾಸನ ಸಭೆಯ ಅಧಿವೇಶನ ಆರಂಭವಾಯಿತು.

ಸಭಾ ಮಂದಿರದಲ್ಲಿ ಭಾರತೀಯ ಹಾಗೂ ಆಂಗ್ಲೇಯ ಸದಸ್ಯರು ಕುಳಿತಿದ್ದರು. ಪ್ರೇಕ್ಷಕರ ಗ್ಯಾಲರಿ ಜನನಿಬಿಡವಾಗಿತ್ತು. ಸೈಮನ್ ಕಮಿಷನ್ನಿನ ಏಳು ಮಂದಿ ಸದಸ್ಯರೂ ಅಧಿವೇಶನದ ಕಾರ್ಯಕಲಾಪಗಳನ್ನು ನೋಡಲು ಇಲ್ಲಿ ಸೇರಿದ್ದರು.

ಪ್ರಶ್ನೋತ್ತರಗಳು ನಡೆದುವು.

ಫಕ್ಕನೆ ಪ್ರೇಕ್ಷಕರ ಗ್ಯಾಲರಿಯಿಂದ ಬಾಂಬ್ ಒಂದು ಸಭಾ ಭವನದ ಮಧ್ಯೆ ಬಿದ್ದು ಸಿಡಿಯಿತು. ಇಡೀ ಭವನವೇ ನಡುಗಿತು.

ಸದಸ್ಯರು ಹೆದರಿ ಎತ್ತೆತ್ತಲೋ ಓಡಿದರು. ಹಲವರು ಮರೆಯಾಗ ಲೆಂದು ಮೇಜುಗಳಡಿ ಸೇರಿದರು. ಸಭಾ ಭವನವೆಲ್ಲ ಗೊಂದಲಮಯ ವಾಯಿತು. ಆ ಗೊಂದಲ ಹಾಗೂ ಕಂಪನಗಳಲ್ಲಿ ಸಭೆ ತತ್ತರಿಸುತ್ತಿದ್ದಾಗ, ಉಚ್ಚಕಂಠದಿಂದ ಪ್ರೇಕ್ಷಕರ ಗ್ಯಾಲರಿಯಲ್ಲಿ ಇಬ್ಬರು ತರುಣರು ನಿಂತು "ಇಂಕ್ವಿಲಾಬ್ ಜಿಂದಾಬಾದ್!" ಎಂದು ಘೋಷಿಸಿದರು. ತಾವು ತಂದಿದ್ದ ಕರಪತ್ರಗಳನ್ನು ಸಭಾ ಭವನದಲ್ಲಿ ಮಳೆಗೆರೆದರು.

"ಭಾರತ ಮಾತಾಕೀ ಜೈ!"

"ಇಂಕ್ವಿಲಾಬ್ ಜಿಂದಾಬಾದ್!" ಘೋಷಣೆಯ ಕೂಗು ಮುಗಿಲೆತ್ತರ ವನ್ನು ಮುಟ್ಟಿತು.

ಸಭಿಕರೀಗ ಮೆಲ್ಲನೆ ಒಳಗಡೆ ಬರಲಾರಂಭಿಸಿದರು. ಅಧ್ಯಕ್ಷರೂ ಬಂದು ತಮ್ಮ ಪೀಠದಲ್ಲಿ ಕುಳಿತು, "ಸಭೆ ಮುಗಿಯಿತು" ಎಂದು ಘೋಷಿ ಸಿದರು.

ಇನ್ನೂ ಘೋಷಿಸುತ್ತಲೇ ಇದ್ದ ಯುವಕರನ್ನು ಪೋಲೀಸರು ದಸ್ತಗಿರಿ ಮಾಡಿ ಕರೆದೊಯ್ದರು.

ಭಾರತದ ಸ್ವಾತಂತ್ರ್ಯ ಯೋಧರಿಗೆ ಈಗ ಹೊಸ ಘೋಷಣೆಗಳು ದೊರೆತುವು.

ಇಂಕ್ವಿಲಾಬ್ ಜಿಂದಾಬಾದ್......

ಸಾಮ್ರಾಜ್ಯಶಾಹಿ ನಾಶವಾಗಲಿ......

ವಂದೇ ಮಾತರಂ......

ವಾಯುವೇಗದಿಂದ ಸರ್ಕಾರ ತನ್ನ ಪ್ರತಿಕ್ರಿಯೆ ತೋರಿಸಿತು. ಶಾಸನ ಸಭೆಯಲ್ಲಿ ಬಾಂಬೆಸೆದುದಕ್ಕಾಗಿ ಇಬ್ಬರು ತರುಣರೂ ನ್ಯಾಯಾಧೀಶರ ಮುಂದೆ ನಿಂತರು.

ಸರ್ದಾರ್ ಭಗತ್‌ಸಿಂಗ್.

ಬಟುಕೇಶ್ವರ ದತ್.

ಬಾಂಬ್ ಕೇವಲ ಸದ್ದು ಮಾಡುವ ಹುಸಿ ಬಾಂಬ್ ಆಗಿತ್ತು. ಅದರಿಂದ ಯಾರಿಗೂ ಗಾಯಗಳಾಗಿರಲಿಲ್ಲ.

ಆದರೆ, ಸಾಮ್ರಾಜ್ಯಶಾಹಿಗೆ ಅದಾವ ವಾದವೂ ಬೇಕಾಗಿರಲಿಲ್ಲ.

ಇಬ್ಬರು ಆಪಾದಿತರಿಗೂ ಜೀವಾವಧಿ ಶಿಕ್ಷೆ ವಿಧಿಸಲಾಯಿತು.

ಸರ್ದಾರ್ ಭಗತ್‌ಸಿಂಗ್ ಮತ್ತು ಬಟುಕೇಶ್ವರ ದತ್ ತಮ್ಮ ಜೀವಾವಧಿ ಶಿಕ್ಷೆ ಅನುಭವಿಸಲು ಸಿದ್ಧರಾಗಿ ಸೆರೆಮನೆಯನ್ನು ಸೇರಿದರು.

ಈ ಬಾಳನ್ನೂ ಅವರು ನಿರೀಕ್ಷಿಸಿದ್ದರು.

ಹರ್ಷಿತರಾಗಿಯೇ ಅದನ್ನು ಸ್ವಾಗತಿಸಿದರು.

ಆದರೆ......

ತನ್ನನ್ನು ಪೂರ್ಣವಾಗಿ ಅಳಿಸಲು ನಿರ್ಧರಿಸಿ, ಅದಕ್ಕಾಗಿ ಶ್ರಮಿಸಿದ ಈ ವೀರರನ್ನು ಬಾಳಲು ಸಾಮ್ರಾಜ್ಯಶಾಹಿ ಎಡೆ ಕೊಡಬಲ್ಲುದೇ ?

ಅವರನ್ನು, ಅವರಂತಹ ಇತರ ವೀರ ಯೋಧರನ್ನು ಬಲಿ ತೆಗೆದುಕೊಳ್ಳಲು ಅದು ಬಯಸಿತ್ತು.

ಬಾಂಬ್ ಆಸ್ಫೋಟನೆ, ಶೀಘ್ರ ವಿಚಾರಣೆ, ತೀವ್ರ ಶಿಕ್ಷೆ.

ಎಲ್ಲವೂ ತಡೆಯಿಲ್ಲದೆ ಸಾಗಿದುವು.

ಆದರೆ ಈ ಘಟನೆ ಸರ್ಕಾರಕ್ಕೆ ಹೊಸ ಬೆಳಕು ನೀಡಿತು.

ಸರ್ದಾರ್ ಭಗತ್‌ಸಿಂಗ್ ಬಳಿಯಲ್ಲಿ ಆಗ ಆಟೋಮ್ಯಾಟಿಕ್ ಪಿಸ್ತೂಲು ಇತ್ತು. ಅದನ್ನು ಪರೀಕ್ಷಿಸಿದಾಗ, ಅದರಿಂದ ಹಾರಿದ ಗುಂಡಿನಿಂದಲೇ ಸಾಂಡರ್ಸ್ ಕೊಲೆಯಾಗಿರಬೇಕೆಂದು ಊಹಿಸಿದರು. ಸಾಂಡರ್ಸ್ ಕೊಲೆ ಸಂಬಂಧದ ಭಿತ್ತಿ ಪತ್ರಗಳನ್ನು ಭಗತ್‌ಸಿಂಗ್ ಬರೆದುದೂ ತಿಳಿದು ಬಂತು.

ಸಾಂಡರ್ಸ್ ಕೊಲೆಯನ್ನು ಪತ್ತೆ ಹಚ್ಚಲಾಗದೆ ಚಡಪಡಿಸುತ್ತಿದ್ದ ಪೋಲೀಸರಿಗ ಮಹತ್ವದ ಪುರಾವೆಗಳನ್ನು ಎಡವಿದಂತಾಯಿತು.

ಕ್ರಾಂತಿಕಾರಿಗಳನ್ನು, ಸ್ವಾತಂತ್ರ್ಯ ಪ್ರೇಮಿಗಳನ್ನು, ಬುಟ್ಟಿಯಲ್ಲಿ ತುಂಬುವು ದೊಂದೇ ಸರ್ಕಾರದ ಬಿಡುವಿಲ್ಲದ ಕೆಲಸವಾಗಿತ್ತು.

ಪರೀಕ್ಷೆಗೆ ಅವಕಾಶ, ವಿವೇಚನೆಗೆ ತಾಳ್ಮೆ ಇನ್ನೂ ಒದಗಿರಲಿಲ್ಲ.

ಕ್ರಾಂತಿಕಾರಿಗಳಿಗಂತೂ ಎಂದೂ ಇಲ್ಲದ ಅವಸರ. ಸಾವಿರಾರು ಬಾಂಬು ಗಳು ಸಿದ್ಧವಾಗಬೇಕು. ದೇಶದಾದ್ಯಂತ ಕ್ರಾಂತಿ ನಡೆಯಬೇಕು ಎಂಬುದು ಬಯಕೆ.

ಲಾಹೋರ್‌ನಲ್ಲಿ ಆಗಲೇ ಬಾಂಬ್ ಕಾರ್ಖಾನೆಯೊಂದು ಸ್ಥಾಪಿತ ವಾಗಿತ್ತು. ಈಗ ಅಲ್ಲಿ ಬಿಡುವಿಲ್ಲದ ಶೋಧನೆ, ಕೆಲಸ ಕಾರ್ಯಗಳು ಆರಂಭ ವಾದುವು. ಶುಕದೇವ್ ಈ ಕೇಂದ್ರದ ವ್ಯವಸ್ಥೆ ನಡೆಸಿದ್ದರು.

ಉತ್ಸಾಹ ಅನೇಕ ವೇಳೆ ಎಡವಿ ಬೀಳಲು ನೆರವಾಗುತ್ತದೆ.

ಪಂಡಿತ್, ಕಿಶೋರಲಾಲ್ ಅವರಿಗೆ ದೇಶ ಪ್ರೇಮದ ಉದ್ವೇಗದಿಂದಾಗಿ ಉತ್ಸಾಹ ನೂರುಮಡಿ ಬೆಳೆದಿತ್ತು. ಬಾಂಬ್ ತಯಾರಿಕೆಗೆ ಅಗತ್ಯವಾದ ವಸ್ತುಗಳು ಎಲ್ಲೇ ಇರಲಿ, ಅದನ್ನು ಅವರು ಸಂಗ್ರಹಿಸುತ್ತಿದ್ದರು.

ಅದೊಂದು ದಿನ ಪೋಲೀಸರಿಗೆ ಅವರ ಬಗೆಗೆ ಸಂದೇಹ ಬೆಳೆಯಿತು. ಗೂಢಚಾರರು ಅವರ ಚಲನ ವಲನಗಳ ಮೇಲೆ ಕಣ್ಣಿಟ್ಟರು. ಬಾಂಬ್ ಕಾರ್ಖಾನೆಯನ್ನು ಪತ್ತೆ ಹಚ್ಚಿದರು.

ಮತ್ತೊಂದು ಕ್ರಾಂತಿಕಾರಕ ಸಾಹಸವಾಗಬಹುದಾದ ಸಂದರ್ಭ ಉರುಳಿ ಹೋಯಿತು.

ಶುಕದೇವ್, ಜೈಗೋಪಾಲ್ ಮತ್ತಿತರರ ದಸ್ತಗಿರಿಯಾಯಿತು.

## ೧೫

ಅಕ್ಬರ್ ಮಂಡಿ ಪೋಲೀಸ್ ಸ್ಟೇಷನ್......

ಲಾಹೋರ್‌ನ ಪೋಲೀಸ್ ಸ್ಟೇಷನ್‌ಗಳಲ್ಲಿ ದುರಂತ ಕೀರ್ತಿ ಗಳಿಸಿದೆ ಇದು. ಇದಕ್ಕೆ ದುರ್ಲಿ ಜಾತಾ ಪೋಲೀಸ್ ಸ್ಟೇಷನ್ ಎಂದೂ ಹೆಸರಿದೆ.

ಕೊಲೆಯ ಆರೋಪಿಯಾಗಿರಲಿ, ದೇಶಭಕ್ತನಾಗಿರಲಿ, ಮೊದಲು ಇಲ್ಲಿಗೆ ನಡೆಯಬೇಕು.

ಎಂಥ ಹಟವಾದಿ ಅಪರಾಧಿಯೇ ಇರಲಿ, ಪೋಲೀಸರ ವಿಚಾರಣೆಗೆ ಸೋತು ಆತ ಇಲ್ಲಿ ಮೃದುವಾಗಲೇ ಬೇಕು.

ಹಿಂದೂಸ್ಥಾನ್ ಸೋಷಲಿಸ್ಟ್ ರಿಪಬ್ಲಿಕನ್ ಸೇನೆಯ ಮಹಾ ನಾಯಕರನ್ನು ಪೋಲೀಸರು ಇಲ್ಲಿಗೆ ತಂದು ತಮ್ಮ ಕೈಚಳಕ ಆರಂಭಿಸಿದರು.

ಪ್ರತಿಯೊಬ್ಬನ ಕೈಗಳಿಗೂ ಬೇಡಿ ತೊಡಿಸಲಾಗಿತ್ತು. ಆ ಬೇಡಿಗೆ ಹೊಂದಿಕೊಂಡ ಸರಪಳಿ, ಅದರ ಮತ್ತೊಂದು ತುದಿಯನ್ನು ಹಿಡಿದ ಕಾನ್ಸ್ ಟೇಬಲ್ ಬಳಿಯಲ್ಲೇ ಇದ್ದ. ಇನ್ನೊಂದು ಜೊತೆ ಬೇಡಿ. ಅದು ಕಾಲುಗಳನ್ನು ಬಂಧಿಸಿತ್ತು. ಕೈಗಳಿಗಷ್ಟೇ ಅಲ್ಲ, ಕಾಲುಗಳಿಗೂ ಸ್ವಾತಂತ್ರ್ಯವಿಲ್ಲ. ಇಷ್ಟು ಸಾಲದೆಂಬಂತೆ ಕಾಲುಬೇಡಿಯ ಸರಪಣಿಯನ್ನು ಮಂಚದ ಕಾಲಿಗೆ ಬಿಗಿಯಲಾಗಿತ್ತು.

ಅಪರಾಧಿ ತನ್ನ ಕೈಕಾಲುಗಳನ್ನು ಬಂಧಿಸಿದ ಭಾರವಾದ ಬೇಡಿಗಳನ್ನು ಹೊತ್ತು, ಕೈಕಾಲುಗಳನ್ನು ಅಲುಗಾಡಿಸಬಹುದಾಗಿತ್ತು. ಬಳಲಿದರೆ, ಅಲ್ಲೇ ಮುದುಡಿ ನೆಲದ ಮೇಲೆ ಒರಗಬಹುದಾಗಿತ್ತು.

ಹೀಗೆ ಒಬ್ಬೊಬ್ಬರನ್ನಾಗಿ ಹಿಡಿದು ತಂದು ಕೂಡಿ ಹಾಕಿದ ಅಪರಾಧಿಗಳ ಬಗೆಗೆ ಪೋಲೀಸರು ಯಾವ ಯೋಚನೆಯನ್ನೂ ಮಾಡಲಿಲ್ಲ. ಒಬ್ಬೊಬ್ಬರು ಒಂದೊಂದು ಮೂಲೆಯಲ್ಲಿ ; ಕೋಣೆಯಲ್ಲಿ ಪರಸ್ಪರ ನೋಡುವ ಅವಕಾಶವೇ ಇಲ್ಲ. ಅದಿದ್ದರೂ ಮಾತನಾಡುವ ಸ್ವಾತಂತ್ರ್ಯ ಇಲ್ಲ.

ಎರಡು ದಿನಗಳು ಕಳೆದವು.

ಯಾವ ಪೋಲೀಸ್ ಅಧಿಕಾರಿಯೂ ಅವರೆಡೆ ಸುಳಿಯಲಿಲ್ಲ.

ಶುಕದೇವ್, ಹಾಗೂ ಜೈಗೋಪಾಲ್......ಮೂಲೆಯಲ್ಲಿ, ಪೋಲೀಸರ ಕಾವಲಿನಲ್ಲಿ, ಮುದುಡಿ ಮೂಕರಾಗಿ ಕುಳಿತಿದ್ದಾರೆ.

ಈ ಭೀಕರ ಮೌನ, ಏಕಾಂತ, ವಿಶ್ರಾಂತಿಗಳು ಅವರ ತಾಳ್ಮೆ ಕೆಡಿಸಲಿ ಎಂಬುದೇ ಅಧಿಕಾರಿಗಳ ಸಂಚು. ಮುಂದಿನ ಅಗ್ನಿ ಪರೀಕ್ಷೆಗಳಿಗೆ ಅದು ನಾಂದಿ. ಒಂದೊಂದು ನಿಮಿಷವೂ ಅವರಿಗೆ ಯುಗವಾಗಿ ತೋರುತ್ತಿತ್ತು. ಮುಂದೇನು ಎಂಬ ಚಿಂತೆ ಬೆಳೆಯುತ್ತಿತ್ತು. ಯಾವ ದುರಂತ ಕಾದಿದೆಯೋ ಎಂಬ ಭೀತಿ ಮೂಡುತ್ತಿತ್ತು.

ಬೇಡಿ ತೊಟ್ಟುಕೊಂಡೇ ಊಟ ಮಾಡುವ, ನೀರು ಕುಡಿಯುವ ನಿತ್ಯ ಕ್ರಿಯೆ ಸಾಂಗಗೊಳಿಸುವ ಅಭ್ಯಾಸವೂ ಆಯಿತು.

ಮೂರನೆಯ ದಿನ ಒಂದಿಬ್ಬರು ಪೋಲೀಸ್ ಅಧಿಕಾರಿಗಳು ಅತ್ತ ಸುಳಿದರು. ಅದುವರೆಗೂ ಅವರು ಇತರ ಕಳ್ಳತನ, ದರೋಡೆ, ಕೊಲೆ ಮುಂತಾದವುಗಳನ್ನು ನಡೆಸಿದ ಅಪರಾಧಗಳ ವಿಚಾರಣೆಗಳಲ್ಲೇ ಮಗ್ನರಾಗಿದ್ದರು.

"ಅದೆಷ್ಟು ಬಾಂಬ್ ತಯಾರಿಸಿದ್ದೀಯಾ ?"

"ಸರ್ಕಾರ ಓಡಿ ಹೋಯಿತೇನು ?"

"ನೀವು ಎಂಟು ಜನರೂ ಸೇರಿ ಕೆಲಸ ಮಾಡಿದಿರಾ ?"

ಇಂಥ ಪ್ರಶ್ನೆಗಳನ್ನು ಕೇಳಿ ಕೆಣಕಿ ಹಿಂತೆರಳುತ್ತಿದ್ದರು. ಅವರಿಗೆ ಉತ್ತರ ಬೇಕಾಗಿರಲಿಲ್ಲ. ಆಪಾದಿತರು ಉತ್ತರಿಸುತ್ತಲೂ ಇರಲಿಲ್ಲ. ಆದರೆ, ಅವರ ಪ್ರಶ್ನೆಗಳು ಮಾತ್ರ ಇವರಲ್ಲಿ ಮತ್ತಷ್ಟು ಸಂದೇಹ ಬೆಳೆಸುತ್ತಿದ್ದುವು.

ಎಂಟು ಜನ ! ಅದೆಲ್ಲ ಹೇಗೆ ತಿಳಿಯಿತು ? ಎಂಟು ಮಂದಿಯ ದಸ್ತಗಿರಿ ನಡೆದಿದೆಯೇ ? ಪೋಲೀಸರು ಯಾರು ಯಾರನ್ನು ಹಿಡಿದಿರಬಹುದು ? ಅವರೆಲ್ಲ ಎಲ್ಲಿದ್ದಾರೆ ? ಎಂದು ನಾನಾ ರೀತಿಯಾಗಿ ವಿಚಿತ್ರವಾಗಿ ಯೋಚಿಸಿ ತಲೆ ಕೆಡಿಸಿಕೊಳ್ಳಲು ಅವಕಾಶವಾಗಿತ್ತು.

ಕ್ರಿಮಿನಲ್ ಖೈದಿಗಳ ವಿಚಾರಣೆಯೂ ರಾಜಕೀಯ ಖೈದಿಗಳಿಗೆ ಕಾಣಿಸುವಂತೆಯೇ ನಡೆಯಿತು. ರಾಜಕೀಯ ಖೈದಿಗಳಲ್ಲಿ ಭೀತಿ ಮೂಡಿಸುವ ಯತ್ನ ಇದಾಗಿತ್ತು.

ನಾಲ್ಕನೆಯ ದಿನ. ಒಬ್ಬ ತರುಣ ಹಾಗೂ ಇನ್ನೊಬ್ಬ ಮಧ್ಯ ವಯಸ್ಸಿನವನು. ಪೋಲೀಸರು ಅವರ ವಿಚಾರಣೆ ನಡೆಸಿದರು. ಅವರ

ಉತ್ತರ ಅನುಕೂಲವಾಗಿರಲಿಲ್ಲ. ಕಾನ್ಸ್‌ಟೇಬಲ್‌ಗಳು ಅವರನ್ನು ಒದ್ದರು. ಮನ ಬಂದಂತೆ ಬೈದರು. ಆದರೂ ಅಪರಾಧಿಗಳು ತಪ್ಪೊಪ್ಪಿಕೊಳ್ಳಲಿಲ್ಲ. ಪೋಲೀಸರು ಅವರ ಕೈಗಳನ್ನು ಮಂಚದ ಕಾಲುಗಳ ಅಡಿಯಲ್ಲಿರಿಸಿ ಒತ್ತಿದರು. ಆರೋಪಿಗಳ ಕಿರಿಚಾಟ ಮುಗಿಲು ಮುಟ್ಟಿತು. ನೋವಿನಿಂದ ಅವರು ನರಳಿ ಕೂಗಿದರು. ಆದರೂ ಮಂಚದ ಮೇಲೆ ಕುಳಿತ ಪೋಲೀಸ್ ಯಾವುದೇ ಕರುಣೆಯನ್ನು ವ್ಯಕ್ತಪಡಿಸಲಿಲ್ಲ, ಅಲುಗಾಡಲಿಲ್ಲ.

ಈ ಭೀಕರ ಕೃತ್ಯ ನಡೆಸಲು ಪೋಲೀಸರಿಗೆ ಏನು ಅಧಿಕಾರ ? ಈ ರಾಕ್ಷಸೀ ನೀತಿಗೆ ಅನುಮತಿ ನೀಡಿದವರು ಯಾರು ? ಆದರೆ ಈ ಪ್ರಶ್ನೆಯನ್ನು ಯಾರು ಕೇಳಬೇಕು ? ಆಪಾದಿತರ ಕೂಗು ಸ್ಟೇಷನ್ನಿನ ನಾಲ್ಕೂ ಗೋಡೆಗಳನ್ನು ಹಾದು ಹೊರಗಡೆಗೂ ಹಾರಿತು. ತಪ್ಪು ಮಾಡಿದ್ದರೆ ತಾನೇ ಒಪ್ಪಿಕೊಳ್ಳುವ ಮಾತು ? ನಿರಪರಾಧಿ ಹೇಗೆ ತಾನೇ ಅಪರಾಧ ಒಪ್ಪಿಕೊಂಡು ಸುಳ್ಳಿನ ಮಾಲೆ ನೇಯಬಲ್ಲ ?

ಎರಡು ದಿನಗಳ ಕಾಲ ಹಿಂಸಿಸಿದರೂ ಅಪರಾಧಿಗಳು ಅಪರಾಧ ಒಪ್ಪಿ ಕೊಳ್ಳಲಿಲ್ಲ. ಪೋಲೀಸರು ಅವರನ್ನು ಬಿಡುಗಡೆ ಮಾಡಿದರು.

ಮೂಲೆಯಲ್ಲಿ ಮುದುರಿ ಕುಳಿತ ರಾಜಕೀಯ ಖೈದಿಗಳ ವಿಚಾರಣೆ ಎಂದಿಗೆ ? ಅವರಿಗೆ ಯಾವ ಶಿಕ್ಷೆ ಕಾದಿದೆ ?

ಒಂದು ವಾರವೂ ಕಳೆಯಿತು. ಪೋಲೀಸ್ ಇನ್ಸ್‌ಪೆಕ್ಟರ್ ಒಬ್ಬ ಈಗ ಅವರ ವಿಚಾರಣೆಗೆ ಬಂದ.

" ಸತ್ಯ ಹೇಳಿ. ನನಗೆ ಮತ್ತಾವ ಕತೆಯೂ ಬೇಕಾಗಿಲ್ಲ," ಎಂದು ಪೋಲೀಸ್ ಅಧಿಕಾರಿಯ ದರ್ಪದಿಂದಲೇ ಆತ ಹೇಳಿದ. ಆದರೆ ಜೈಗೋಪಾಲ್ ಉತ್ತರ ಕೊಡಲಿಲ್ಲ.

" ನೀವು ಯಾವಾಗ ಪಾರ್ಟಿ ಸೇರಿದಿರಿ ?"

" ನನಗೆ ಯಾವ ಪಾರ್ಟಿಯ ವಿಚಾರವೂ ತಿಳಿಯದು."

" ನಿಜ. ಆದರೆ, ಬಾಂಬ್ ತಯಾರಿಕೆ ಗೊತ್ತಿದೆ. ಬಾಂಬ್ ಆಸ್ಫೋಟಿಸಿ ಜನರನ್ನು ಕೊಲ್ಲಲೂ ತಿಳಿದಿದೆ. ಎಂಥ ಕ್ರೂರ ಕೆಲಸ !"

ಇನ್ಸ್‌ಪೆಕ್ಟರ್ ಮುಗುಳುನಗುತ್ತಲೇ ಪ್ರಶ್ನಿಸಿದ. ಸ್ನೇಹ ಪ್ರಕಟಿಸಿ ಸಾಧ್ಯವಾದಷ್ಟು ವಿಷಯ ಸಂಗ್ರಹ ಆತನ ಬಯಕೆ. ಆದರೆ, ಕ್ರಾಂತಿಕಾರರು ಅಂಥ ಪ್ರಶ್ನೆಗಳಿಗೆಲ್ಲ ಗಲಿಬಿಲಿಗೊಳ್ಳುವವರಲ್ಲ.

" ಪಾರ್ಟಿಗೆ ಸೇರಿದ್ದು ಯಾವಾಗ ?"

ಮತ್ತೊಮ್ಮೆ ಅದೇ ಪ್ರಶ್ನೆ. ಜೈಗೋಪಾಲ್ ಉತ್ತರ ಕೊಡಲಿಲ್ಲ. ಆದರೆ, ಪ್ರಶ್ನೆಗಳನ್ನು ಕೇಳುವುದನ್ನು ಇನ್ಸ್‌ಪೆಕ್ಟರ್ ನಿಲ್ಲಿಸಲಿಲ್ಲ. ಜೈಗೋಪಾಲ್ ಮೌನವಾಗಿಯೇ ಇದ್ದ.

"ನಮ್ಮ ಸ್ನೇಹವನ್ನು ನೀವು ತಪ್ಪು ತಿಳಿದುಕೊಳ್ಳುತ್ತಿದ್ದೀರಿ."

" ನಿಮ್ಮ ವೈರದ ಕಥೆ ನನಗೆ ಗೊತ್ತು. ಆಗಲೇ ಆ ಹಳ್ಳಿಯವರನ್ನು ಹಿಂಸಿಸಿದುದನ್ನು ನಾನು ನೋಡಿದ್ದೇನೆ," ಎಂದು ಅದುವರೆಗೂ ಮೌನವಾಗಿದ್ದ ಜೈಗೋಪಾಲ್ ತಾಳ್ಮೆಗೆಟ್ಟು ಗಡಬಡಿಸಿದ.

" ಸಿಟ್ಟಾದರೆ ಏನು ಲಾಭ ? ಹಳ್ಳಿಯವರು ಅವಿದ್ಯಾವಂತರು. ನೀವು ವಿದ್ಯಾವಂತರು. ನಿಮ್ಮ ವಿಚಾರದಲ್ಲಿ ಯಾರೂ ಅಂಥ ಹಿಂಸೆ ನಡೆಸುವುದಿಲ್ಲ."

ಇನ್ಸ್‌ಪೆಕ್ಟರ್ ಮತ್ತಷ್ಟು ಪ್ರಶ್ನೆಗಳನ್ನು ಕೇಳಿದ. ಆದರೆ ಉತ್ತರ ಸಿಗಲಿಲ್ಲ. ಅವನು ಮುಗುಳು ನಗೆ ನಗುತ್ತ ಹೊರಟುಹೋದ.

ಅದೇ ತಂತ್ರ ಮರುದಿನವೂ ನಡೆಯಿತು. ಅವನೂ ತಾಳ್ಮೆಗೆಟ್ಟು ಕೊಂಚ ಬೈದು, ಬೆದರಿಕೆ ಹಾಕಿ ಹೊರಟ.

ಜೈಗೋಪಾಲನ ಕಾವಲಿಗಾಗಿ ಅಲ್ಲೇ ಕುಳಿತಿದ್ದ ಹವಾಲ್ದಾರ್, ಇನ್ಸ್‌ಪೆಕ್ಟರ್ ಹೊರಟುಹೋದ ಮೇಲೆ ತನ್ನ ವಾದ ಆರಂಭಿಸಿದ.

"ನಮ್ಮಲ್ಲಿರುವವರಲ್ಲಿ ಈ ಸಬ್‌ಇನ್ಸ್‌ಪೆಕ್ಟರ್ ಎಷ್ಟೋ ವಾಸಿ. ಅವರು ಯಾರನ್ನೂ ಇದುವರೆಗೂ ಹೊಡೆದವರಲ್ಲ. ದಿನಕ್ಕೆ ಐದು ಬಾರಿ ನಮಾಜು ಮಾಡುತ್ತಾರೆ. ಸುಳ್ಳು ಹೇಳುವುದಿಲ್ಲ. ಲಂಚ ಪಡೆಯುವುದಿಲ್ಲ. ಆತ ವಿಶ್ವಾಸದಿಂದಲೇ ನಿಮ್ಮೊಡನೆ ಮಾತನಾಡಿದನಲ್ಲ! ಇತರ ಇನ್ಸ್‌ಪೆಕ್ಟರ್‌ಗಳು ರಾಕ್ಷಸರಂತೆ ವರ್ತಿಸುತ್ತಾರೆ."

ಹವಾಲ್ದಾರ್ ತಾನು ಹೇಳುವುದನ್ನು ಹೇಳುತ್ತಲೇ ಇದ್ದ. ಆದರೆ, ಜೈಗೋಪಾಲನಿಗೆ ಅದಾವುದರ ಪರವೆಯೂ ಇಲ್ಲ. ಆತ ಉತ್ತರ ಕೊಡಲೂ ಇಲ್ಲ. ಅವನಿಗೇ ಬೇಸರವಾಯಿತೋ ಏನೋ ? ಅಂತೂ ಅವನ ಬಾಲ್ಯ ವಿದ್ಯಾಭ್ಯಾಸ, ಕುಟುಂಬದ ಬಗೆಗೆ ಆತ ವಿಚಾರಿಸುತ್ತ ಮಾತು ಬದಲಾಯಿಸಿದ.

ರಾತ್ರಿಯೂ ಆಯಿತು. ಆದರೂ, ಆತ ಮಾತು ಮುಂದುವರಿಸುತ್ತಲೇ ಇದ್ದ. ನಿದ್ದೆಗೂ ಅವಕಾಶ ನೀಡದಂತೆ ಪ್ರಶ್ನಿಸುತ್ತಿದ್ದ. ಮಧ್ಯ ರಾತ್ರಿಯೂ ಕಳೆದಾಗ ಜೈಗೋಪಾಲನಿಗೆ ಹವಾಲ್ದಾರ್ ಅದೇನೋ ತಂತ್ರ ನಡೆಸುತ್ತಿದ್ದಾನೆ ಅನ್ನಿಸಿತು. ಅಂತೂ ಅರ್ಧ ಘಂಟೆ ನಿದ್ರೆ ಬಂದಿತ್ತೋ ಇಲ್ಲವೋ, ಬೆಳಗಾಯಿತು.

ಅಷ್ಟರಲ್ಲಿ ಯಾರೋ ಕಾನ್ಸ್‌ಟೇಬಲ್ ಅತ್ತ ಬಂದ. ಇನ್ಸ್‌ಪೆಕ್ಟರ್ ಬರುತ್ತಿದ್ದಾರೆ, ಎಚ್ಚರಿಕೆ, ಎಂದು ಎಚ್ಚರ ನೀಡಿದ.

ಇನ್ಸ್‌ಪೆಕ್ಟರ್ ಹಲವಾರು ಪ್ರಶ್ನೆಗಳನ್ನು ಕೇಳಿದ. ಅವಾಚ್ಯ ಶಬ್ದ ಗಳನ್ನೂ ಪ್ರಯೋಗಿಸಿದ. ಆದರೆ ಜೈಗೋಪಾಲ್ ಯಾವ ಉತ್ತರವನ್ನೂ ಕೊಡ ಲಿಲ್ಲ. ರೋಷಗೊಂಡ ಇನ್ಸ್‌ಪೆಕ್ಟರ್ ಅವನ ಕೆನ್ನೆಗಳಿಗೆ ಬಾರಿಸಿದ.

ಅವನ ಯಾವ ಯತ್ನವೂ ಫಲಿಸಲಿಲ್ಲ. ಆತ ಹೊರಟುಹೋದ.

ಮತ್ತೆ ಅದೇ ರೀತಿ ಅವನ ಭೇಟಿ ನಡೆಯಿತು. ಈಗ ಬೇರೆ ಉಪಾಯ ಹೂಡಿದ. ವಿಶ್ವಾಸ ತೋರಿಸಿದ. ಒಮ್ಮೆ ವಿಶ್ವಾಸ, ಒಮ್ಮೆ ನಗು, ಒಮ್ಮೆ ರೋಷ, ಹೀಗೆ ಇನ್ಸ್‌ಪೆಕ್ಟರ್ ನವರಸಗಳನ್ನು ಪ್ರದರ್ಶಿಸಿದರೂ ಪ್ರಯೋಜನ ವಾಗಲಿಲ್ಲ.

ಹದಿನೈದು ದಿನಗಳು ಕಳೆದುವು.

ಜೈಗೋಪಾಲನ ಇತರ ಸ್ನೇಹಿತರ ಕತೆಯೂ ಹೀಗೆ ನಡೆದಿತ್ತು. ಅವರೂ ಪ್ರಶ್ನೆಗಳ ಕಾಟ ತಡೆಯಲಾರದೆ ತತ್ತರಿಸಿದರು. ಆದರೂ ಜಗ್ಗಲಿಲ್ಲ.

ಅಲ್ಲಿಂದ ಜೈಗೋಪಾಲನನ್ನು ಕೋಟೆ ಪೋಲೀಸ್ ಸ್ಟೇಷನ್ನಿಗೆ ವರ್ಗಾ ಯಿಸಲಾಯಿತು. ಹದಿನೈದು ದಿನಗಳ ಕಾಲ ನಿದ್ರೆ ಇಲ್ಲದೆ, ಬೇಡಿಯ ಭಾರ ಹೊತ್ತು, ನೆಲದ ಮೇಲೆ, ಮುರಿ ಹಗ್ಗದ ಮಂಚದ ಮೇಲೆ ಮಲಗಿ ಜೈಗೋಪಾಲ ತೀರಾ ಬಳಲಿದ್ದ.

ಕೋಟೆಯಲ್ಲಿ ಕತ್ತಲು ತುಂಬಿದ ಮೂಲೆಯೊಂದರಲ್ಲಿ ಜೈಗೋಪಾಲ ನನ್ನು ಇರಿಸಲಾಯಿತು. ಅಟ್ಟದ ಮೇಲೆ ಬಾವಲಿಗಳು ತೂಗಾಡುತ್ತಿವೆ. ದುರ್ವಾಸನೆ ಹರಡಿದೆ. ಸೊಳ್ಳೆಗಳ ಹಾವಳಿ ಮಿಡಿತೆಗಳ ಧಾಳಿಯನ್ನೂ ಮೀರಿಸಿದೆ.

ಜಿಲ್ಲಾಧಿಕಾರಿಯೇ ಈಗ ಪ್ರಶ್ನೆ ಕೇಳಲು ಮೊದಲು ಬಂದ. ಕ್ರಾಂತಿಕಾರಿ ಗಳು ನಡೆಸಿದ ಎಲ್ಲ ಕಾರ್ಯಗಳನ್ನು ವಿವರವಾಗಿ ತಿಳಿಯ ಹೇಳಿದ. ಸಾಂಡರ್ಸ್

ಕೊಲೆಯಿಂದ ಮೊದಲ್ಗೊಂಡು, ಅಸೆಂಬ್ಲಿಯಲ್ಲಿ ನಡೆದ ಬಾಂಬ್ ಪ್ರಕರಣ ವನ್ನು ಸೇರಿಸಿ, ಲಾಹೋರಿನ ಬಾಂಬ್ ಕಾರ್ಖಾನೆ ನಡೆಸಿದ ಸಾಹಸದವರೆಗೆ ಎಲ್ಲವನ್ನೂ ವಿವರಿಸಿದ.

ಇಷ್ಟೆಲ್ಲವೂ ಪೋಲೀಸರಿಗೆ ತಿಳಿದಿದೆಯೇ ಎಂಬ ಅಚ್ಚರಿ ಅಪರಾಧಿ ಯಲ್ಲಿ ಮೂಡಿತು.

"ನೀವೇನೂ ಹೆದರಬೇಕಾಗಿಲ್ಲ. ನಮಗೆ ಎಲ್ಲವನ್ನೂ ಇತರ ಅಪರಾಧಿ ಗಳು ಹೇಳಿದ್ದಾರೆ. ನನ್ನ ಪ್ರಶ್ನೆಗೆ ಉತ್ತರ ನೀಡಿ ನಿಮ್ಮ ನಿರಪರಾಧಿತ್ವ ಸಾಧಿಸಿ ಕೊಳ್ಳಿ. ನಿಮ್ಮ ಬಿಡುಗಡೆ ಖಂಡಿತ."

ಜೈಗೋಪಾಲ್ ಹೃದಯದಲ್ಲಿ ಸಂದೇಹದ ವಿಷ ಬೀಜವನ್ನು ಆತ ಬಿತ್ತಿದ. ಆದರೆ, ಉತ್ತರ ಪಡೆಯಲಾಗಲಿಲ್ಲ.

ಇನ್ನೂ ಎರಡು ಮೂರು ದಿನಗಳ ಕಾಲ ಪ್ರಶ್ನೆಗಳ ನಾಟಕ ನಡೆಯಿತು. ಈಗ ಜೈಗೋಪಾಲ್ ಒದೆ ತಿನ್ನಬೇಕಾಯಿತು. ಅವನ ಕೆನ್ನೆಗಳು ಊದಿ ಕೊಂಡವು. ಅವನ ಎರಡೂ ಕೈಗಳನ್ನು ಮೇಲೆತ್ತಿ ಕಟ್ಟಿ ಅಟ್ಟಕ್ಕೆ ತೂಗ ಹಾಕ ಲಾಯಿತು. ನಿಂತುಕೊಂಡೇ ಆತ ಈಗ ಇರಬೇಕಾಯಿತು.

ಇಡೀ ದಿನ ಅವನೆಡೆಗೆ ಯಾರೂ ಸುಳಿಯಲಿಲ್ಲ.

ನಿಂತು ನಿಂತು ಅವನ ಕಾಲುಗಳು ನೋಯಲಾರಂಭಿಸಿದವು. ಬಳಲಿ ಬೆಂಡಾದ. ಬೆನ್ನುನೋವು, ಭೀಕರವಾದ ಹಿಂಸೆಯಿಂದ ನೋವಿನಿಂದ ಅವನು ಚಡಪಡಿಸಿದ, ಅತ್ತು ನರಳಿದ, ಕೂಗಾಡಿದ, ಬೈದ. ಆದರೆ, ಯಾರೂ ಕೇಳಲೊಲ್ಲರು.

ಎರಡನೆಯ ದಿನ ಇನ್ಸ್‌ಪೆಕ್ಟರ್ ಅತ್ತ ಬಂದ. ಸಾವು ಖಚಿತವೆಂದು ಅರಿತ ಜೈಗೋಪಾಲ್ ಅವನನ್ನು ಬೈದ. ಉಗುಳಲೆಂದು ಯತ್ನಿಸಿದನಾದರೂ ಅಷ್ಟು ಶಕ್ತಿಯೂ ಅವನಲ್ಲಿರಲಿಲ್ಲ. ಈಗ ಎರಡು ಕಾಲುಗಳೂ ಊದಿಕೊಂಡಿ ದ್ದುವು.

ಪ್ರಶ್ನೆಗಳು ನಾನಾ ರೀತಿಯಾಗಿ ಅವನೆಡೆ ಹಾರಿದುವು.

ಅದೇನು ಉತ್ತರಿಸಿದನೋ ಅವನಿಗೆ ತಿಳಿಯಲಿಲ್ಲ.

ಸಂಜೆಯ ವೇಳೆಗೆ ಅವನು ನೆಲದ ಮೇಲೆ ಒರಗಿದ್ದ.

"ಇಂಥ ಕೆಲಸ ನಾವು ಮಾಡಬೇಕೆಂಬ ಬಯಕೆ ಎಂದೂ ಇಲ್ಲ. ಮೊದಲೇ ಹೇಳಬಾರದಿತ್ತೇ ? ನಿಮ್ಮ ಬಿಡುಗಡೆ ಖಂಡಿತವಾಗಿ ಮಾಡುತ್ತೇವೆ," ಎಂದು ಇನ್ಸ್‌ಪೆಕ್ಟರ್ ನುಡಿದು, ಅವನ ಶುಶ್ರೂಷೆಗೆ ವ್ಯವಸ್ಥೆ ಮಾಡಿ ತೆರಳಿದ.

ಜೈಗೋಪಾಲ್ ಎಲ್ಲ ತಪ್ಪುಗಳನ್ನೂ ಒಪ್ಪಿಕೊಂಡು, ಅನೇಕ ಗೆಳೆಯರ ಬಂಧನಕ್ಕೆ ಕಾರಣವಾಗಿದ್ದ.

ಅಷ್ಟರಲ್ಲಿ ಹನ್ಸ್‌ರಾಜ್ ವೊಹ್ರಾ ಸೆರೆ ಸಿಕ್ಕಿದ. ಅವನು ಪೋಲೀಸರ ಪ್ರಶ್ನೆಗಳು, ಹಿಂಸೆಗಳನ್ನು ಸಹಿಸಲಾಗದೆ, ನಡೆದುದೆಲ್ಲವನ್ನು ಹೇಳಬೇಕಾಯಿತು.

ಸೆರೆಯಾದ ಪ್ರತಿಯೊಬ್ಬ ಕ್ರಾಂತಿಕಾರನೂ ಅತ್ಯಂತ ಕ್ರೂರವಾದ, ಅಮಾನುಷವಾದ ಹಿಂಸೆಗಳಿಗೆ ಒಳಗಾದರು. ಕೆಲವರು ಚಾಟಿ ಏಟು ತಿಂದರು. ಕ್ರಾಂತಿಕಾರರ ಚಟುವಟಿಕೆಗಳ ಬಗೆಗೆ ತಿಳಿಯಲೆಂದು ಪೋಲೀಸರು ಖೈದಿಗಳ ಕಾಲಿನ ಹೆಬ್ಬೆರಳನ್ನು ದಾರದಲ್ಲಿ ಸುತ್ತಿ ತಿರುವಿದರು. ಕೈಬೆರಳಿನ ಉಗುರುಗಳೆಡೆಗೆ ಸೂಜಿಯಿಂದ ಚುಚ್ಚಿದರು.

ಅಲ್ಲಿಗೂ ಅವರಿಗೆ ಸಿಕ್ಕಿದ ಆಧಾರಗಳು ಸಾಕೆನಿಸಲಿಲ್ಲ.

ದಸ್ತಗಿರಿಯಾದ ಸುಮಾರು ಮೂವತ್ತು ಮಂದಿಯಲ್ಲಿ ಏಳು ಮಂದಿ ಪೋಲೀಸರ ಹಿಂಸೆಗೆ ತಲೆ ಬಾಗಿ ಸರ್ಕಾರದ ಕಡೆಯ ಸಾಕ್ಷಿಗಳಾದರು.

ದೇಶ ಈಗ ಅಂತಿಮ ಹೋರಾಟಕ್ಕೆ ಸಿದ್ಧತೆ ನಡೆಸುತ್ತಿತ್ತು.

ಮತ್ತೊಮ್ಮೆ ದೇಶದಾದ್ಯಂತ ಅಸಹಕಾರ ಚಳುವಳಿ ನಡೆಯದೆ ಗತ್ಯಂತರ ವಿಲ್ಲ ಎಂದು ಕಾಂಗ್ರೆಸ್ ನಾಯಕರಿಗೆ ಮನವರಿಕೆಯಾಗಿತ್ತು. ಬ್ರಿಟಿಷ್ ಸಾಮ್ರಾಜ್ಯಶಾಹಿಯು ಯಾವುದೇ ರೀತಿಯಿಂದಲೂ ಭಾರತೀಯರಿಗೆ ಸ್ವಾಡಳಿತೆ ನೀಡಲು ಸಿದ್ಧವೆಲ್ಲವೆಂಬುದು ಖಚಿತವಾಗಿತ್ತು.

ದೇಶ ಯಾವ ಹಾದಿ ತುಳಿಯುವುದು ?

ಭಗತ್‌ಸಿಂಗ್ ಇಡೀ ಭಾರತದ ಯುವಜನತೆಯ ಆರಾಧ್ಯ ದೇವತೆ, ಯುವಜನಾಂಗದ ಪ್ರತಿಬಿಂಬವಾಗಿದ್ದ. ಪ್ರತಿಯೊಂದು ಶಾಲೆ, ಮನೆ, ಸಂಘ, ಸಂಸ್ಥೆಗಳಲ್ಲೂ ಭಗತ್‌ಸಿಂಗ್ ಮತ್ತು ರಾಜಗುರುವಿನ ಚಿತ್ರಗಳು ಶೋಭಿಸುತ್ತಿದ್ದುವು. ದೇಶಕ್ಕೆ ಬಿಡುಗಡೆ ದೊರೆಯಬೇಕಾದರೆ, ಇದೇ ಹಾದಿ ಎಂಬ ಭಾವನೆ ಯುವ ಜನಾಂಗದಲ್ಲಿ ಮೂಡಿ ನಿಂತಿತ್ತು.

ಅದಕ್ಕಿಂತ ಬೇರೊಂದು ಉತ್ತಮ ಹಾದಿ ಇದೆ ಎಂದು ತೋರಿಸಿ ಕೊಡುವ ಹೊಣೆಗಾರಿಕೆ ಕಾಂಗ್ರೆಸ್ಸಿನ ನಾಯಕರ ಮೇಲಿತ್ತು.

ಕ್ರಾಂತಿ, ಹಿಂಸೆಗಳಿಗಾಗಿ ಹಾತೊರೆಯುತ್ತಿದ್ದ ಯುವ ಜನತೆಯನ್ನು ಶಾಂತಿ ಸತ್ಯಾಗ್ರಹಗಳ ಕಡೆಗೆ, ರಚನಾತ್ಮಕ ಹಾದಿಯಲ್ಲಿ ನಡೆಸುವುದು ತೀವ್ರ ಅಗತ್ಯ ವೆನಿಸಿತ್ತು.

ಅಷ್ಟರಲ್ಲಿ ಮತ್ತೊಂದು ವಾರ್ತೆ ದೇಶದಾದ್ಯಂತ ಬಿರುಗಾಳಿಯಂತೆ ಹರಡಿತು. ಯುವ ಜನರ ಕ್ರಾಂತಿಕಾರೀ ಬೆಂಕಿಗೆ ಎಣ್ಣೆ ಸುರಿದಂತಾಯಿತು.

" ಲಾಹೋರ್ ಸೆರೆಮನೆಯಲ್ಲಿ ರಾಜಕೀಯ ಬಂದಿಗಳ ಉಪವಾಸ..."





## ೧೬

### " ಮೊದಲ ಏಟು ನೆತ್ತಿಯ ಮೇಲೆ..."

ಗಾದೆಯ ಮಾತು ಸುಳ್ಳಾಗಲಿಲ್ಲ. ಪೋಲೀಸರ ದೃಷ್ಟಿಯೆಲ್ಲ ಭಗತ್ ಸಿಂಗ್ ಕಡೆಗೇ ತಿರುಗಿತ್ತು. ಆಗಲೇ ಅವನ ವಿಚಾರಣೆಯಾಗಿ, ಆಜೀವ ಶಿಕ್ಷೆ ನೀಡಲಾಗಿದ್ದರೂ, ಈಗ ಅವನನ್ನು ಅಧಿಕಾರಿಗಳು ಮೊದಲು ಹಿಂಸಿಸ ತೊಡಗಿದರು.

ಶಿಕ್ಷೆ ಅನುಭವಿಸುವ ಭಗತ್‌ಸಿಂಗ್ ಮತ್ತು ಬಟುಕೇಶ್ವರ ದತ್ ಈಗ ಹೆಜ್ಜೆ ಹೆಜ್ಜೆಗೂ ಅಧಿಕಾರಿಗಳನ್ನು ಇದಿರಿಸಿ, ಹೋರಾಡಿ ಸೆರೆಮನೆಯಲ್ಲಿ ಬಾಳಬೇಕಾಯಿತು. ರಾಜಕೀಯ ಖೈದಿಗಳಿಗೆ ದೊರೆಯುವ ಅಲ್ಪ ಸ್ವಾತಂತ್ರ್ಯ, ಶುಚಿಯಾದ ಆಹಾರ, ಓದುವ ಅವಕಾಶಗಳಿಗಾಗಿ ಅವರು ಕೊನೆಯ ಅಸ್ತ್ರ ಬಳಸಿದರು.



ಅನ್ನ ಸತ್ಯಾಗ್ರಹ ಆರಂಭವಾಯಿತು.

ರಾಜಕೀಯ ಖೈದಿಗಳು ಸತ್ತು ಅವರ ಸಂಖ್ಯೆ ಕಡಮೆಯಾದಷ್ಟೂ ತನ್ನ ಸ್ಥಾನ ಭದ್ರವೆಂದು ಬ್ರಿಟಿಷ್ ಸರ್ಕಾರ ತಿಳಿದಿತ್ತು.

ಖೈದಿಗಳ ಉಪವಾಸದ ಕಡೆಗೆ ಅದು ಕೆಲವಾರು ದಿನ ಗಮನ ಕೊಡಲೇ ಇಲ್ಲ. ಆ ಬಳಿಕ ಬಲಾತ್ಕಾರದಿಂದ ಆಹಾರ ತಿನ್ನಿಸುವ ಕಾರ್ಯ ಆರಂಭವಾಯಿತು. ನಾಲ್ಕಾರು ಜನ ಪೋಲೀಸರೂ ಕಾವಲುಗಾರರೂ ಖೈದಿಯನ್ನು ನೆಲದ ಮೇಲೆ ಒತ್ತಿ ಹಿಡಿದು, ಮೂಗಿನ ಮೂಲಕ ಹೊಟ್ಟೆಯೊಳಗೆ ಕೊಳವೆ ಸೇರಿಸಿ, ಗಂಜಿನೀರು ಇಳಿಬಿಟ್ಟರು. ಈ ಹೋರಾಟದಲ್ಲಿ ಭಗತ್‌ಸಿಂಗ್ ತೀವ್ರ ಗಾಯಗೊಂಡ. ತಿನ್ನಿಸಿದ ಆಹಾರ ಶ್ವಾಸಕೋಶಗಳಿಗೂ ಸೇರಿತು. ಅವನ ಸ್ಥಿತಿ ಚಿಂತಾಜನಕವಾಯಿತು.

ಆದರೂ ಸತ್ಯಾಗ್ರಹದ ಅಚಲ ನಿರ್ಧಾರದಿಂದ ಅವನು ಕದಲಲಿಲ್ಲ.

ಗಾಬರಿಗೊಂಡ ಅಧಿಕಾರಿಗಳು ಮನಬಂದಂತೆ ಚಿಕಿತ್ಸೆ ನಡೆಸಿದರು.

ಇಡೀ ಕ್ರಾಂತಿಕಾರೀ ತಂಡದಲ್ಲೇ ಅದ್ಭುತ ಶಕ್ತಿಶಾಲಿ, ಅಜಾನು ಬಾಹು, ಕೆಚ್ಚಿನ ಬಂಟ ಎಂದು ಹೆಸರು ಗಳಿಸಿದ್ದ ಭಗತ್‌ಸಿಂಗ್ ಎಲುಬುಗೂಡಾದ. ಹಾಸಿಗೆಯಿಂದೇಳಲೂ ಶಕ್ತಿ ಇಲ್ಲದವನಾದ. ಅತ್ತಿತ್ತ ಮಂಚವನ್ನು ಎತ್ತಿ ಅವನನ್ನು ಸಾಗಿಸಬೇಕಾಯಿತು.

ಈಗ ಇತರ ಅಪರಾಧಿಗಳಾಗಿ ಕ್ರಾಂತಿಕಾರೀ ಗೆಳೆಯರು ಜೇಲಿನೊಳಗೆ ಬಂದಿದ್ದರು. ಆಗಲೇ ಅನೇಕರು ವಿವಿಧ ಶಿಕ್ಷೆ ಅನುಭವಿಸುವವರೂ ಅಲ್ಲಿದ್ದರು. ಎಲ್ಲರ ಪರವಾಗಿ ಅನ್ನಸತ್ಯಾಗ್ರಹ ಇನ್ನೂ ತೀವ್ರವಾಗಿ ಮುಂದುವರಿಯಿತು.

ಸಾಕಷ್ಟು ಸಾಕ್ಷಿ, ಆಧಾರ ಸಂಗ್ರಹಿಸಿದ ಪೋಲೀಸರು ಜುಲೈ ತಿಂಗಳಲ್ಲಿ ಹದಿಮೂರು ಮಂದಿಯನ್ನು ಕೋರ್ಟಿನಲ್ಲಿ ನಿಲ್ಲಿಸಿದರು. ವಿಚಾರಣೆ ಆರಂಭವಾಯಿತು.

ಸಹಸ್ರಾರು ಮಂದಿ ಕೋರ್ಟಿನ ಬಳಿ ನೆರೆದಿದ್ದರು. ಪೋಲೀಸ್ ಮತ್ತು ಮಿಲಿಟರಿಯ ಬಲವಾದ ಕಾವಲಿನ ಕೋಟೆ ರಚಿಸಲಾಗಿತ್ತು. ಎಲ್ಲ ಖೈದಿಗಳೂ ವೀರರಂತೆ ತಲೆ ಎತ್ತಿ ಕೋರ್ಟಿಗೆ ಬಂದರು. ಭಗತ್‌ಸಿಂಗ್‌ನನ್ನು ಮಂಚದ ಮೇಲೆ ಮಲಗಿಸಿ ಕೋರ್ಟಿಗೆ ತರಬೇಕಾಯಿತು.

ಜೇಲಿನಿಂದ ಕೋರ್ಟಿನವರೆಗೆ ದಾರಿಯುದ್ದಕ್ಕೂ ಕ್ರಾಂತಿಕಾರರ ಘೋಷಣೆ ಲಕ್ಷಾಂತರ ಜನರನ್ನು ಉದ್ರೇಕಿಸುತ್ತಿತ್ತು.

ಕ್ರಾಂತಿಗೆ ಜಯವಾಗಲಿ !

ಇಂಕ್ವಿಲಾಬ್ ಜಿಂದಾಬಾದ್ !

ವಂದೇ ಮಾತರಂ !

ಕೋರ್ಟಿನಲ್ಲಿ ಹಾಜರಾದೊಡನೆ ಇದೇ ಅವರ ಮೊದಲ ಘೋಷಣೆ.

ಹೀಗೆ ಘೋಷಿಸಬಾರದು ಎಂದು ಪೋಲೀಸರು ಅಡ್ಡಿಪಡಿಸಿದರು. ನ್ಯಾಯಾಧೀಶರೂ ಸ್ಪಷ್ಟಪಡಿಸಿದರು. ಆದರೆ, ಕ್ರಾಂತಿಕಾರಿಗಳು ಜಗ್ಗಲಿಲ್ಲ. ಅಲ್ಲೇ ಚಕಮಕಿಯಾಯಿತು. ಅವರು ಹೆದರಲಿಲ್ಲ.

ಆರೋಪಿಗಳ ಪಟ್ಟಿಯೇನೋ ದೀರ್ಘವಾಗಿಯೇ ಇತ್ತು. ಆದರೆ, ಪೋಲೀಸರ ಕಣ್ಣಿಗೆ ಮಣ್ಣೆರಚುವದರಲ್ಲಿ ನಿಷ್ಣಾತರಾದ ಚಂದ್ರಶೇಖರ ಆಜಾದ್ ಮತ್ತು ಕಾಳೀಚರಣ ಅವರ ಕೈಗೆ ಸಿಕ್ಕಿರಲಿಲ್ಲ.

ಮೂರು ದಿನಗಳವರೆಗೂ ಖೈದಿಗಳಾರೂ ವಿಚಾರಣೆ ಕಡೆಗೆ ಗಮನ ಕೊಡಲೇ ಇಲ್ಲ. ವಿಚಾರಣೆಯ ಹಂತದಲ್ಲಿದ್ದುದರಿಂದ ಅವರೆಲ್ಲರೂ ಜೊತೆಸೇರಿ ವಿಚಾರ ವಿನಿಮಯ ನಡೆಸುವ ಅವಕಾಶ ಜೇಲಿನಲ್ಲಿತ್ತು. ಭಗತ್‌ಸಿಂಗ್ ಆರಾಮು ಕುರ್ಚಿಯಲ್ಲಿ ಒರಗಿಕೊಂಡೇ ಗೆಳೆಯರಿಗೆ ಮಾರ್ಗದರ್ಶನ ಮಾಡಿದ.

"ಆಗಬೇಕಾದುದು ಇನ್ನೂ ಇದೆ. ಎಲ್ಲವೂ ಕೈಮೀರಿತೆಂದು ನಿರಾಶರಾಗ ಬೇಡಿರಿ. ಹೋರಾಟವೇ ಜೀವನ, ವಿರಾಮವೇ ಮರಣ," ಎಂದು ಭಗತ್‌ಸಿಂಗ್ ಗೆಳೆಯರಿಗೆ ಎಚ್ಚರಿಕೆ ನೀಡಿದ.

"ಸಾಮಾನ್ಯನ ದೃಷ್ಟಿಯಲ್ಲಿ ನಮ್ಮದು ಆತ್ಮ ರಕ್ಷಣೆಯ ವಾದವೇ ಅಲ್ಲ," ಎಂದನು ದತ್.

"ನಿಜ. ಸಾಧ್ಯವಾದಷ್ಟು ಮಂದಿಯನ್ನು ಬಿಡುಗಡೆ ಮಾಡಲು, ಬದುಕಿಸಲು ಎಲ್ಲ ಪ್ರಯತ್ನಗಳನ್ನೂ ನಾವು ನಡೆಸಬೇಕು. ಆದರೆ ಇಡೀ ವಿಚಾರಣೆಯನ್ನು ರಾಜಕೀಯ ದೃಷ್ಟಿಯಿಂದಲೇ ನೋಡಬೇಕು. ಇಡೀ ದೇಶದ ಜನತೆ ಸ್ವಾತಂತ್ರ್ಯ ಸಾಧನೆಗಾಗಿ ಸಂಘಟಿತರಾಗಿ ಹೋರಾಡುವಂತೆ ಮಾಡಲು ಈ ವಿಚಾರಣೆ ಪ್ರಚೋದಕವಾಗಬೇಕು," ಎಂದನು ಭಗತ್‌ಸಿಂಗ್.

"ಬ್ರಿಟಿಷ್ ಸರ್ಕಾರದ ಅನೀತಿ, ವಿಚಾರಣೆಗಳ ನಾಟಕವನ್ನು ಬಯಲಿ ಗೆಳೆಯಲು ಎಲ್ಲ ಅವಕಾಶಗಳನ್ನು ಬಳಸಬೇಕು."

"ಸೂಕ್ತ ಕಾಲದಲ್ಲಿ ನಾವು ಕೊಡುವ ಹೇಳಿಕೆಗಳಷ್ಟೇ ಅಲ್ಲ, ಕೋರ್ಟಿ ನಲ್ಲಿ, ಜೇಲಿನಲ್ಲಿ, ಹಾದಿಯಲ್ಲಿ ನಾವು ಸಾಗಿಸುವ ಹೋರಾಟಗಳೂ ಕ್ರಾಂತಿಕಾರರ ಅಜೇಯ ಹೋರಾಟ ಅಮರ ಶೌರ್ಯಗಳನ್ನು ಸಾರುವಂತಾಗಬೇಕು. ನಾವು ದೇಶಕ್ಕಾಗಿ, ಎಲ್ಲ ರಾಜಕೀಯ ಖೈದಿಗಳಿಗಾಗಿ ಹೋರಾಡುತ್ತೇವೆ. ಇದು ಸದಾ ನೆನಪಿರಬೇಕು. ಸರ್ಕಾರ, ಆಡಳಿತೆ, ಜೇಲು, ವಿಚಾರಣೆಗಳನ್ನೆಲ್ಲ ತುಚ್ಛೀಕರಿಸುತ್ತೇವೆ. ನಾವೀಗ ಹೊರಗಡೆ ಆರಂಭಿಸಿದ ಹೋರಾಟವನ್ನು ಇಲ್ಲಿಯೂ ಮುಂದುವರಿಸಬೇಕು. ಹೊರ ಜಗತ್ತಿನ ಜನಕೋಟಿಯನ್ನು ಎಚ್ಚರಗೊಳಿಸಿ ಕರ್ತವ್ಯಮುಖರಾಗುವಂತೆ ಮಾಡಬೇಕು."

ಭಗತ್‌ಸಿಂಗ್ ಮತ್ತು ಬಟುಕೇಶ್ವರ ದತ್ ಅವರ ಈ ಕರೆ ಎಲ್ಲರಲ್ಲೂ ಹೊಸ ಹುರುಪನ್ನೂ ಅಮಿತ ಧೈರ್ಯವನ್ನೂ ಮೂಡಿಸಿದವು.

ಜೇಲಿನ ಜೀವನ ತೀರಾ ಅಸಹನೀಯವಾಗಿತ್ತು.

ಕೊಲೆ, ಸುಲಿಗೆಗಳನ್ನು ನಡೆಸಿದ ಖೈದಿಗಳಿಗೆ ರಾಜಕೀಯ ಖೈದಿಗಳಿಗಿಂತ ಹೆಚ್ಚಿನ ಸೌಲಭ್ಯವಿತ್ತು. ಭಾರತೀಯ ಹಾಗೂ ಐರೋಪ್ಯ ಖೈದಿಗಳ ಸವಲತ್ತುಗಳಲ್ಲಿ ಅಜಗಜಾಂತರ ಇತ್ತು.

ಭಗತ್‌ಸಿಂಗ್ ಮತ್ತು ಬಟುಕೇಶ್ವರ ದತ್ ಈ ಪಕ್ಷಪಾತ, ಅನೀತಿಗಳನ್ನು ಪ್ರತಿಭಟಿಸಿ ಉಪವಾಸ ಸತ್ಯಾಗ್ರಹ ಆರಂಭಿಸಿದರು. ಆದರೆ, ಇದರಿಂದ ಅವರಿಬ್ಬರ ಮೇಲಿನ ಹಿಂಸೆ, ದಬ್ಬಾಳಿಕೆಗಳು ಅಧಿಕವಾಗಿ ಅವರ ದುಃಖ ಹೆಚ್ಚಿತೇ ವಿನಃ ಪರಿಸ್ಥಿತಿ ಸುಧಾರಿಸಲಿಲ್ಲ.

ಈಗ ಕ್ರಾಂತಿಕಾರಿ ಪಕ್ಷದ ಇತರ ಪ್ರಮುಖರು ಜೇಲಿನೊಳಗೆ ಬಂದರು. ಅವರೂ ಜೇಲಿನ ಅಸಹನೀಯ ಪರಿಸ್ಥಿತಿ ಕಂಡು ರೋಸಿದರು.

ಭಗತ್‌ಸಿಂಗ್ ಮತ್ತು ದತ್ ಆರಂಭಿಸಿದ ಅನ್ನ ಸತ್ಯಾಗ್ರಹದಲ್ಲಿ ಸೇರಿಕೊಂಡರು. ಎಲ್ಲ ರಾಜಕೀಯ ಖೈದಿಗಳನ್ನು ಒಂದೇ ದರ್ಜೆಯಲ್ಲಿರಿಸಬೇಕು. ಒಳ್ಳೆಯ ಆಹಾರ, ಓದಲು ಪತ್ರಿಕೆಗಳು, ಪುಸ್ತಕಗಳು ಹಾಗೂ ಬರವಣಿಗೆಯ ಸೌಲಭ್ಯಗಳು ಬೇಕು, ಪರಸ್ಪರ ಕಲೆತು ಮಾತುಕತೆ ನಡೆಸಲು ಸ್ವಾತಂತ್ರ್ಯ ಬೇಕು, ಎಂಬುದೇ ಅವರ ಬೇಡಿಕೆಯಾಗಿತ್ತು.

ಇತಿಹಾಸದಲ್ಲಿ ಅಮರವಾಗಿ ನಿಲ್ಲಬಲ್ಲ ಉಪವಾಸ ಸತ್ಯಾಗ್ರಹ ಈಗ ಆರಂಭವಾಯಿತು.

ಮೊದಲು ಜೇಲು ಅಧಿಕಾರಿಗಳಾಗಲೀ, ಸರ್ಕಾರವಾಗಲೀ ಇದನ್ನು ಅಷ್ಟಾಗಿ ಪರಿಗಣಿಸಲಿಲ್ಲ. ಕೆಲವೇ ದಿನಗಳಲ್ಲಿ ಇದು ನಿಂತುಹೋಗುವುದೆಂದು ಅವರು ನಂಬಿದ್ದರು. ಈ ನಡುವೆ ಇಬ್ಬರು ಉಪವಾಸ ನಿಲ್ಲಿಸಿದ್ದರಿಂದ ಅಧಿಕಾರಿಗಳ ನಂಬಿಕೆ ಬಲವಾಯಿತು. ಖೈದಿಗಳಲ್ಲೇ ಕೆಲವರಿಗೆ ಈ ಹೋರಾಟ ಜಯಪ್ರದವಾಗುವ ವಿಶ್ವಾಸ ಇರಲಿಲ್ಲ. ಅದೆಷ್ಟು ದಿನ ತಾನೇ ಅನ್ನವಿಲ್ಲದೆ ಇರಬಹುದು ? ಆಗಲೇ ಎಲ್ಲ ಖೈದಿಗಳೂ ಅಪಾರ ಹಿಂಸೆ, ಸಂಕಟಗಳನ್ನು ಅನುಭವಿಸಿ ಬಡವಾಗಿದ್ದರು. ಉಪವಾಸವನ್ನು ಸಹಿಸುವ ಶಕ್ತಿ ದೇಹಕ್ಕೆ ಇರಲೇ ಇಲ್ಲ. ಕೇವಲ ಮನಃಶಕ್ತಿಯಿಂದ ಅವರಿದನ್ನು ಮುಂದುವರಿಸಬೇಕಾಗಿತ್ತು. ಆದರೆ, ಅದೆಷ್ಟು ಕಾಲ ?

ಹತ್ತು ದಿನಗಳು ಕಳೆದುವು. ಈಗ ಜೇಲಿನ ಅಧಿಕಾರಿಗಳಿಗೂ ಭೀತಿ ಮೂಡಿತು.

ಪ್ರತಿಯೊಬ್ಬ ಖೈದಿಯೂ ಪ್ರತ್ಯೇಕವಾದ ಕೋಣೆಯೊಳಗಿದ್ದನು. ಪರಸ್ಪರ ಸುದ್ದಿಯೂ ಈಗ ಸಿಗುವುದು ಕಷ್ಟವಾಯಿತು. ಏನಿದ್ದರೂ ಮುಂಜಾನೆ ಅವರು ಸಂಧಿಸಬೇಕಾಗಿತ್ತು.

ಹದಿಮೂರನೇ ದಿನ. ಜತೀಂದ್ರದಾಸ್‌ಗೆ ಬಲಾತ್ಕಾರವಾಗಿ ಹಾಲು ಕುಡಿಸುವಾಗ ಹಾಲು ಶ್ವಾಸಕೋಶದೊಳಗೆ ನುಗ್ಗಿತು. ಅವನ ಪರಿಸ್ಥಿತಿ ಶೀರಾ ಕೆಟ್ಟು ಚಿಂತಾಜನಕವಾಯಿತು. ಜೇಲು ಆಸ್ಪತ್ರೆಗೆ ಅವನನ್ನು ಸಾಗಿಸಲಾಯಿತು. ಎಷ್ಟೇ ಕಷ್ಟ ಬಂದರೂ ತನ್ನ ಆರೋಗ್ಯ ಉಳಿಸಿಕೊಂಡಿದ್ದ ಅವನಿಗಾದ ಕಥೆ ಇತರ ಖೈದಿಗಳನ್ನು ದಂಗುಬಡಿಸಿತು.

ದಾಸ್ ಮೂರ್ಛೆ ಹೋಗಿದ್ದ. ಡಾಕ್ಟರ್‌ಗಳ ಪ್ರಯತ್ನವೆಲ್ಲ ವಿಫಲ ವಾಗಿತ್ತು. ಅವನಿಗೆ ಎಚ್ಚರವಾಗಲಿಲ್ಲ. ಆ ರಾತ್ರಿಯೇ ಅವನು ಮೃತನಾಗಬಹು ದೆಂಬ ಭೀತಿ ವೈದ್ಯರಿಗೂ ಇತ್ತು. ಆದರೆ, ಕ್ರಮೇಣ ಅವನಿಗೆ ಎಚ್ಚರಿಕೆಯಾಯಿತು. ಆದರೆ, ನ್ಯುಮೋನಿಯಾ ರೋಗ ಬಂದು ಅವನ ದೇಹಶಕ್ತಿ ಕುಸಿಯಿತು.

ಈ ಘಟನೆ ಎಲ್ಲ ಖೈದಿಗಳಲ್ಲೂ ಹೆಚ್ಚಿನ ರೊಚ್ಚು ಉಂಟುಮಾಡಿತು. ಅವರ ನಿರ್ಧಾರ ಬಲವಾಯಿತು.

ಅನ್ನ ಸತ್ಯಾಗ್ರಹ ನಡೆಯುತ್ತಿದ್ದಾಗ ಭಗತ್‌ಸಿಂಗ್ ಕೆಲ ಬಾರಿ ಅತ್ತಬಂದ. ಮೊಕದ್ದಮೆ ವಿಚಾರದಲ್ಲಿ ಸಮಾಲೋಚನೆಗೆ ಎಂದು ಅನುಮತಿ ಪಡೆದು ಬರುತ್ತಿದ್ದ. ಆದರೆ, ಹೋರಾಟದ ಬಗೆಗೆ ತಿಳಿಯುವುದೇ ಅವನ ಉದ್ದೇಶವಾಗಿತ್ತು. ಭಗತ್‌ಸಿಂಗ್ ಶೀರಾ ನಿಶ್ಶಕ್ತನಾಗಿದ್ದ. ಆದರೂ ಜತೀನ್‌ದಾಸನ ಹಾಸಿಗೆ ಬಳಿ ಕುಳಿತು ಧೈರ್ಯ ಹೇಳುತ್ತಿದ್ದ. ಇತರ ಖೈದಿಗಳ ನಿರಾಶೆ ನೀಗುತ್ತಿದ್ದ. ಅವನನ್ನು ಕಂಡೊಡನೆಯೇ ಇತರ ಖೈದಿ ಗಳಲ್ಲಿ ಕೆಚ್ಚು ಉಕ್ಕುತ್ತಿತ್ತು.

ಜೇಲು ಅಧಿಕಾರಿಗಳ ಪ್ರಯತ್ನವನ್ನು ವಿಫಲಗೊಳಿಸಲು ಈಗ ಎಲ್ಲ ಖೈದಿಗಳು ಉತ್ಸುಕರಾದರು. ಶಿವಶರ್ಮನ ಹೋರಾಟ ತೀವ್ರವಾಗಿ ಅವನು ಆಸ್ಪತ್ರೆ ಸೇರಿದ. ಕೆಲವರು ಮೆಣಸಿನಕಾಯಿ ತಿಂದು ಬಿಸಿನೀರು ಕುಡಿದು ಗಂಟಲು ಊದಿಕೊಳ್ಳುವಂತೆ ಮಾಡಿಕೊಂಡರು. ರಬ್ಬರ್ ಕೊಳವೆ ಗಂಟಲಿ ನೊಳಕ್ಕೆ ಇಳಿಯದಂತಾಯಿತು. ಇನ್ನು ಕೆಲವರು ಹಾಲು ಹೊಟ್ಟೆಯೊಳಗೆ ಸೇರಿದೊಡನೆ, ನೊಣ ತಿಂದು ವಾಂತಿ ಮಾಡಿದರು.

ಇದೂ ಅಧಿಕಾರಿಗಳಿಗೆ ತಿಳಿದು, ಖೈದಿಗಳ ಮೇಲೆ ಹೆಚ್ಚಿನ ಕಾವಲು ಇರಿಸಿದರು. ಕುಡಿವ ನೀರನ್ನೂ ನಿರಾಕರಿಸಿದರು. ಹೋರಾಟ ತೀವ್ರ ವಾಯಿತು. ಚಿತ್ರಹಿಂಸೆಯೂ ನಡೆಯಿತು. ಹೆಚ್ಚಿನವರು ಅನಾರೋಗ್ಯದಿಂದ ಹಾಸಿಗೆ ಹಿಡಿದರು. ಯಾರಿಗೂ ಎದ್ದು ನಿಲ್ಲುವ ಶಕ್ತಿಯೂ ಇಲ್ಲ ವಾಯಿತು.

ದೇಶದಾದ್ಯಂತ ಪ್ರತಿಭಟನೆ, ಸಭೆ, ಖಂಡನಾ ನಿರ್ಣಯಗಳಾದುವು. ಇತರ ಜೇಲುಗಳ ರಾಜಕೀಯ ಖೈದಿಗಳೂ ಉಪವಾಸ ಸತ್ಯಾಗ್ರಹ ಆರಂಭಿಸಿ ದರು. ಆದರೂ, ಅಧಿಕಾರಿಗಳಿಗೆ ಕರುಣೆ ಮೂಡಲಿಲ್ಲ.

ಪಂಡಿತ ಜವಾಹರಲಾಲ್ ನೆಹರು ಮತ್ತು ಸುಭಾಷ್ ಚಂದ್ರಬೋಸ್ ಖೈದಿಗಳನ್ನು ಭೇಟಿ ಮಾಡಿದರು. ಅವರ ಬೇಡಿಕೆ ಪಡೆಯಲು ತಾವು ಹೋರಾಡುವ ಭರವಸೆಯಿತ್ತರು. ಉಪವಾಸ ನಿಲ್ಲಿಸುವಂತೆ ಕೇಳಿ ಕೊಂಡರು.

ಆದರೆ ಜತೀನ್ ಜಗ್ಗಲಿಲ್ಲ.

"ನನಗೇನು ವಿಶೇಷ ರಿಯಾಯಿತಿ ಬೇಕಾಗಿಲ್ಲ. ಒಂದು ಧ್ಯೇಯ ಸಾಧನೆಗಾಗಿ ಈ ಹೋರಾಟ ಸಾಗಿದೆ. ರಾಜಕೀಯ ಖೈದಿಗಳೆಲ್ಲರ ಹಿತವೇ ಅದು. ನಾನು ಸಾಯಲು ಸಿದ್ಧ. ದೇಶದ ಹಿತಕ್ಕಾಗಿ ಸತ್ತರೆ, ಸ್ವರಾಜ್ಯದ ಹೋರಾಟದಲ್ಲಿ ಅದು ನನ್ನ ಅಲ್ಪ ಕಾಣಿಕೆಯಾದೀತು," ಎಂದು ಸುಭಾಷ್‌ರಿಗೆ ಜತೀನ್ ಉತ್ತರಿಸಿದನು.

ಜತೀನ್‌ದಾಸ್‌ನ ಪರಿಸ್ಥಿತಿ ತೀರಾ ಕಟ್ಟಿತು. ಇತರ ಕೆಲವರ ಸ್ಥಿತಿಯೂ ಚಿಂತಾಜನಕವಾಯಿತು. ಜತೀನ್ ಬದುಕುವ ಆಶೆ ಉಳಿಯಲಿಲ್ಲ. ಅವನಿಗೆ ಮಾತನಾಡಲು ಸಾಧ್ಯವಾಗಲಿಲ್ಲ. ಕಿವಿಯೂ ಕಿವುಡಾಯಿತು.

ಅಧಿಕಾರೇತರರ ಸಮಿತಿಯೊಂದನ್ನು ಸರ್ಕಾರ ನೇಮಿಸಿ, ಜೇಲಿನಲ್ಲಾಗ ಬೇಕಾದ ಸುಧಾರಣೆ ಬಗೆಗೆ ತಿಳಿಸಲು ಸೂಚಿಸಿತು. ಸಮಿತಿಯವರು ಖೈದಿ ಗಳನ್ನು ಕಂಡರು. ಭರವಸೆ ನೀಡಿದರು.

ಜತೀನ್‌ದಾಸ್ ಸಾವನ್ನು ಸ್ವಾಗತಿಸುತ್ತ ಮಲಗಿದ್ದ. ಅನ್ನ ಸತ್ಯಾಗ್ರಹ ಸಫಲವಾಯಿತು ಎಂದಾಗ, ೬೪ ದಿನಗಳ ತರುವಾಯ ಅವನು ಇಹಯಾತ್ರೆ ಮುಗಿಸಿದ.

ಅವನ ಕಳೇಬರವನ್ನು ಜೇಲಿನಿಂದ ಹೊರತರುವಾಗ, ಬ್ರಿಟಿಷ್ ಸಾಮ್ರಾಜ್ಯಶಾಹಿಯ ಸರ್ವ ಶಕ್ತಿಗೂ ಮಣಿಯದ ಆ ಧೀರನ ಶವಕ್ಕೆ ಪೋಲೀಸ್ ಸೂಪರಿಂಟೆಂಡೆಂಟ್ ಹ್ಯಾಮಿಲ್ಟನ್ ಹಾರ್ಡಿಂಜ್ ಶಿರಬಾಗಿ ನಮಿಸಿದ.

ಅನ್ನ ಸತ್ಯಾಗ್ರಹದಿಂದಾಗಿ ಖೈದಿಗಳ ಪರಿಸ್ಥಿತಿ ಕೊಂಚ ಸುಧಾರಿಸಿದರೂ, ಅದು ಹೆಚ್ಚು ಕಾಲ ಉಳಿಯಲಿಲ್ಲ. ಅಧಿಕಾರಿಗಳು ಅದನ್ನು ಮರೆತು, ಮತ್ತೆ ಹೋರಾಟಕ್ಕೆ ಆಹ್ವಾನ ನೀಡುತ್ತಿದ್ದರು.

ಇನ್ನೊಮ್ಮೆ ದೇಶದ ಮೂಲೆ ಮೂಲೆಗಳಲ್ಲೂ ಕಣ್ಣೀರಿನ ತರ್ಪಣ ನಡೆಯಿತು. ಲಕ್ಷ ಲಕ್ಷ ಜನ ಈ ಹುತಾತ್ಮನನ್ನು ಹೊಗಳಿ, ವಂದಿಸಿದರು. ಅವನ ಬಯಕೆಯಾದ ಸ್ವಾತಂತ್ರ್ಯ ಸಾಧಿಸುವ ಪ್ರತಿಜ್ಞೆ ತೊಟ್ಟರು.

ಭಗತ್‌ಸಿಂಗ್‌ನ ಚಿತ್ರದ ಜೊತೆಗೆ ಜತೀನ್‌ದಾಸ್‌ನ ಚಿತ್ರ ಪ್ರತಿ ಮನೆಯಲ್ಲೂ ಮೆರೆಯಿತು.

ಸರ್ಕಾರವೂ ನಡುಗಿತು.

ಸರ್ಕಾರವು ಕಾಂಗ್ರೆಸ್ ನಾಯಕರ ವಶ ವಿಶೇಷ ರೈಲನ್ನು ಕೊಟ್ಟಿತು. ಅದರಲ್ಲಿ ಜತೀನ್ ಕಳೇಬರವನ್ನು ಕಲ್ಕತ್ತೆಗೆ ಒಯ್ಯಲಾಯಿತು. ಹೌರಾ ರೈಲ್ವೇ ನಿಲ್ದಾಣದಲ್ಲಿ ಮೃತ ದೇಹವನ್ನು ಸಕಲ ಗೌರವಗಳಿಂದ ನಗರದ ಮೇಯರ್ ಸ್ವಾಗತಿಸಿ ಸುಭಾಷ್ ಚಂದ್ರಬೋಸ್‌ರಿಗೆ ಒಪ್ಪಿಸಿದರು. ಲಕ್ಷಾಂತರ ಮಂದಿ ಸ್ತ್ರೀ ಪುರುಷರು, ಮಕ್ಕಳು ರಸ್ತೆಯ ಇಕ್ಕಡೆಗೂ ನಿಂತು ಕಣ್ಣೀರು ಸುರಿಸುತ್ತ ಈ ವೀರನಿಗೆ ಅಂತಿಮ ಗೌರವ ಸಲ್ಲಿಸಿದರು.

ದಹನ ಭೂಮಿಯಲ್ಲಿ ಹಿರಿಯ ನಾಯಕರು ಗೌರವ ಸಲ್ಲಿಸಿದರು. ಸಾವಿರಾರು ಯುವಕರು ಜತೀನ್‌ರ ಚಿತಾಭಸ್ಮವನ್ನು ಎತ್ತಿ ಕಣ್ಣಿಗೊತ್ತಿ ಹಣೆಗೆ ಹಚ್ಚಿಕೊಂಡರು.

ವಿಚಾರಣೆ ತೂಕಡಿಸುತ್ತ ಸಾಗಿತ್ತು.

ಅಪರಾಧಿಗಳೆಲ್ಲ ಕೋರ್ಟಿನಲ್ಲಿ ಹಾಜರಿರಬೇಕು. ಹಾಗಿಲ್ಲದೆ ವಿಚಾರಣೆ ಮುಂದುವರಿಯುವಂತಿರಲಿಲ್ಲ. ಆದರೆ, ಎಲ್ಲ ಅಪರಾಧಿಗಳನ್ನು ಈಗ ಕೋರ್ಟಿಗೆ ಹಾಜರುಪಡಿಸಲು ಸಾಧ್ಯವಿರಲಿಲ್ಲ.

ಪೋಲೀಸರ ಹಿಂಸೆ ತಾಳಲಾರದೆ ಸರ್ಕಾರದ ಕಡೆ ಸಾಕ್ಷಿ ಹೇಳಿದ ಏಳು ಮಂದಿಯಲ್ಲಿ ಹಲವರು ಕೋರ್ಟಿನಲ್ಲಿ ಹೇಳಿಕೆ ಬದಲಾಯಿಸಿದರು. ಇತರ

ಹಲವು ಮುಖ್ಯ ಸಾಕ್ಷಿಗಳೂ ತಿರುಗಿಬಿದ್ದರು. ಇತರರಿಗೆ ಆಪಾದಿತರ ಗುರುತು ಹಿಡಿಯುವುದೂ ಕಷ್ಟವಾಯಿತು.

ಒಂಭತ್ತು ತಿಂಗಳು ಕಳೆದರೂ ವಿಚಾರಣೆ ಆರಂಭದಲ್ಲೇ ಇತ್ತು.

ಕೇಂದ್ರ ಸರ್ಕಾರ ಇದೀಗ ಸರ್ವಾಧಿಕಾರ ನೀತಿಯನ್ನು ಯೋಚಿಸಿತು. ಹಿಂದೆಂದೂ ಯಾರೂ ಕೇಳದಂತಹ ಆಜ್ಞೆಯೊಂದನ್ನು ಮಾಡಿತು. ಯಾವುದೇ ಆಪಾದಿತ ತಾನಾಗಿಯೇ ಅಶಕ್ತತೆಯನ್ನು ತಂದುಕೊಂಡು ಕೋರ್ಟಿಗೆ ಹಾಜರಾಗದಿದ್ದಾಗ, ಅಂಥವರ ಗೈರು ಹಾಜರಿಯಲ್ಲೇ ವಿಚಾರಣೆ ಮುಂದುವರಿಸಬಹುದು ಎಂಬುದೇ ಆ ಮಸೂದೆ!

ಕೇಂದ್ರ ಶಾಸನಸಭೆ ಮುಂದೆ ಈ ಮಸೂದೆ ಬಂತು.

ಆರೋಪಿಗಳು ಹಾಜರಿಲ್ಲದಿದ್ದರೂ, ಮ್ಯಾಜಿಸ್ಟ್ರೇಟರು ವಿಚಾರಣೆಯ ನಾಟಕ ನಡೆಸುವ ಅಧಿಕಾರ ಇದರಿಂದ ಪ್ರಾಪ್ತವಾಯಿತು.

ಶಾಸನ ಸಭೆಯ ಖಾಸಗಿ ಸದಸ್ಯರು ಇದನ್ನು ತೀವ್ರವಾಗಿ ವಿರೋಧಿಸಿ ಖಂಡಿಸಿದರು.

ಇದು ನ್ಯಾಯವಲ್ಲದ ಮಸೂದೆ; ಅನೀತಿಯ ಪರಮಾವಧಿ; ಕಾಡಿನ ಕಾನೂನು—ಎಂದರು ಮಹಮ್ಮದಾಲಿ ಜಿನ್ನಾ.

ಅಧಿಕಾರಶಾಹಿಯ ಸರ್ಪಮತ್ಸರದ ನೀತಿ ಇದು; ಸೇಡಿನ ಸಾಧನೆ—ಎಂದರು ಪಂಡಿತ ಮೋತಿಲಾಲ್ ನೆಹರು.

ದೇಶದಾದ್ಯಂತ ಎಲ್ಲ ನಾಯಕರೂ ಇದನ್ನು ಖಂಡಿಸಿದರು. ಸರ್ಕಾರ ಜನಾಭಿಪ್ರಾಯ ಪಡೆಯಲು ನಿರ್ಧರಿಸಿ ಅದನ್ನು ಆಗ ಹಿಂತೆಗೆದುಕೊಂಡಿತು.

ಪ್ರತಿಯೊಂದು ಹಿಂಸೆಯೂ, ಮತ್ತಷ್ಟು ಹೆಚ್ಚು ಹಿಂಸೆಯನ್ನು ಉತ್ಪಾದಿಸುತ್ತದೆ.

ಒಂದು ಸುಳ್ಳು ಹೇಳಿದರೆ ಸಾಕು. ಅದನ್ನು ಬಲಪಡಿಸಲು ಸಾವಿರ ಸುಳ್ಳುಗಳ ಮಾಲೆಯನ್ನು ನೇದು ಕೊನೆಗೆ ಸುಳ್ಳುಗಾರ ತಾನು ನೇದ ಬಲೆಯಲ್ಲೇ ಸಿಲುಕಿಕೊಳ್ಳುತ್ತಾನೆ.

ಬ್ರಿಟಿಷ್ ಸಾಮ್ರಾಜ್ಯಶಾಹಿಯ ಹಿಂಸೆ, ದಬ್ಬಾಳಿಕೆ, ಕ್ರೂರ ಶಿಕ್ಷೆಗಳ ಪರಿಣಾಮ ಹೀಗೇ ಆಯಿತು. ಪೋಲೀಸರು ನೇಯ್ದ ಸುಳ್ಳಿನ ಬಲೆಯಲ್ಲಿ ಸಾಮ್ರಾಜ್ಯಶಾಹಿಯೇ ಸಿಕ್ಕಿ ತೊಳಲುವಂತಾಯಿತು.

ಜತೀನನ ಮರಣ ಮತ್ತೊಮ್ಮೆ ಕ್ರಾಂತಿಯ ಜ್ವಾಲಾಮುಖಿಯು ಕಿಡಿ ಕಾರಲು ಎಡೆಮಾಡಿತು. ಕ್ರಾಂತಿಯ ಬಿರುಗಾಳಿ ಹರಡಿತು. ಬ್ರಿಟಿಷರ ವಿರುದ್ಧ ಸೇಡು ತೀರಿಸಿಕೊಳ್ಳಲು ಪ್ರತಿಯೊಬ್ಬ ಯುವಕನೂ ಉತ್ಸುಕನಾದ. ಲಾಹೋರಿನಿಂದ ಡಾಕಾವರೆಗೆ ಕ್ರಾಂತಿಕಾರೀ ಚಟುವಟಿಕೆಗಳು ಈಗ ತೀವ್ರವಾಗಿ ಹರಡಿದುವು.

ಚಂದ್ರಶೇಖರ ಆಜಾದ್ ಪೋಲೀಸರ ಕಣ್ಣಿಗೆ ಮಣ್ಣೆರಚಿ, ಕ್ರಾಂತಿಯ ಜ್ಯೋತಿಯನ್ನು ಹಿಡಿದು, ಮುಖ್ಯ ಪ್ರಾಣನಂತೆ ಮಿಂಚಿನ ವೇಗದಿಂದ ನಡೆದ. ಈ ಬ್ರಿಟಿಷ್ ರಾವಣರಾಜ್ಯವನ್ನು ಅಗ್ನಿಗೆ ಆಹುತಿಕೊಡಲು ಕ್ರಾಂತಿಕಾರರು ಸಿದ್ಧತೆ ನಡೆಸಿದರು.

ಜತೀಂದ್ರನ ಬಲಿದಾನವೇ ಭಾರತದ ಸ್ವಾತಂತ್ರ್ಯ ಘೋಷಣೆಗೆ ನಾಂದಿಯಾಯಿತು.

ಮೂರು ತಿಂಗಳಲ್ಲಿ ವೈಸ್ರಾಯ್ ಪ್ರಯಾಣ ಮಾಡುತ್ತಿದ್ದ ರೈಲುಬಂಡಿಯ ಮೇಲೆ ಬಾಂಬೆಸೆಯಲಾಯಿತು. ಆದರೆ, ವೈಸ್ರಾಯ್‌ಗೆ ಅಪಘಾತವಾಗಲಿಲ್ಲ.

ಲಾಹೋರ್ ನಗರದಲ್ಲಿ ನಡೆಯಲಿದ್ದ ಕಾಂಗ್ರೆಸ್ ಅಧಿವೇಶನದಲ್ಲಿ ಅಂತಿಮ ನಿರ್ಧಾರ ಕೈಗೊಳ್ಳಲು ನಾಯಕರನ್ನು ಪ್ರಚೋದಿಸುವುದೇ ಈ ಸಾಹಸದ ಉದ್ದೇಶವಾಗಿತ್ತು.

ಅದೂ ಸಫಲವಾಯಿತು.

ಜವಾಬ್ದಾರಿ ಸರ್ಕಾರವನ್ನೇ ಬಯಸಿ, ಸ್ವರಾಜ್ಯ ಬೇಡಿದ ಕಾಂಗ್ರೆಸ್ ಸಂಸ್ಥೆಯು ಈಗ ಸಂಪೂರ್ಣ ಸ್ವಾತಂತ್ರ್ಯವೇ ತನ್ನ ಗುರಿ ಎಂದು ಘೋಷಿಸಿತು.

## ೧೭

"ಅಜಯ......?"

ಮಹಾ ಸಾಗರದಂತೆ ಉಕ್ಕಿ ನಿಂತ ಜನ ಸಮೂಹದಲ್ಲಿ ಅಜಯನೂ ಸೇರಿದ್ದ. ಲಾಹೋರ್ ನಗರ ಮತ್ತೊಮ್ಮೆ ಜೀವ ತುಂಬಿ ನಿಂತಿತ್ತು. ದೇಶದ ಮಹಾನಾಯಕರೆಲ್ಲ ಸೇರಿದ್ದರು. ಭಾರತದ ಇತಿಹಾಸದಲ್ಲಿ ಕ್ರಾಂತಿಯ ಚರಿತ್ರೆಯಲ್ಲಿ ಸ್ವಾತಂತ್ರ್ಯ ಸಮರದ ಕಥೆಯಲ್ಲಿ, ಅನೇಕ ಮಹೋನ್ನತ ಸಾಧನೆಗಳನ್ನು ಸಾಧಿಸಿದ ಲಾಹೋರ್ ಈಗ ಕಾಂಗ್ರೆಸ್ಸಿನ ಪರ್ವಕಾಲದಲ್ಲಿ ಅಂತಿಮ ನಿರ್ಧಾರಕ್ಕೆ ನೆಲೆಯಾಗಿತ್ತು.

ಮನೆ ಮನೆಗಳ ಮೇಲೂ ತ್ರಿವರ್ಣ ಧ್ವಜ, ತಳಿರು ತೋರಣಗಳ ಅಲಂಕಾರ. ಎತ್ತ ನೋಡಿದರೂ ಉತ್ಸಾಹ.

ಅಜಯ ಈ ಉತ್ಸಾಹದ ಉನ್ಮಾದವಲ್ಲಿ ಹಾರಾಡುತ್ತಿದ್ದ. ಕಾಂಗ್ರೆಸ್ ಅಧಿವೇಶನದ ಕಾರ್ಯಗಳನ್ನು ವೀಕ್ಷಿಸಿ, ನಾಯಕರ ದರ್ಶನ ಪಡೆದು, ತನ್ನ ಹೃದಯದಲ್ಲಿ ದೇಶಪ್ರೇಮ ತುಂಬಿಕೊಳ್ಳುತ್ತಿದ್ದ.

ಜವಾಹರಲಾಲ್ ನೆಹರೂ...ಅಧ್ಯಕ್ಷರು !

ಭಾರತದ ಯುವಜನಾಂಗದ ನಾಯಕನೇ ಈಗ ಹಿರಿಯ ಪರಂಪರಾಗತ ಕೋಟೆಯ ಅಧಿಕಾರಿ ಎನಿಸಿದ್ದರು. ಅದೊಂದು ರೋಮಾಂಚಕಾರಕ ದೃಶ್ಯ !

ಮಹಾ ನಾಯಕರ ಭಾಷಣಗಳನ್ನು ಕೇಳುತ್ತ ಮೂಕ ವಿಸ್ಮಯದಿಂದ ಆತ ಮೂಲೆಯಲ್ಲಿ ಕುಳಿತಿದ್ದ. ಆಗ ಯಾರೋ ಆತನನ್ನು ಮೆಲುದನಿಯಲ್ಲಿ ಕರೆದಂತಾಯಿತು. ಆತ ತಿರುಗಿ ನೋಡಿದ.

ಮೊದಲ ನೋಟಕ್ಕೆ ಅವನಿಗೆ ಆ ವ್ಯಕ್ತಿಯ ಗುರುತೇ ಹತ್ತಲಿಲ್ಲ.

ತೀರಾ ಬಿಳಿಚಿಕೊಂಡು ಕ್ಷೀಣನಾಗಿದ್ದ ವ್ಯಕ್ತಿ. ಮುಖದ ಮೇಲೆ ಗಡ್ಡ ಮೀಸೆಗಳಿವೆ. ತಲೆಗೊಂದು ಕಾವಿ ಬಟ್ಟೆಯ ಪೇಟಾ. ಕಾವಿ ಬಟ್ಟೆಯ ಉಡುಗೆ. ಕೈಯಲ್ಲೊಂದು ಚರ್ಮದ ಕೈಚೀಲ. ಯಾರೋ ಸನ್ಯಾಸಿಯಂತೆ ಆತ ಕಾಣುತ್ತಿದ್ದ.

" ಯಾಕೆ ? ಗುರುತು ಹತ್ತಲಿಲ್ಲವೇ ?"

ಅಜಯ ಅವನೆಡೆ ಮತ್ತೊಮ್ಮೆ ದಿಟ್ಟಿಸಿ ನೋಡಿದ. ಅವನನ್ನು ಎಲ್ಲೋ ನೋಡಿದ ನೆನಪು, ಅವನ ಧ್ವನಿಯ ಪರಿಚಯ ಇದ್ದಂತೆ ಅನಿಸಿತು. ಆದರೂ ಸರಿಯಾದ ನೆನಪು ಮರುಕಳಿಸಲಿಲ್ಲ. ತನ್ನ ಸ್ನೇಹಿತರಾರೂ ಸನ್ಯಾಸಿಗಳಾಗಿಲ್ಲ. ಇವನು ಯಾರು ?

ಮೌನವಾಗಿ ಅವನೆಡೆ ನೋಡುತ್ತಿದ್ದಂತೆ ಅಜಯನ ಹೃದಯದಲ್ಲಿ ಅನುಕಂಪ ಮೂಡಿತು. ಹಳೆಯ ಚಿತ್ರಗಳೆಲ್ಲ ಅವನ ಮುಂದೆ ಸುಳಿದುವು. ಅವನ ಕಣ್ಣುಗಳಲ್ಲಿ ಹನಿ ಕಾಣಿಸಿಕೊಂಡಿತು.

" ಹೌದು, ಅಜಯ. ದೇಶಕ್ಕಾಗಿ ಎಲ್ಲ ಹಾದಿಯನ್ನು ನಾವು ತುಳಿಯ ಬೇಕಾಗುತ್ತದೆ."

" ...........!"

" ಅಗ್ನಿ ಪರೀಕ್ಷೆಯಲ್ಲಿ ಬೆಂದಾಗ ದೇಹವೂ ಬದಲಾಗುತ್ತದೆ. ಬುದ್ಧಿಯೂ ಬದಲಾಗುತ್ತದೆ. ಬುದ್ಧಿಯನ್ನು ಬದಲಾಗದಂತೆ ತಡೆಯುವುದೇ ತಪಸ್ಸು."

ಅಜಯನ ಮೈ ಬಿಸಿಯಾಯಿತು. ರೋಮಾಂಚನಗೊಂಡ ಅವನು ಗೆಳೆಯನನ್ನು ಅಪ್ಪಿಕೊಂಡ.

" ಕಿಶೋರ್...ಕ್ಷಮಿಸು...!"

ಆ ಜನ ಸಮೂಹದ ನಡುವಿನಿಂದ ಇಬ್ಬರೂ ಸಭೆಯ ಹೊರಗಡೆಗೆ ಬಂದು ಮೂಲೆಯಲ್ಲಿ ನಿಂತರು.

" ನಾನು ಆಶ್ರಮ ಸೇರಿದೆನೆಂದು ತಿಳಿದೆಯೋ ಅಜಯ ! ನನ್ನದು ಒಂದೇ ಆಶ್ರಮ..."

" ಹಾಗೇನೂ ಇಲ್ಲ. ಅದೆಷ್ಟು ಭೀಕರ ಜೀವನ ಸಾಗಿಸಿದ್ದೀಯಾ ಎಂದು ದುಃಖವಾಯಿತು. ನಿನ್ನ ಪ್ರತಿ ದಿನದ ಕಥೆಗಳನ್ನು ನಿನ್ನ ದೇಹ ಹೇಳು ತ್ತದೆ."

" ಹಾಗಾದರೂ ಚಿಂತೆ ಇಲ್ಲ. ಹೀಗೆ ಬಡವಾದುದರಿಂದ ನನಗಂತೂ ಅನುಕೂಲವೇ ಆಗಿದೆ. ಬಡ ಸನ್ಯಾಸಿ ಎಂಬ ಹೆಸರು ಬಂತು."

" ಹೊರಗಡೆಗೆ ಹೋರಾಡುವವರೇ ಹೀಗೆ ಎಲುಬು ಗೂಡುಗಳಾದರೆ, ಇನ್ನು ಒಳಗಡೆ ನರಳುವವರ ಸ್ಥಿತಿ !"

"ಅದನ್ನೆಲ್ಲ ಪತ್ರಿಕೆಗಳು ತಿಳಿಸುತ್ತಲೇ ಇವೆಯಲ್ಲ. ಹೊರಗಿನ ಕಥೆ ಮಾತ್ರ ಅವು ತಿಳಿಸುವುದಿಲ್ಲ," ಎಂದು ಮುಗುಳುನಗೆ ನಕ್ಕ ಕಿಶೋರ್. ಆದರೆ, ಆ ಹಿಂದಿನ ಉತ್ಸಾಹ, ಮಿಂಚಿನಂತೆ ಪ್ರಖರವಾದ ನಗು ಅಲ್ಲಿರಲಿಲ್ಲ.

ಇಬ್ಬರೂ ತಮ್ಮ ತಮ್ಮ ಜೀವನದ ಬಗೆಗೆ ಮಾತುಕತೆ ನಡೆಸುತ್ತ, ಹೊರಬಿದ್ದರು. ಅಜಯನಿಗೆ ಈಗ ಕಿಶೋರನ ಕಥೆ ಕೇಳುವುದೇ ಮಹತ್ವ ವೆನಿಸಿತ್ತು.

"ಅಂತೂ ಒಮ್ಮೆಲೇ ಹಣಮಾಡುವ ಸಾಹಸ ಮಾಡಿದೆ ಅನ್ನು," ಎಂದ ಕಿಶೋರ್.

"ಪರ್ವತ ಪ್ರಸವವಾಯಿತು. ಹಿಂತಿರುಗಿ ಬಂದಾಗ ನನ್ನ ಕಾಲೇಜಿನ ಸ್ನೇಹಿತರಿಗೂ ಜೇಲಿನ ರುಚಿ ತಿಳಿದಿತ್ತು. ಲ್ಯಾಬೊರೇಟರಿ ಕಳ್ಳತನದ ಪತ್ತೆ ಯಾಗಿತ್ತು. ಸಂದೇಹ ಹಾಗೂ ಸುದ್ದಿ ಎರಡೂ ತಿಳಿದ ಪೋಲೀಸರು ಅನೇಕ ರನ್ನು ಸೆರೆ ಹಿಡಿದರು. ವಿಚಾರಣೆಯೂ ಆಯಿತು."

"ಶಿಕ್ಷೆಯಾಯಿತೇ ?"

"ಆ ಮಾತೆಲ್ಲಿ ? ಲ್ಯಾಬೊರೇಟರಿ ಸಾಮಾಗ್ರಿಗಳೇ ಪತ್ತೆಯಾಗಲಿಲ್ಲವಲ್ಲ. ಮೇಲಾಗಿ, ಎಲ್ಲರೂ ನಗರದ ಗಣ್ಯರ ಮಕ್ಕಳು. ಒಂದಿಬ್ಬರು ಪೋಲೀಸ್ ಅಧಿಕಾರಿಗಳ ಪುತ್ರರು. ಪ್ರಭಾವಕ್ಕೆ ಬಲಿ ಬಿದ್ದು ಮ್ಯಾಜಿಸ್ಟ್ರೇಟರು ಎಲ್ಲರನ್ನೂ ಬಿಡುಗಡೆ ಮಾಡಿದರು."

"ನಿನ್ನ ಜಾಣತನದಿಂದ ಅವರೆಲ್ಲ ಪಾರಾದರು."

"ಆದರೆ, ನನ್ನ ಸರದಿ ಇನ್ನೂ ಮುಗಿದಿಲ್ಲ. ವಿದ್ಯಾರ್ಥಿಗಳಲ್ಲೊಬ್ಬ ನನ್ನ ಹೆಸರನ್ನೂ ಹೇಳಿದ್ದಾನಂತೆ. ನನ್ನನ್ನೂ ಪೋಲೀಸರು ಹುಡುಕುತ್ತಿದ್ದಾ ರಂತೆ."

"ಅದಕ್ಕೇ ಏನು ಈ ವಿಚಿತ್ರ ವೇಷ ?" ಎಂದು ಹಳ್ಳಿಯ ರೈತನಂತೆ ಉಡಿಗೆ ಧರಿಸಿದ್ದ ಅಜಯನನ್ನು ಕಿಶೋರ್ ಪರಿಹಾಸ್ಯ ಮಾಡಿದ. ಇಬ್ಬರೂ ಉದ್ಯಾನದ ಕಡೆಗೆ ಸಾಗಿ ಅಲ್ಲಿ ಕಲ್ಲು ಬೆಂಚಿನ ಮೇಲೆ ಕುಳಿತರು.

ಕ್ರಾಂತಿಕಾರರೆಲ್ಲರ ಸೆರೆಯಾದುದರಿಂದ ಅಜಯನಿಗೆ ತೀರಾ ಕಳವಳ ವಾಗಿತ್ತು. ಭಗತ್‌ಸಿಂಗ್ ಆಗಲೇ ಯುವಕರ ದೇವರಾಗಿದ್ದ. ಅಜಯ ಪಾರ್ಟಿಯ ಬಗೆಗೆ ತಿಳಿಯಲು ಉತ್ಸುಕನಾಗಿದ್ದ.

" ನಿರಾಶೆಗೆ ಎಡೆಯೇ ಇಲ್ಲ ಅಜಯ. ನಾನೂ ನಿನ್ನಂತೆಯೇ ನಿರಾಶನಾಗಿದ್ದೆ. ಆದರೆ, ಎಂದಿನವರೆಗೆ ಆಜಾದ್ ಜೀವಂತವಾಗಿ ಉಳಿಯುವರೋ ಅಂದಿನವರೆಗೆ ಕ್ರಾಂತಿಯ ಬೆಂಕಿ ಆರುವುದಿಲ್ಲ. ಹತ್ತು ಮಂದಿಯ ಸೆರೆಯಾದರೆ ಮತ್ತೆ ನೂರು ಮಂದಿ ಹೋರಾಟಕ್ಕೆ ಸಿದ್ಧವಾಗುತ್ತಿದ್ದಾರೆ."

" ನಿನ್ನ ಅದೃಷ್ಟ ಚೆನ್ನಾಗಿದ್ದಂತಿದೆ. ಪೋಲೀಸರ ಕಣ್ಣು ತಪ್ಪಿಸಿ ಸುತ್ತಾಡುತ್ತಿದ್ದೀಯ!'

" ಆ ಅದೃಷ್ಟ ಪರೀಕ್ಷೆಯೂ ನಡೆಯಿತು."

" ಹೇಗೆ? ಏನಾಯಿತು?"

" ಅದೊಂದು ದಿನ ರೈಲಿನಿಂದ ಇಳಿಯುವಾಗ ನನ್ನ ಕೈ ಚೀಲವೇ ಬದಲಾಗಿತ್ತು. ಕ್ರಾಂತಿಕಾರೀ ಸಾಹಿತ್ಯವಿದ್ದ ಚೀಲ ನನ್ನ ಕೈ ಸೇರಿತು. ಸಾಬೂನಿನ ವ್ಯವಹಾರದ ಚೀಲ ಮಾಯವಾಗಿತ್ತು."

" ಆಮೇಲೆ?"

" ಹೋಟೆಲಿನಲ್ಲಿ ತಿಂಡಿ ತಿಂದು ಚೀಲ ತೆರೆದೆ. ನನಗೆ ಗಾಬರಿಯಾಯಿತು. ಅತ್ತಿತ್ತ ನೋಡಿದೆ. ಯಾರೋ ನನ್ನ ಬೆನ್ನು ಹಿಡಿದಂತೆ ಕಂಡು ಬಂತು."

" ಪೋಲೀಸರೇ?"

" ಹೌದು, ಗೂಢಚಾರರು. ಚೀಲ ಸಹಿತವಾಗಿ ನನ್ನನ್ನು ಹಿಡಿಯಲು ಅವರು ಸಂಚು ನಡೆಸಿದ್ದರು. ನಾನು ಅಲ್ಲಿಂದ ಹೊರಟು, ಊಟದ ಹೋಟೆಲಿಗೆ ತೆರಳಿ, ಅಲ್ಲೊಂದು ಕೋಣೆಯನ್ನು ಬಾಡಿಗೆಗೆ ಹಿಡಿದೆ."

" ಸೋಪಿನ ಚೀಲ?"

" ಅದು ಗೂಢಚಾರರ ವಶವಾಗಿತ್ತು. ಅದರಲ್ಲೂ ಕೊಂಚ ಸಾಹಿತ್ಯ ಹಾಗೂ ಪತ್ರಗಳಿದ್ದುವು. ಪೋಲೀಸರಿಗೆ ನನ್ನ ಬಗೆಗೆ ಹಿಂದೆಯೇ ಸಂದೇಹ ಬಂದಿರಬೇಕು."

" ಮುಂದೇನಾಯಿತು?"

" ಅದೇ ಸ್ವಾರಸ್ಯ ಅಜಯ. ಕ್ರಾಂತಿಕಾರಿ ಯಾವುದೇ ಸಂದರ್ಭದಲ್ಲೂ ನಿರಾಶನಾಗಬಾರದು, ಹೆದರಲೂ ಬಾರದು. ಕೋಣೆಯೊಳಗೆ ಹೋಗಿ ಬಟ್ಟೆ

ಬದಲಾಯಿಸಿದೆ. ಕಾಗದ ಪತ್ರಗಳನ್ನೆಲ್ಲ ಟವೆಲ್‌ನಲ್ಲಿ ಕಟ್ಟಿ ಸೊಂಟಕ್ಕೆ ಸುತ್ತಿ ಕೊಂಡೆ. ಸ್ನಾನದ ಮನೆಗೆ ಹೋದೆ."

"ಗೂಢಚಾರ ಎಲ್ಲಿ ಹೋದ ?"

"ಅವನು ಹೋಟೆಲಿನಲ್ಲೇ ಕಾದು ಕುಳಿತಿದ್ದ."

"ಆಮೇಲೆ......?"

"ಸ್ನಾನ ತೀರಿಸಿ ಹತ್ತಿರದ ದೇವಾಲಯಕ್ಕೆ ತೆರಳಿದೆ. ಅಲ್ಲಿಂದ ಮುಂದೆ...ತಿಳಿದೇ ಇದೆ."

"ಪೋಲೀಸ್ ಹೋಟೆಲಿನಲ್ಲೇ ನಿನಗಾಗಿ ಕಾದು ಕುಳಿತಿರ ಬಹುದು."

"ನಿಜ, ನಾನು ಅಂದಿನಿಂದ ಸನ್ಯಾಸಿಯ ವೇಷ ಧರಿಸಿದೆ. ಹೋಟೆಲಿ ನಲ್ಲಿದ್ದ ನನ್ನ ಬಟ್ಟೆಗಳ ಗತಿ ಏನಾಯಿತೋ ದೇವರೇ ಬಲ್ಲ," ಎಂದು ಕಿಶೋರ್ ನಕ್ಕ. ಅವನ ಸಾಹಸದ ಕಥೆ ಕೇಳಿ ಅಜಯನಿಗೆ ಆನಂದವೂ ಆಶ್ಚರ್ಯವೂ ಆಯಿತು.

"ನಮ್ಮ ಸಾಹಸವೂ ಸಾಗಿದೆ ಕಿಶೋರ್. ಆದರೂ, ಪೋಲೀಸರ ಕಣ್ಣು ತಪ್ಪಿಸುವುದೇ ಕಷ್ಟವಾಗಿದೆ. ರೈಲ್ವೆ ಬಾಂಬ್ ಪ್ರಕರಣದ ವಿಷಯದಲ್ಲಿ ಪೋಲೀ ಸರು ತೀವ್ರ ಶೋಧನೆ ನಡೆಸುತ್ತಿದ್ದಾರೆ. ಯಾವ ಘಳಿಗೆಯಲ್ಲಿ ಅವರ ಕಣ್ಣಿಗೆ ಬೀಳುತ್ತೇವೋ ತಿಳಿಯದು."

"ಭೀತಿಯ ಅಪಾಯದ ಹಾಗೂ ಫಾಶಿಯ ಉರುಳಿನ ನೆರಳಲ್ಲೇ ನಾವು ದುಡಿಯಬೇಕು. ಆಗಲೇ ಅದು ಸಾಹಸ. ಆಗಲೇ ಹೆಮ್ಮೆಯ ಹುಮ್ಮಸ್ಸು."

"ನಿನ್ನ ಮುಂದಿನ ಯಾತ್ರೆ ?"

"ಅದು ತಿಳಿದೇ ಇದೆಯಲ್ಲ. ಈಗ ಸಂಯುಕ್ತ ಪ್ರಾಂತ್ಯ, ಪಂಜಾಬ್‌ಗಳಲ್ಲಿ ಹೆಚ್ಚು ಸುತ್ತಾಡಲು ಸಾಧ್ಯವಿಲ್ಲ. ಕಾರ್ಯಕ್ರಮದ ವ್ಯವಸ್ಥೆಯೂ ಸುಲಭ ವಲ್ಲ. ಇದರಿಂದ ಮುಂದಿನ ಹೋರಾಟಕ್ಕಾಗಿ ಸಿದ್ಧವಾಗುತ್ತಿರುವ ನಿಮಗೂ ಅಪಾಯ. ಬಂಗಾಲಕ್ಕೆ ತೆರಳಬೇಕಾಗಿದೆ ನಾನು."

"ಬಂಗಾಲ ಅಂದೊಡನೆ ನನಗೆ ರೋಮಾಂಚನವಾಗುತ್ತಿದೆ ಕಿಶೋರ್. ಅದು ಕ್ರಾಂತಿಗೆ ನೆಲೆ; ಸ್ವಾತಂತ್ರ್ಯ ಸಮರದ ಗಂಡುಮೆಟ್ಟು."

"ನಿಜ. ಬಂಗಾಲದಾದ್ಯಂತ ಪ್ರಖರವಾದ ಕ್ರಾಂತಿಯ ವ್ಯವಸ್ಥೆ ನಡೆದಿದೆ. ಮುಂದಿನ ವರ್ಷ ಅಂತಿಮ ಹೋರಾಟ ನಡೆಯಲಿದೆ. ಕಾಂಗ್ರೆಸ್ ಸತ್ಯಾಗ್ರಹ ಆರಂಭಿಸುವುದು. ಅದು ಕುಸಿದು ಬೀಳದಂತೆ ಮಾಡಲು ಜನತೆಯನ್ನು ಎಚ್ಚರಿಸಲು ನಾವು ಕ್ರಾಂತಿಕಾರೀ ಕೆಲಸ ನಡೆಸಬೇಕಾಗಿದೆ."

ಕಿಶೋರನ ಮಾತುಗಳನ್ನು ಕೇಳಿ ಅಜಯನಿಗೆ ಹೊಸ ಉತ್ಸಾಹ ಮೂಡಿತು. ತಾವೆಲ್ಲ ಭಗತ್ ಸಿಂಗ್, ಜತೀಂದ್ರನಾಥ್‌ರಂತೆ ಹೋರಾಟದ ಶಿಖರವೇರಲಾಗದಿದ್ದರೂ ಅವರ ಕೀರ್ತಿಗೆ ತಕ್ಕಂತೆ ದುಡಿಯಬಲ್ಲೆವು ಎಂಬ ವಿಶ್ವಾಸ ಉಂಟಾಯಿತು.

ಕಿಶೋರ್ ಆ ರಾತ್ರಿಯೇ ಲಾಹೋರ್‌ನಿಂದ ಹೊರಟುಹೋದ. ಅಜಯನ ಉತ್ಸಾಹ ಬೆಳೆಯಿತು. ಕಾಂಗ್ರೆಸ್ ಅಧಿವೇಶನವು, ಜನವರಿ ಇಪ್ಪತ್ತಾರನೇ ತೇದಿಯನ್ನು ಸ್ವಾತಂತ್ರ್ಯ ದಿನವಾಗಿ ಆಚರಿಸಬೇಕೆಂದು ದೇಶಕ್ಕೆ ಕರೆ ನೀಡಿತ್ತು. ಅಂದಿನಿಂದಲೇ ಕರನಿರಾಕರಣೆ, ಉಪ್ಪಿನ ಸತ್ಯಾಗ್ರಹ, ಪಿಕೆಟಿಂಗ್‌ಗಳು ದೇಶದ ಮೂಲೆ ಮೂಲೆಗಳಲ್ಲೂ ಆರಂಭವಾಗಬೇಕೆಂದು ಗಾಂಧೀಜಿ ತಿಳಿಸಿದರು.

ದೇಶದ ಸ್ತ್ರೀ ಪುರುಷರಾದಿಯಾಗಿ ಎಲ್ಲರೂ ಭಾಗವಹಿಸಬಹುದಾದ ಕಾರ್ಯಕ್ರಮ ಗಾಂಧೀಜಿಯವರದು. ವೀರರಿಗೂ ಅಲ್ಲಿ ಎಡೆ ಇದೆ; ಜೀವಗಳ್ಳರಿಗೂ ಅವಕಾಶವಿದೆ. ಆದರೆ, ಕ್ರಾಂತಿಯು ವೀರರನ್ನು ಮಾತ್ರ ಕರೆಯುತ್ತದೆ.

ಅಜಯನ ಗುಂಪಿನಲ್ಲೀಗ ಇತರ ಹಲವರು ಸೇರಿಕೊಂಡಿದ್ದರು. ಭಾಗ್‌ರಾಮ್ ಆಗಾಗ ಅತ್ತ ಬರುತ್ತಿದ್ದ. ಲೈಲಾಪುರದಿಂದ ಹನ್ಸ್‌ರಾಜ್ ಎಂಬುವನು ಬಂದು ಸೇರಿಕೊಂಡಿದ್ದ. ಪಂಡಿತ್ ಇಂದ್ರಪಾಲನಿಗೆ ಅವನು ಶಿಷ್ಯನಾದ.

ಈಗ ಪಂಡಿತ್ ರೂಪ್‌ಚಂದ್ ಒಬ್ಬನೇ ಪಾರ್ಟಿಗಾಗಿ ದುಡಿದು ಹಣ ಒದಗಿಸಬೇಕಾಗಿತ್ತು. ಹಣ ಕೂಡಿಸುವ ಇತರ ಯತ್ನಗಳೆಲ್ಲ ವಿಫಲವಾಗಿದ್ದುವು. ಖರ್ಚು ಮಾತ್ರ ಹೆಚ್ಚುತ್ತಲೇ ಇತ್ತು.

ಗವಾಲ್ ಮಂಡಿಯಲ್ಲಿನ ಸಬ್ಜಿ ಮಂಡಿ ಚೌಕದಲ್ಲೊಂದು ಮನೆ. ಕೆಳಗಡೆ ಎಲೆ ಅಡಕೆಯವನ ಅಂಗಡಿ. ಮೇಲೆ ಒಂದು ಕೋಣೆ. ಆದರೆ,

ಪಕ್ಕದ ಎರಡು ಮೂರು ಮನೆಗಳ "ಟೆರೆಸ್" (ಛಾವಣಿ) ಈ ಕೋಣೆಗೆ ಅಂಗಳ ವಾಗಿ ದೊರೆತುದರಿಂದ ಕೋಣೆಯೊಳಗಲ್ಲವಾದರೂ ಹೊರಗಡೆ ವಿಶಾಲ ಸ್ಥಳವಿತ್ತು.

ಇಂದ್ರಪಾಲನದು ದೊಡ್ಡ ಸಂಸಾರ. ತಮ್ಮಂದಿರು, ಇತರ ಹಳ್ಳಿಯ ಹುಡುಗರು, ಅವರಲ್ಲಿದ್ದು ಓದುತ್ತಿದ್ದರು. ಇವರೆಲ್ಲರ ಕಣ್ಣು ತಪ್ಪಿಸಿ ಕ್ರಾಂತಿ ಕಾರೀ ಚಟುವಟಿಕೆ ನಡೆಯಬೇಕಾಗಿತ್ತು. ವಿದ್ಯಾರ್ಥಿಗಳು ಸ್ಕೂಲಿಗೆ ತೆರಳಿ ದಾಗ, ಅಜಯ ಆ ಮಹಡಿಯ ಕೋಣೆಗೆ ಹೋಗಿ, ಬಾಂಬ್ ತಯಾರಿಕೆಯ ಕೆಲಸದಲ್ಲಿ ನಿರತನಾಗುತ್ತಿದ್ದ. ಅಪಾಯವಿದ್ದಷ್ಟು ಆಕರ್ಷಕವಾಗಿರುತ್ತದೆ. ಈ ಪ್ರಯೋಗ ಅಜಯನಿಗೆ ಚೇತೋಹಾರಿಯಾಗಿತ್ತು. ನಿರಾಶನಾಗದೆ ಆತ ಬಿಡು ವಿಲ್ಲದೆ ಶೋಧನೆ ನಡೆಸಿದ. ಬಾಂಬ್ ತಯಾರಿಕೆಗಾಗಿ ದುಡಿದ.

ಅಂತೂ ಕೊನೆಗೊಮ್ಮೆ ಅವನ ಪ್ರಯತ್ನಗಳು ಫಲ ನೀಡಿದುವು. ಆಸ್ಫೋಟಕವನ್ನು ಆತ ಪರೀಕ್ಷಿಸಿ ನೋಡಿದ. ಅದು ಯಶ್‌ಪಾಲ್ ತಂದಿದ್ದ ಮಾದರಿಯಂತೆಯೇ ಇತ್ತು.

ಈಗ ಆಸ್ಫೋಟಕವನ್ನು ಬಾಂಬ್‌ನ ಚಿಪ್ಪಿನೊಳಗೆ ತುಂಬಿ ಪರೀಕ್ಷಿಸುವ ಕಾರ್ಯ ಉಳಿಯಿತು. ಒಂದು ಮಾದರಿ ಬಾಂಬನ್ನು ಅಜಯ ಸಿದ್ಧಪಡಿಸಿದ. ತನ್ನ ಗೆಳೆಯರೊಂದಿಗೆ ನದೀ ದಂಡೆಗೆ ತೆರಳಿ ಅಲ್ಲಿ ಪರೀಕ್ಷೆ ನಡೆಸಿದ. ಬಾಂಬ್ ಅದ್ಭುತವಾದ ಸದ್ದು ಮಾಡಿ ಹೊಲದಲ್ಲಿನ ದನ ಕರುಗಳನ್ನೂ, ಹಕ್ಕಿಗಳನ್ನೂ ಬೆದರಿಸಿ ಓಡಿಸಿತು. ಅಂತೂ ಬಾಂಬ್ ತಯಾರಿಕೆ ಸಫಲವಾಯಿತು! ಅಜಯ ಆನಂದೋತ್ಸಾಹದಿಂದ ಉಬ್ಬಿಹೋದ. ತನ್ನ ಬಾಳಿನ ಮಹೋನ್ನತ ಗುರಿ ಹತ್ತಿರವಾಯಿತೆಂದು ಹರ್ಷಿತನಾದ. ತಮ್ಮ ಕ್ರಾಂತಿಕಾರೀ ತಂಡಕ್ಕೊಂದು ಅಸ್ತಿತ್ವ ದೊರೆಯಿತೆಂದು ಇಂದ್ರಪಾಲ್ ತೃಪ್ತನಾದ.

ಸತ್ಯಾಗ್ರಹ ಚಳುವಳಿಯು ಅತ್ಯಂತ ಬಿರುಸಿನಿಂದ ದೇಶದ ಮೂಲೆ ಮೂಲೆಗಳಲ್ಲೂ ನಡೆಯುತ್ತಿತ್ತು. ಸಹಸ್ರಾರು ಮಂದಿ ಸೆರೆಯಾದರು. ಸತ್ಯಾ ಗ್ರಹಿಗಳು ಪ್ರತಿಭಟಿಸುವುದಿಲ್ಲ ಎಂದು ತಿಳಿದ ಪೋಲೀಸರು ತೀವ್ರ ದಬ್ಬಾಳಿಕೆ, ಹಿಂಸೆಗಳನ್ನು ಆರಂಭಿಸಿದರು. ಜನತೆಯನ್ನು ಹೆದರಿಸಿ ಬಗ್ಗುಬಡಿಯಲು ಭಯೋತ್ಪಾದಕ ಕಾರ್ಯಕ್ರಮ, ಕ್ರೂರ ಹಿಂಸೆಗಳನ್ನು ನಡೆಸಿದರು. ಪೋಲೀಸರ ವಿರುದ್ಧ ಜನತೆಯ ಆಕ್ರೋಶ ಮಿತಿಮೀರಿತು. ಪೋಲೀಸರ ನಾಶವಾಗದೆ

ಸ್ವಾತಂತ್ರ್ಯವಿಲ್ಲ ಎಂಬ ಭಾವನೆ ಹರಡಿತು. ಮಕ್ಕಳೂ ಕೂಡ ಪೋಲೀಸರನ್ನು ಬೈಯ್ಯಲು ಮೊದಲಿಸಲು ತೊಡಗಿ ಲಾಠಿ ಪ್ರಹಾರಗಳಿಗೆ ಬಲಿಯಾದರು. ಅನೇಕ ಕಡೆಗಳಲ್ಲಿ ಗುಂಡು ಹಾರಿಸಲಾಯಿತು. ಸತ್ತವರ ಸಂಖ್ಯೆ ಎಣಿಕೆಗೆ ದೊರೆಯಲಿಲ್ಲ.

ಈ ಪೋಲೀಸರಿಗೆ ಬುದ್ಧಿ ಕಲಿಸಲೇಬೇಕು ಎಂದು ಕ್ರಾಂತಿಕಾರಿಗಳು ನಿರ್ಧರಿಸಿದರು. ಏಟಿನ ರುಚಿ ಈ ಏಟು ಕೊಡುವವರಿಗೆ ಆಗಲೇ ಬೇಕು, ಎಂದ ಹನ್ಸ್‌ರಾಜ್.

"ನಮ್ಮಿಂದ ಸಾಧ್ಯವಾದ ಮಟ್ಟಿಗೆ ನಾವು ಕ್ರಮ ಕೈಗೊಳ್ಳಬೇಕು. ಜನತೆ ತಿರುಗಿ ಬಿದ್ದರೆ ತಾವೂ ಉಳಿಯುವುದಿಲ್ಲ ಎಂಬ ಭೀತಿ ಪೋಲೀಸರಲ್ಲಿ ಮೂಡ ಬೇಕು," ಎಂದ ಭಾಗ್‌ರಾಮ್.

"ಜನತೆಗೂ ನಮ್ಮ ಬಗೆಗೆ ವಿಶ್ವಾಸ ಮೂಡಿದಂತಾಗುತ್ತದೆ. ಆದರೆ, ಪೋಲೀಸರನ್ನು ಕೊಲ್ಲುವುದು ನಮ್ಮ ಬಯಕೆಯಲ್ಲ. ಅವರು ಅನ್ನಕ್ಕಾಗಿ ದುಡಿವ ಗುಲಾಮರು ಮಾತ್ರ," ಎಂದ ಅಜಯ.

"ಆದರೂ, ಕೆಲವು ಪೋಲೀಸರು ಸಾಯುವ ಭೀತಿ ಇದೆ," ಎಂದ ಹನ್ಸ್‌ರಾಜ್.

"ನಮ್ಮ ಪಾರ್ಟಿ ಇನ್ನೂ ಕಾರ್ಯಾರಂಭ ಮಾಡಿಲ್ಲ. ಈಗಲೇ ಸುಳಿವು ಸಿಕ್ಕರೆ, ಕೆಲವೇ ದಿನಗಳಲ್ಲಿ ನಾವೆಲ್ಲರೂ ಸೆರೆಯಾದೇವು. ಪಾರ್ಟಿಯೇ ನಾಶ ವಾದೀತು. ಆದುದರಿಂದ ಈಗಲೇ ಈ ಕ್ರಮ ಉಚಿತವಲ್ಲ," ಎಂದ ಭಾಗ್‌ರಾಮ್.

ಭಾಗ್‌ರಾಮ್ ಆ ತಂಡದಲ್ಲೆಲ್ಲ ಹೆಚ್ಚು ಅನುಭವವಿದ್ದವನು. ಅವನ ಮಾತಿಗೆ ಎಲ್ಲರೂ ಗೌರವ ಕೊಡುತ್ತಿದ್ದರು. ಪರಿಣಾಮವಾಗಿ ಈ ಯೋಜನೆ ಬಗೆಗೆ ಚರ್ಚೆ ಮುಂದುವರಿಯಿತು. ಅಪಾಯವಿಲ್ಲದ ಬಾಂಬ್ ತಯಾರಿಸಲು ನಿರ್ಧರಿಸಲಾಯಿತು. ಮಾದರಿಯಾಗಿ ಡಬ್ಬದೊಳಗೆ ಆಸ್ಫೋಟನ ತುಂಬಿಸಿ ಬಾಂಬ್ ತಯಾರಿಸಿ ಅಜಯ ಪರೀಕ್ಷಿಸಿದ. ಅದು ಉಚಿತವೆಂದೂ ಇತರರಿಗೆ ಅನಿಸಿತು.

ಪಂಜಾಬ್ ಪ್ರಾಂತ್ಯದ ವಿವಿಧ ಕಡೆಗಳಲ್ಲಿ ಒಂದೇ ದಿನ ಇಂಥ ಬಾಂಬ್ ಸ್ಫೋಟಿಸಬೇಕೆಂದು ನಿರ್ಧರಿಸಲಾಯಿತು. ಲಾಹೋರ್, ಅಮೃತ್‌ಸರ್,

ಲೈಲಾಪುರ್, ಗಜ್ರನ್‌ವಾಲಾ, ಶೇಖಪುರ ಮತ್ತು ರಾವಲ್‌ಪಿಂಡಿಗಳಲ್ಲಿ ನಿರ್ದಿಷ್ಟವಾದ ದಿನ ಪೋಲೀಸರ ಬಳಿಯಲ್ಲೇ ಬಾಂಬ್‌ಗಳು ಸಿಡಿದುವು.

ಅದು ಅಜಯನ ತಂಡ ಅಸ್ತಿತ್ವಕ್ಕೆ ಬಂದ ಸುವರ್ಣ ದಿನವಾಯಿತು.

ಈ ಘಟನೆ ಪೋಲೀಸರಲ್ಲೂ ಭೀತಿ ಮೂಡಿಸಿತು. ತಮ್ಮ ಹಿಂಸಾಕೃತ್ಯಗಳಿಂದ ಜನ ರೋಸಿ ಹೋಗಿದ್ದಾರೆಂದು ಅವರಿಗೂ ಮನವರಿಕೆಯಾಯಿತು. ಜನತೆಯೂ ಈ ಆಸ್ಫೋಟನೆಗಳಿಂದಾಗಿ ಧೈರ್ಯ ತಂದುಕೊಂಡರು. ಅವರಲ್ಲಿನ ನಿರಾಶೆ, ಅಧೈರ್ಯ, ಭೀತಿ ಕೊಂಚ ಕಡಮೆಯಾದುವು. ಸತ್ಯಾಗ್ರಹದ ಉತ್ಸಾಹ ಕುಗ್ಗುತ್ತಿದೆ ಎನಿಸಿದಾಗ ಈ ಘಟನೆ ನಡೆದು ಹೊಸ ಹುರುಪನ್ನು ಹುಟ್ಟಿಸಿತು.



೧೮

ದೇಶದಾದ್ಯಂತ ಕ್ರಾಂತಿಯ ಸನ್ನಾಹ, ಸತ್ಯಾಗ್ರಹ, ಕರನಿರಾಕರಣೆ, ಪೋಲೀಸರ ದಬ್ಬಾಳಿಕೆ ಸಾಗುತ್ತಿದ್ದಂತೆ, ಲಾಹೋರಿನಲ್ಲಿ ಕ್ರಾಂತಿಕಾರಿಗಳ ವಿಚಾರಣೆಯ ನಾಟಕ ನಡೆಯುತ್ತಿತ್ತು.

ಶಾಸನ ಸಭೆಯ ಸದಸ್ಯರ ಅಭಿಪ್ರಾಯವನ್ನು ಧಿಕ್ಕರಿಸಿ, ವೈಸ್ರಾಯಿ ಲಾಹೋರ್ ಖಟ್ಲೆಯ ವಿಚಾರಣೆಯ ವಿಶೇಷ ಆಜ್ಞೆ ಹೊರಡಿಸಿದ್ದರು. ಆಪಾದಿತರ ಹಾಜರಿಲ್ಲದೆಯೇ ಕೋರ್ಟು ವಿಚಾರಣೆಯನ್ನು ಆರಂಭಿಸಿತ್ತು. ಈ ಆಜ್ಞೆಯಂತೆ, ಲಾಯರುಗಳು, ಆಪಾದಿತರು, ಆಪಾದಿತರ ಕಡೆಯ ಸಾಕ್ಷಿಗಳು ಯಾರೂ ಕೋರ್ಟಿನಲ್ಲಿರಬೇಕಾದ ಅಗತ್ಯವಿರಲಿಲ್ಲ. ಇಂಥ ವಿಚಾರಣೆ ನಡೆಸಿ ಮರಣದಂಡನೆ ವಿಧಿಸುವ ಅಧಿಕಾರವೂ ನ್ಯಾಯಾಧೀಶರಿಗೆ ಲಭಿಸಿತ್ತು. ಅಷ್ಟೇ ಅಲ್ಲ. ಈ ತೀರ್ಪಿನ ಮೇಲೆ ಅಪೀಲು ಮಾಡುವ ಅಧಿಕಾರವೂ ಆಪಾದಿತರಿಗಿರಲಿಲ್ಲ.

ಕ್ರಾಂತಿಕಾರರು ತಮ್ಮ ವಿಚಾರಣೆಯನ್ನು ರಾಜಕೀಯ ಪ್ರಚಾರಕ್ಕಾಗಿ ಬಳಸದಂತೆ ತಡೆಯುವುದೇ ಸರ್ಕಾರದ ಉದ್ದೇಶವಾಗಿತ್ತು. ಜೇಲಿನಲ್ಲಿ ನಡೆದ ಅನ್ನಸತ್ಯಾಗ್ರಹದಿಂದಾಗಿ ವಿಚಾರಣೆ ನಡೆಸುವುದೇ ಅಸಾಧ್ಯವೆಂಬ ಪರಿಸ್ಥಿತಿ ತಲೆದೋರಿತ್ತು. ಯಾವುದಾದರೊಂದು ನೆವದಿಂದ, ವಿಚಾರಣೆಯ ದಿನ ಯಾರಾದರೊಬ್ಬ ಕೋರ್ಟಿಗೆ ಬಾರದೆ ತಪ್ಪಿಸಿಕೊಳ್ಳುತ್ತಿದ್ದರು. ಜತೆಗೆ, ಇನ್ನೂ ಹಲವರು ಆಪಾದಿತರ ಸೆರೆ ನಡೆದಿರಲಿಲ್ಲ. ಆರೋಪಿಗಳೆನಿಸಿದ ಇಬ್ಬರು ತಲೆಮರೆಸಿಕೊಂಡಿದ್ದರು.

ಕೋರ್ಟಿಗೆ ಹಾಜರಾದೊಡನೆ ಆಪಾದಿತರು ಮೊದಲು ಕೂಗುತ್ತಿದ್ದ ಘೋಷಣೆ : "ಇಂಕ್ವಿಲಾಬ್ ಜಿಂದಾಬಾದ್ !"

ಇದಲ್ಲದೆ ಇಡೀ ಮೊಕದ್ದಮೆಯೇ ಮುರಿದು ಬೀಳುವ ಪರಿಸ್ಥಿತಿ ಒದಗಿತ್ತು. ದೇಶದಾದ್ಯಂತ ಜನತೆ ಈ ಮೊಕದ್ದಮೆಯಿಂದಾಗಿ ರೋಷಗೊಂಡಿದ್ದರು. ಸರ್ಕಾರದ ಪರವಾದ ಸಾಕ್ಷಿಗಳೆಲ್ಲ ತಿರುಗಿಬಿದ್ದರು.

ಮತ್ತೊಮ್ಮೆ ವಿಚಾರಣೆ ಆರಂಭವಾದಾಗ ಹೋರಾಟಕ್ಕೆ ನ್ಯಾಯಾಧೀಶರೇ ನಾಂದಿ ಹಾಕಿದರು.

ಆಪಾದಿತರಿಗೆಲ್ಲ ಘೋಷಣೆ ಕೂಗಬಾರದೆಂದು ಮ್ಯಾಜಿಸ್ಟ್ರೇಟರು ಆಜ್ಞೆ ಮಾಡಿದರು. ಆಪಾದಿತರು ಜಗ್ಗಲಿಲ್ಲ. ಅವರಿಗೆ ಬೇಡಿ ತೊಡಿಸಲು ಆಜ್ಞೆಯಾಯಿತು. ಕ್ರಾಂತಿಕಾರಿಗಳು ವಿರೋಧಿಸಿದರು. ಪೋಲೀಸರು ಬಲ ಪ್ರಯೋಗ ನಡೆಸಿ, ಕೋರ್ಟಿನೊಳಗೇ ಹೊಡೆದಾಟವಾಯಿತು. ಲಾಯರ್‌ಗಳು, ಪ್ರೇಕ್ಷಕರು ಹಾಗೂ ನ್ಯಾಯಾಧೀಶರುಗಳ ಇದಿರಿನಲ್ಲೇ ಅಸಂಖ್ಯಾತ ಮಂದಿ ಪೋಲೀಸರು ಕ್ರಾಂತಿಕಾರರ ಮೇಲೆ ಬಿದ್ದು, ಲಾಠಿ ಪ್ರಹಾರ ನಡೆಸಿದರು. ಕ್ರಾಂತಿಕಾರರೂ ಪ್ರತಿಭಟಿಸಿ ಹೋರಾಡಿದರಾದರೂ ಅವರ ಸಂಖ್ಯೆ ಅಲ್ಪ. ತಲೆ, ಎದೆ, ಬೆನ್ನು, ಕಾಲು ಎಲ್ಲೆಡೆಗೂ ಲಾಠಿ ಪ್ರಹಾರಗಳು ಬಿದ್ದುವು. ತೀವ್ರ ಗಾಯಗೊಂಡು, ರಕ್ತ ಸೋರುತ್ತಿದ್ದಂತೆ ಆಪಾದಿತರನ್ನು ಜೇಲಿಗೆ ಸಾಗಿಸಲಾಯಿತು. ಕೆಲವಾರು ದಿನ ವಿಚಾರಣೆ ನಡೆಯಲಾಗಲಿಲ್ಲ.

ಕೋರ್ಟಿನಲ್ಲಾದ ದಮನ ನೀತಿಯನ್ನು ಆಪಾದಿತರು ವಿರೋಧಿಸಿದರು. ಘೋಷಣೆ ವಿರುದ್ಧ ಆಜ್ಞೆ ಹಿಂತೆಗೆದುಕೊಳ್ಳಬೇಕೆಂದರು. ವಿಶೇಷ ನ್ಯಾಯಾಲಯದ ವಿಚಾರಣಾ ಸಮಿತಿಯಲ್ಲಿದ್ದ ಭಾರತೀಯ ಸದಸ್ಯರು ಒಬ್ಬರೇ. ಅವರು ನ್ಯಾಯಮೂರ್ತಿ ಆಘಾ ಹೈದರ್. ಬೇಡಿ ತೊಡಿಸಲು ಹಾಗೂ ಬಲ ಪ್ರಯೋಗದ ಆಜ್ಞೆ ಮಾಡಲು ತಾವು ಅನುಮತಿ ನೀಡಿಲ್ಲವೆಂದು ಅವರು ಹೇಳಿಕೆ ಇತ್ತರು. ಪರಿಣಾಮ ತಿಳಿದೇ ಇದೆ. ಕೆಲ ದಿನಗಳಲ್ಲೇ ವಿಚಾರಣಾ ಸಮಿತಿ ಪುನರ್ಘಟಿತವಾಯಿತು. ನ್ಯಾಯಮೂರ್ತಿ ಹೈದರ್‌ರವರ ಹೆಸರು ಅಲ್ಲಿರಲಿಲ್ಲ.

ಅಂತೂ ಆಪಾದಿತರ ಹಾಜರಾತಿ ಇಲ್ಲದೆಯೇ ವಿಚಾರಣೆ ಮುಂದುವರಿಯಿತು.

ಘಟನೆ, ಘರ್ಷಣೆ, ವಿಚಾರಣೆಯ ನಾಟಕ ಲಾಹೋರಿನಲ್ಲಿ ನಡೆದರೂ, ಅದರ ಜ್ವಾಲೆ ದೇಶದ ಎಲ್ಲೆಡೆಗೂ ವ್ಯಾಪಿಸಿತು. ಪೋಲೀಸರ ದಬ್ಬಾಳಿಕೆ ಬಲವಾದಷ್ಟೂ ಜನತೆಯ ಪ್ರತಿಕ್ರಿಯೆಯೂ ಪ್ರಖರವಾಯಿತು. ಬಂಗಾಲದ ಕ್ರಾಂತಿಕಾರರು ಪ್ರತಿ ಧಾಳಿ ಆರಂಭಿಸಿದರು.

ಮೇಜರ್ ಸೂರ್ಯಸೇನನ ನಾಯಕತ್ವದಲ್ಲಿ ಸುಮಾರು ೧೨೫ ಮಂದಿ ಕ್ರಾಂತಿಕಾರರು, ಚಿತಗಾಂಗ್‌ನ ಶಸ್ತ್ರಾಗಾರದ ಮೇಲೆ ಧಾಳಿ ನಡೆಸಿದರು. ಕ್ಯಾಪ್ಟನ್ ಚಟರ್ಜಿ ಎಂಬವನ ಮುಂದಾಳತ್ವದಲ್ಲಿ ಧಾಳಿಯಾಯಿತು. ಒಂದು ಗುಂಪು ಟೆಲಿಫೋನ್ ಕೇಂದ್ರ ಆಕ್ರಮಿಸಿ, ಡಾಕಾ ಮತ್ತು ಕಲ್ಕತ್ತೆಗಳ ಸಂಪರ್ಕ ಕಡಿಯಿತು. ಮತ್ತೊಂದು ತಂಡ ರೈಲು ಸಂಪರ್ಕ ಕೆಡಿಸಿತು. ಇನ್ನೊಂದು ತಂಡ ಅಧಿಕಾರಿಗಳ ಕೊಲೆ ನಡೆಸಲು ಯೂರೋಪಿಯನರ ಕ್ಲಬ್‌ನ ಮೇಲೆ ಧಾಳಿ ಮಾಡಿತು. ಸರ್ಕಾರಿ ಮದ್ದುಗುಂಡುಗಳ ಕೇಂದ್ರದಿಂದ ಅಸಂಖ್ಯಾತ ರೈಫಲ್‌ಗಳು, ಪಿಸ್ತೂಲುಗಳು, ರಿವಾಲ್ವರುಗಳು, ಮದ್ದುಗುಂಡುಗಳನ್ನು ಅಪಹರಿಸಲಾಯಿತು. ಸೇನೆಯ ಗೂರ್ಖಾ ದಳ ಕ್ರಾಂತಿಕಾರರನ್ನು ಬೆನ್ನಟ್ಟಿತು. ಅವರೂ ಪ್ರತಿಭಟಿಸಿ ಹೋರಾಡಿದರು. ಸುಮಾರು ಮೂವತ್ತು ಮಂದಿ ಕ್ರಾಂತಿಕಾರರು ಹತರಾದರು. ಮಿಲಿಟರಿಯವರಲ್ಲೂ ಐವತ್ತು ಮಂದಿ ಅಳಿದರು.

ಅದೇ ಏಪ್ರಿಲ್ ತಿಂಗಳಲ್ಲಿ ಇನ್ನೊಂದು ಘರ್ಷಣೆ ಮಿಲಿಟರಿಯವರೊಡನೆ ನಡೆದು ಹನ್ನೆರಡು ಮಂದಿ ಕ್ರಾಂತಿಕಾರರು ಹತರಾದರು.

ಮೇ ತಿಂಗಳಲ್ಲಿ ಮತ್ತೊಂದು ತಿಕ್ಕಾಟ ನಡೆದು ನಾಲ್ಕು ಮಂದಿಯ ಬಲಿದಾನವಾಯಿತು.

ಚಿತಗಾಂಗ್ ಶಸ್ತ್ರಾಗಾರದ ಮೇಲಿನ ಧಾಳಿ ಬ್ರಿಟಿಷ್ ಸರ್ಕಾರವನ್ನು ನಡುಗಿಸಿತು. ಅದು ಎಲ್ಲ ರೀತಿಯಿಂದಲೂ ಅಂತಿಮ ಹೋರಾಟಕ್ಕೆ ಸಿದ್ಧವಾಯಿತು. ವಿಶೇಷ ನ್ಯಾಯಾಲಯದ ಮೂಲಕ ವಿಚಾರಣೆಯ ನಾಟಕ ಆರಂಭಿಸಿತು. ಆದರೆ ಸೆಪ್ಟೆಂಬರ್‌ನಲ್ಲಿ ವಿಚಾರಣೆ ಆರಂಭವಾದ ಒಂದೇ ತಿಂಗಳಲ್ಲಿ ಸೆರೆಮನೆಗಳ ಇನ್ಸ್‌ಪೆಕ್ಟರ್-ಜನರಲ್ ಸಿಂಪ್ಸನ್‌ನನ್ನು ವಿನಯಕೃಷ್ಣ ಬೋಸ್, ಸುಧೀರ್‌ಕುಮಾರ್‌ಗುಪ್ತ ಮತ್ತು ದಿನೇಶ್‌ಗುಪ್ತ ಗುಂಡಿಟ್ಟು ಕೊಂದರು.

ಹೆಜ್ಜೆ ಹೆಜ್ಜೆಗೂ ಕ್ರಾಂತಿಕಾರರಲ್ಲಿ ನೂತನ ಉತ್ಸಾಹ, ಆಶಾಭಾವನೆ ಬೆಳೆಯಲಾರಂಭಿಸಿತು. ಸಿಂಪ್ಸನ್ ಕೊಲೆಯಾದ ಕೆಲವು ದಿನಗಳಲ್ಲೇ ಶಾಂತಾ ಘೋಷ್ ಮತ್ತು ಸುಮತಿ ಚೌಧುರಿ ಎಂಬ ಶಾಲಾ ಬಾಲಕಿಯರು ತಿಪ್ಪೆರಾ ಜಿಲ್ಲಾ ಅಧಿಕಾರಿಯನ್ನು ಗುಂಡಿಟ್ಟು ಕೊಂದರು.

ತೀವ್ರ ದಬ್ಬಾಳಿಕೆ, ಅಮಾನುಷ ಹಿಂಸೆ, ಕಠಿಣ ಶಿಕ್ಷೆಗಳಿಂದ ಸರ್ಕಾರ ಉತ್ತರ ನೀಡಿತು.

ಕ್ರಾಂತಿಕಾರಿಗಳ ಚಟುವಟಿಕೆ ಬೆಳೆದಷ್ಟೂ ಸರ್ಕಾರಕ್ಕೆ ಮಾತ್ರವೇ ಅಲ್ಲ ಕಾಂಗ್ರೆಸ್ ನಾಯಕರಲ್ಲೂ ಭೀತಿ ಮೂಡಿತು. ದೇಶದ ಯುವ ಜನಾಂಗ ಶಾಂತಿಯ ಹಾದಿಯನ್ನು ಬಿಟ್ಟು ಹಿಂಸೆಯ ಹಾದಿ ತುಳಿಯುತ್ತಿದೆ ಎಂಬ ಸಂದೇಹ ಬೆಳೆಯಿತು. ಸತ್ಯಾಗ್ರಹ ಚಳುವಳಿಯನ್ನು ನಿಲ್ಲಿಸುವ ಯೋಚನೆಯನ್ನು ಗಾಂಧೀಜಿ ಮಾಡಿದರು. ಹಿಂಸಾಮಾರ್ಗ ಉಚಿತವಲ್ಲವೆಂದೂ ಪದೇ ಪದೇ ಹೇಳಿದರು. ಸರ್ಕಾರವೂ ಆಂತರಿಕವಾಗಿ ಸಂಧಾನಕ್ಕೆ ಸಿದ್ಧವಾಗಿತ್ತು. ಸಂಧಾನ ನಡೆಸದೆ ಸತ್ಯಾಗ್ರಹ ಅಸ್ತ್ರವನ್ನು ಹಿಂತೆಗೆದುಕೊಳ್ಳಲು ಕಾಂಗ್ರೆಸ್ ನಾಯಕರು ಸಿದ್ಧವಿರಲಿಲ್ಲ.

ಈ ವಾತಾವರಣದಲ್ಲಿ ಸಾಮ್ರಾಜ್ಯಶಾಹಿ ತನ್ನ ನಿಜವಾದ ರೂಪವನ್ನು ಪ್ರದರ್ಶಿಸಿತು. ಎಂದಿದ್ದರೂ ಬ್ರಿಟಿಷ್ ಸರ್ಕಾರವನ್ನು ನಂಬಲು ಸಾಧ್ಯವಿಲ್ಲ ಎಂಬ ಖಚಿತ ಭಾವನೆ ಜನತೆಯಲ್ಲಿ ಉಂಟಾಯಿತು.

ಅಕ್ಟೋಬರ್ ತಿಂಗಳಲ್ಲಿ, ಗಾಂಧೀಜಿಯ ಜನ್ಮದಿನವಾದ ಐದು ದಿನಗಳಲ್ಲಿ ಅವರ ಶಾಂತಿ, ಸತ್ಯ, ಅಹಿಂಸೆಗಳನ್ನೇ ಕೆಣಕುವಂತೆ, ಲಾಹೋರ್ ಮೊಖದ್ದಮೆಯ ತೀರ್ಪು ಪ್ರಕಟವಾಯಿತು.

ಭಗತ್‌ಸಿಂಗ್, ರಾಜಗುರು ಮತ್ತು ಶುಕದೇವ್ ಅವರಿಗೆ ಮರಣ ದಂಡನೆ ನೀಡಲಾಯಿತು.

ಇತರ ಏಳು ಮಂದಿಗೆ ಜೀವಾವಧಿ ಶಿಕ್ಷೆ, ಇತರರಿಗೆ ವಿವಿಧ ಹಂತದ ದೀರ್ಘಕಾಲಾವಧಿಯ ಸೆರೆಮನೆ ವಾಸ ಘೋಷಿಸಲಾಯಿತು.

"ಭಗತ್‌ಸಿಂಗ್ ಜಿಂದಾಬಾದ್!" ಎಂಬ ಘೋಷಣೆ ದೇಶದ ಎಲ್ಲ ಮೂಲೆಗಳಲ್ಲೂ ಪ್ರತಿಧ್ವನಿಗೊಟ್ಟಿತು. ಪ್ರತಿಯೊಬ್ಬನ ಹೃದಯವೂ ಹೆಮ್ಮೆಯಿಂದ ಉಬ್ಬಿತು. ದೇಶದ ಯುವಜನಾಂಗ ಇದೀಗ ತಲೆ ಎತ್ತಿ ನಿಂತಿತು. ದೇಶದ ಯಾವ ಮೂಲೆಗೆ ತೆರಳಿದರೂ, ಅಲ್ಲಿ ಭಗತ್‌ಸಿಂಗ್, ದೇಶಭಕ್ತರ ಆರಾಧ್ಯ ದೇವತೆಯಾಗಿದ್ದ.

ಕ್ರಾಂತಿಕಾರೀ ಚಟುವಟಿಕೆಯ ಅಗ್ನಿಕುಂಡದಲ್ಲಿ ಬೆಂದು ಉಕ್ಕಿನಂತಾದ ಅಜಯನೂ ಈ ಮೂವರು ವೀರರನ್ನು ನೆನೆದು ಮಗುವಿನಂತೆ ಅತ್ತುಬಿಟ್ಟ.

ಪಂಡಿತ್ ಇಂದ್ರಪಾಲ್ ಈಗ ಕೃಷ್ಣನಗರದಲ್ಲಿ ಬೇರೊಂದು ಮನೆ ಗೊತ್ತು ಮಾಡಿದ. ಇಲ್ಲಿ ಬಾಂಬ್ ತಯಾರಿಕೆಯ ಕೆಲಸ ಮುಂದುವರಿಯಿತು. ಭಗತ್‌ಸಿಂಗ್ ಮತ್ತು ಇತರರನ್ನು ಸೆರೆಯಿಂದ ಬಿಡಿಸುವ ಯೋಜನೆಯನ್ನು ಯಶ್‌ಪಾಲ್ ಮುಂದಿಟ್ಟನು. ಅದಕ್ಕಾಗಿ ಲಾಹೋರಿನಲ್ಲೇ ಕೆಲವು ದಿನ ಇರುವ ನಿರ್ಧಾರ ಮಾಡಿದನು. ಹೊಸ ಮನೆಯಲ್ಲಿ ಅವರಿದ್ದರು.

ಭಗವತೀ ಚರಣ್, ಚಂದ್ರಶೇಖರ ಆಜಾದ್, ಲೇಖ್‌ರಾಮ್ ಮತ್ತಿತರ ಕ್ರಾಂತಿಕಾರಿಗಳು ಲಾಹೋರ್‌ಗೆ ಬಂದು ಅಜಯನ ತಂಡವನ್ನೀಗ ಭೇಟಿಯಾಗ ತೊಡಗಿದರು. ಭಾಗ್‌ರಾಮ್, ಹನ್ಸ್‌ರಾಜ್ ಮತ್ತು ಇಂದ್ರಪಾಲ್‌ರವರೂ ಅವರ ಜೊತೆಗೂಡಿದರು. ಅವರ ತಂಡ ಬೆಳೆದಂತೆ ಭವಾಲ್‌ಪುರ್ ರಸ್ತೆಯಲ್ಲಿ ಇನ್ನೊಂದು ಮನೆಯನ್ನು ಬಾಡಿಗೆಗೆ ಹಿಡಿಯಲಾಯಿತು. ಬಾಂಬ್ ಕಾರ್ಖಾನೆ ಅಲ್ಲಿಗೆ ವರ್ಗಾಯಿಸಲ್ಪಟ್ಟಿತು. ಕ್ರಾಂತಿಕಾರಿ ಮಹಾನಾಯಕರ ನಿಕಟ ಸಂಪರ್ಕದಿಂದ ಅಜಯ ದೂರವಾದರೂ, ಅವನಿಗೆ ಪ್ರಿಯವಾದ ಬಾಂಬ್ ತಯಾರಿಕೆ ತೀರ ಹತ್ತಿರವಾಗಿದ್ದು, ಅದಕ್ಕಾಗಿ ನಿರಂತರ ದುಡಿಯುವುದು ಸಾಧ್ಯವಾಯಿತು.

ಅತ್ಯಂತ ಬಲವಾದ ಬಾಂಬ್‌ಗಳನ್ನು ತಯಾರಿಸುವುದರಲ್ಲಿ ಅಜಯ ನಿರತನಾದ. ಭಗತ್‌ಸಿಂಗ್ ಮತ್ತು ಗೆಳೆಯರನ್ನು ಬಿಡುಗಡೆ ಮಾಡಲು ಯುವಕರ ಸೇನೆಯೇ ಸಿದ್ಧವಾಯಿತು. ಇದುವರೆಗಿನ ಎಲ್ಲ ಹೋರಾಟಗಳನ್ನು ಮೀರಿಸುವ ಹಂತದಲ್ಲಿ ಯತ್ನ ನಡೆಸಲು ಗೊತ್ತಾಯಿತು. ಈ ಮಧ್ಯೆ ಇನ್ನೊಂದು ದುರಂತ ಸಂಭವಿಸಿತು.

ಹೊಸದಾಗಿ ಸಿದ್ಧವಾದ ಬಾಂಬ್‌ಗಳನ್ನು ಪರೀಕ್ಷಿಸಲು ಭಗವತೀ ಚರಣ್ ನಿರ್ಧರಿಸಿದ. ಕೆಲವು ಬಾಂಬ್‌ಗಳನ್ನು ಹಿಡಿದುಕೊಂಡು, ಇತರ ಕೆಲವ ರೊಂದಿಗೆ ರಾವೀ ನದೀ ತೀರಕ್ಕೆ ತೆರಳಿದ. ಅಲ್ಲಿನ ಕಾಡಿನಲ್ಲಿ ಪರೀಕ್ಷೆ ನಡೆಸು ವಾಗ, ಬಾಂಬ್ ಭಗವತಿಯ ಕೈಯಲ್ಲೇ ಸ್ಫೋಟಗೊಂಡು, ಆತ ನುಚ್ಚು ನೂರಾದ.

ಭಗತ್‌ಸಿಂಗ್‌ನ ರಕ್ಷಣೆಯ ಯೋಜನೆಗೆ ವಜ್ರಾಘಾತವಾದಂತಾಯಿತು. ಕೆಲವೇ ದಿನಗಳ ಅನಂತರ, ಭವಾಲ್‌ಪುರ ರಸ್ತೆಯ ಮನೆಯಲ್ಲಿ ಕಪಾಟಿ ನಲ್ಲಿದ್ದ ಹಲವಾರು ಬಾಂಬ್‌ಗಳು ತಾವಾಗಿಯೇ ಸ್ಫೋಟಗೊಂಡು

ಇಡೀ ಮನೆಯೇ ನಡುಗಿತು. ಅದೃಷ್ಟವಶಾತ್ ಕ್ರಾಂತಿಕಾರಿಗಳು ಮನೆಯೊಳಗಿರಲಿಲ್ಲವಾಗಿ ಯಾರಿಗೂ ಅಪಾಯವಾಗಲಿಲ್ಲ. ಅವರು ಒಡನೆಯೇ ಅಲ್ಲಿಂದ ಮಾಯವಾಗಬೇಕಾಯಿತು. ಪೋಲೀಸರ ಕಣ್ಣು ತಪ್ಪಿಸಿಕೊಳ್ಳುವುದೇ ಅವರಿಗೆ ಕೆಲಸವಾಯಿತು.

ಈಗ ಗೋಪಾಲ್ ಮಂಡಿಯಲ್ಲಿನ ಮನೆಯೇ ಅವರ ಕೇಂದ್ರವಾಯಿತು. ಮನೆ ದೊಡ್ಡದಾಗಿದ್ದರೂ ಇಂದ್ರಪಾಲನ ಸಂಸಾರವೂ ದೊಡ್ಡದಾಗಿಯೇ ಇತ್ತು. ಅವರ ಸಂಸಾರದ ಇತರರಿಗೆ ಯಾವುದೇ ರಾಜಕೀಯ ಗಂಧವೂ ಇರಲಿಲ್ಲ. ಅಜಯ ಮತ್ತು ಹನ್ಸ್‌ರಾಜ್ ಪ್ರತ್ಯೇಕವಾದೊಂದು ಕೋಣೆಯಲ್ಲಿ ತಮ್ಮ ಪ್ರಯೋಗ ನಡೆಸುತ್ತಿದ್ದರು.

ಅಜಯನ ಗೆಳೆಯನೊಬ್ಬನ ಕಿರಾಣಿ ಅಂಗಡಿಯೊಂದಿತ್ತು. ಆತನಿಗೆ ರಾಜಕೀಯದಲ್ಲಿ ಆಸಕ್ತಿಯಿರಲಿಲ್ಲವಾದರೂ, ಅಜಯನ ಬಗೆಗೆ ಅಪಾರ ಪ್ರೀತಿ ಇತ್ತು. ಅವನ ಅಂಗಡಿಯೇ ಅಜಯನ ಪತ್ರ ವ್ಯವಹಾರದ ವಿಳಾಸವಾಗಿತ್ತು.

ಅದೊಂದು ದಿನ ಅಜಯನಿಗೆಂದು ಬರೆದ ಪತ್ರವೊಂದು ಆತನಿಗೆ ದೊರೆಯಿತು. ಪತ್ರ ಬಂದು ಕೆಲವಾರು ದಿನಗಳಾಗಿದ್ದರೂ ಅದು ಅಜಯನಿಗೆ ತಲುಪಿರಲಿಲ್ಲ. ಎಂದೋ ಆತ ಅಂಗಡಿಗೆ ಬರುತ್ತಿದ್ದ. ಹಾಗೆ ಬಂದಾಗ ಅಂಗಡಿಯವನಿಗೆ ಪತ್ರದ ನೆನಪಾಗಿರಲಿಲ್ಲ. ಈಗ ಅದು ದೊರೆಯಿತು. ಅಜಯ ಅದನ್ನೆತ್ತಿಕೊಂಡು ನೋಡಿದ. ಭಯಂಕರವಾದ ಸುದ್ದಿ ಅದರಲ್ಲಿತ್ತು.

ಪತ್ರದಲ್ಲಿದ್ದುದು ನಾಲ್ಕೇ ಸಾಲುಗಳು. ಆದರೆ, ಅವು ಅಜಯನ ಹೃದಯಾಂತರಾಳವನ್ನು ಭೇದಿಸಿದುವು.

ಪೂರ್ವ ಬಂಗಾಳದ ಕ್ರಾಂತಿಕಾರರೊಡನೆ ದುಡಿಯುತ್ತಿದ್ದ ಕಿಶೋರ್ ಮೃತನಾದ ಸುದ್ದಿ ಅಲ್ಲಿತ್ತು. ಬರೆದವರ ಪತ್ತೆ ಇರಲಿಲ್ಲ. ಯಾರೋ ಆತನ ಬಗೆಗೆ ಅರಿತ ಗೆಳೆಯರೇ ಬರೆದಿರಬೇಕು.

ಅಜಯ ತನ್ನ ಕಣ್ಣುಗಳನ್ನೇ ತಾನು ನಂಬದಾದ. ಅವನ ತಲೆ ತಿರುಗಿದಂತಾಯಿತು. ಅಲ್ಲೇ ಅಂಗಡಿಯಲ್ಲಿ ಕುಸಿದು ಕುಳಿತ. ಅವನ ಕಣ್ಣುಗಳಿಂದ ನೀರು ಉಕ್ಕಿ ಹರಿಯಿತು.

ದೇಶದ ಬಿಡುಗಡೆಗಾಗಿ ಇಬ್ಬರೂ ಸರ್ವಸ್ವವನ್ನೂ ತ್ಯಾಗಮಾಡಿ, ಬಂಧು ಬಳಗವನ್ನು ಬಿಟ್ಟು, ತಮ್ಮ ಬಾಳಿನ ಪ್ರತಿ ನಿಮಿಷವೂ ದುಡಿಯುತ್ತ, ಬಂದಿದ್ದರು. ಕಿಶೋರ್ ಬ್ರಿಟಿಷ್ ಸಾಮ್ರಾಜ್ಯಶಾಹಿ ಶಕ್ತಿಯನ್ನು ಇದಿರಿಸಿ ಹೋರಾಡಿ ಈಗ ಆತ್ಮಾರ್ಪಣೆ ನಡೆಸಿದ್ದ. ಅಜಯನ ಪ್ರಯಾಣ ಇನ್ನೂ ನಡೆದಿದೆ. ಗುರಿ ಸಾಧಿಸಬೇಕು. ದಾರಿ ಯಾವುದೋ ? ಆದರೂ, ಸರಿಯಾದ ದಾರಿಯಲ್ಲಿದ್ದೇನೆ ಎಂಬ ವಿಶ್ವಾಸ ಮೂಡಿದೆ. ಗುರಿ ಮುಟ್ಟುವಲ್ಲಿ ಮಾತ್ರ ಅಡೆತಡೆಗಳು ಇದಿರಾಗುತ್ತಲೇ ಇವೆ.

ಸ್ವಾತಂತ್ರ್ಯ ಹೋರಾಟದ ಘಟನೆಗಳ ಬಗೆಗೆ ಓದಿದಾಗಲೆಲ್ಲ ತನಗೆ ಇಂಥ ಭಾಗ್ಯ ದೊರೆಯಲಿಲ್ಲವಲ್ಲ ಎಂದು ಅಜಯ ಅನೇಕ ಬಾರಿ ಮರುಗಿದ್ದಾನೆ. ಭಗತ್‌ಸಿಂಗ್ ಅವರನ್ನು ಬಿಡುಗಡೆ ಮಾಡುವ ಹೋರಾಟದಲ್ಲಿ ತಾನು ಮಡಿಯಬೇಕು ಎಂದಾತ ಅನೇಕ ದಿನ ಕನಸು ಕಾಣುತ್ತಿದ್ದ. ಆ ಕನಸೂ ವಿಫಲವಾಯಿತು.

ಅವನು ಕ್ರಾಂತಿಪಥದಲ್ಲಿ ಬಹಳ ದೂರ, ಹೆಮ್ಮೆಪಡಬಹುದಾದಷ್ಟು ದೂರ ನಡೆದಿದ್ದಾನೆ ಎಂಬುದೇನೋ ನಿಜ! ಪಾರ್ಟಿಯನ್ನು ಸೇರಿ, ಅದನ್ನು ಬಲಪಡಿಸಿ, ಅದಕ್ಕಾಗಿ ಅಪಾರ ದುಡಿದಿದ್ದಾನೆ.. ಪಾರ್ಟಿಯ ವಜ್ರಾಯುಧವೆನಿಸಿದ ಬಾಂಬ್ ತಯಾರಿಕೆ ಕಲಿತು, ಹಲವಾರು ಬಾಂಬ್‌ಗಳನ್ನು ತಯಾರಿಸಿದ್ದಾನೆ. ಇನ್ನುಳಿದುದು...ಒಂದೇ! ಅದು ಅಂತಿಮ ಹೋರಾಟ!

ಕಿಶೋರನ ವಿಚಾರ ತಿಳಿದ ಅವನಿಗೀಗ ಗುರಿ ಮುಟ್ಟುವ ಬಯಕೆ ತೀವ್ರವಾಯಿತು. ಬೇಗನೆ ಕೊನೆಯ ಹೋರಾಟದಲ್ಲಿ ಭಾಗ ವಹಿಸಬೇಕೆಂಬ ಉತ್ಸಾಹ ಮೂಡಿತು. ಬಲಿದಾನ...ಅವನ ಇಚ್ಛೆ! ರಕ್ತತರ್ಪಣ...ಆತ್ಮಾರ್ಪಣೆ—ತಲೆ ತುಂಬ ವಿಚಾರ. ಹಾಗೆಯೇ ಕೆಲ ಹೊತ್ತಿನ ಅನಂತರ ಅಜಯ ತನ್ನ ಪಾರ್ಟಿಯ ಕೇಂದ್ರದೆಡೆಗೆ ಹೊರಟ.

ನಡೆದು ಬರುತ್ತಿದ್ದಾಗ ದೂರದಲ್ಲಿ ಮುಂದುಗಡೆ ಇಬ್ಬರು ಹೋಗುತ್ತಿದ್ದುದನ್ನು ಅಜಯ ನೋಡಿದ. ಒಬ್ಬ ಪೋಲೀಸ್, ಇನ್ನೊಬ್ಬ ? ಆತನನ್ನು ಎಲ್ಲೋ ನೋಡಿದ ನೆನಪು ಅಜಯನಿಗಿತ್ತು. ಅವರಿಬ್ಬರೂ ಅವನಿದ್ದ ಮನೆಯ ಮುಂದುಗಡೆಗೇ ಇದ್ದ ಗೂಢಚಾರರ ಕಚೇರಿಯೊಳಗೆ ಹೊಕ್ಕರು. ಅಜಯನ ಮನದಲ್ಲಿ ಶಂಕೆ ಮೂಡಿತು.

ಮರುದಿನ ನೆರೆಮನೆಯ ಏಳು ವರ್ಷದ ಹುಡುಗನೊಬ್ಬನನ್ನು ಕುಂದನ್ ಲಾಲ್ ಹಿಡಿದು ತಂದಿದ್ದ. ಆತ ಬಾಗಿಲ ಸಂದಿನಿಂದ, ಅಜಯನ ಮನೆಯೊಳಗೆ ನೋಡುತ್ತಿದ್ದ. ವಿಚಾರಿಸಿದಾಗ, ಆತ ಸದಾ ಒಳಗೆ ನೋಡಿ, ಪೋಲೀಸರಿಗೆ ವರದಿ ಮಾಡುತ್ತಿರುವುದಾಗಿ ಗೊತ್ತಾಯಿತು. ಆ ಹುಡುಗ ಮತ್ತು ಅವನ ತಾಯಿ ಇಬ್ಬರೇ ಆ ಮನೆಯಲ್ಲಿದ್ದರು.

ಗೂಢಚಾರರು ಈ ಮನೆಕಡೆಗೆ ದೃಷ್ಟಿ ಹರಿಸಿದ್ದಾರೆಂದೂ, ಇತ್ತ ಬಂದು ಹೋಗುವವರ ಬಗೆಗೆ ಬರೆದಿಡುತ್ತಿದ್ದಾರೆಂದೂ ಗೊತ್ತಾಯಿತು. ಎಚ್ಚರಿಕೆಯಿಂದ ಕಾರ್ಯ ನಿರ್ವಹಿಸಲು ಎಲ್ಲರೂ ನಿರ್ಧರಿಸಿದರು. ಹಗಲೂ ಇರುಳೂ ಕಾವಲು ನಡೆಸುತ್ತಿದ್ದ ಪೋಲೀಸರ ದೃಷ್ಟಿಗೆ ಬೀಳದಂತೆ ಬಾಂಬ್ ತಯಾರಿಕೆ ಸಾಮಗ್ರಿಗಳನ್ನು ಇತರ ವಸ್ತುಗಳನ್ನು ಅಲ್ಲಿಂದ ಬೇರೆ ಕಡೆ ಸಾಗಿಸಲಾಯಿತು.

ಆದರೆ ಪೋಲೀಸರಿಗೆ ಸುದ್ದಿ ತಿಳಿದಿತ್ತು. ಅಜಯನ ಮನೆಯ ಇನ್ನೊಂದು ಪಕ್ಕದಲ್ಲಿ ಗೂಢಚಾರನೊಬ್ಬ ವಾಸವಾಗಿದ್ದ. ಅಜಯ ಪೋಲೀಸ್ ಜೊತೆಗೆ ನೋಡಿದ್ದ ಸಾದಾ ಉಡುಗೆಯ ವ್ಯಕ್ತಿ ಆತನೇ ಆಗಿದ್ದ. ಅಜಯ ಮೋಹಿನಿ ರಸ್ತೆಯಲ್ಲಿನ ಮನೆಯೊಂದರೊಳಗೆ ದೊಡ್ಡ ಪೆಟ್ಟಿಗೆ ಸಾಗಿಸಿದುದನ್ನು ಗೂಢಚಾರರು ನೋಡಿದ್ದರು.

ಅಜಯನಿಗೆ ಅವನ ಕಿರಾಣಿ ಅಂಗಡಿಯ ಗೆಳೆಯನೂ ಕೆಲವು ವಿಷಯ ತಿಳಿಸಿದ. ಪಾರ್ಟಿಯ ಚಲನವಲನ ಪೋಲೀಸರಿಗೆ ತಿಳಿದಿತ್ತು. ಪೋಲೀಸರೂ ಗೂಢಚಾರರೂ ಅಧಿಕ ಸಂಖ್ಯೆಯಲ್ಲಿ ಈಗ ಆ ಮನೆಯ ಕಡೆಗೆ ಗಮನವಿರಿಸಲಾರಂಭಿಸಿದರು.

ಕೆಲವು ದಿನಗಳಲ್ಲಿ ಗೂಢಚಾರರು ಪ್ರತ್ಯಕ್ಷವಾಗಿಯೇ ಪಾರ್ಟಿ ಸದಸ್ಯರ ಹಿಂದೆ ಸುಳಿಯಲಾರಂಭಿಸಿದರು. ತಲೆ ಮರೆಸಿಕೊಳ್ಳಲು ಎಲ್ಲ ಸದಸ್ಯರೂ ನಿರ್ಧರಿಸಿದರು. ಗುರುದತ್ ಭವನ ವಾಚನಾಲಯದಲ್ಲಿ ಸೇರಿ ಮುಂದಿನ ಯೋಜನೆ ನಿರ್ಧರಿಸಲು ಯೋಚಿಸಿದರು. ಆದರೆ, ಆ ಗೊತ್ತಾದ ದಿನ ಗೂಢಚಾರರು ವಾಚನಾಲಯದ ಒಳಗೂ ಹೊರಗೂ ನುಸುಳಿಕೊಂಡು ಕುಳಿತಿದ್ದರು. ತಮ್ಮ ಎಲ್ಲ ಪ್ರಯತ್ನಗಳೂ ವಿಫಲವಾದುವೆಂದು ಇಂದ್ರಪಾಲನಿಗೆ ಅನಿಸಿತ್ತು. ಹಣದ ಅಭಾವದಿಂದಾಗಿ ದೂರ ಓಡಿಹೋಗಲೂ ಹಲವರಿಗೆ ಸಾಧ್ಯವಿರಲಿಲ್ಲ.

ವಾಚನಾಲಯದಲ್ಲಿ ಗೂಢಚಾರರ ಸಂಖ್ಯೆ ಅಧಿಕವಾಗಿತ್ತು. ಹೊರಗಡೆ ಕತ್ತಲೂ ಇಳಿದುಬರುತ್ತಿತ್ತು. ಪ್ರತಿಯೊಬ್ಬನೂ ಸ್ವತಂತ್ರವಾಗಿ ದುಡಿಯಿರಿ, ತಲೆತಪ್ಪಿಸಿಕೊಳ್ಳಿ, ಎಂದು ಯಶ್‌ಪಾಲ್ ತನ್ನ ಕೊನೆಯ ಸೂಚನೆ ನೀಡಿದನು. ಗೆಳೆಯರು ಒಬ್ಬೊಬ್ಬರಾಗಿ ವಾಚನಾಲಯದಿಂದ ನುಸುಳಿಕೊಂಡು ಹೊರಟು ಹೋದರು. ಅಜಯನೂ ಕೊಂಚ ಹೊತ್ತು ಕತ್ತಲೆಯಲ್ಲಿ ನಿಂತಿದ್ದು ರಾವೀ ನದಿಯ ಕಡೆ ಶೀಘ್ರವಾಗಿ ನಡೆದುಹೋದ.

## ೧೯



ಅಜಯ ನಡೆಯುತ್ತಲೇ ಇದ್ದ.

ಕ್ರಾಂತಿಕಾರೀ ಚಳುವಳಿಯ ಮೇಲೆ ಅಂಧಕಾರ ಕವಿಯುತ್ತಿರುವಂತೆ, ಹೆಜ್ಜೆ ಹೆಜ್ಜೆಗೂ ಕತ್ತಲು ಬೆಳೆಯುತ್ತಿತ್ತು, ಬೆಳಕು ಅಳಿಯುತ್ತಿತ್ತು.

ತನ್ನ ಯೌವನದ ಅತ್ಯಂತ ಮಹತ್ವದ ವರ್ಷಗಳನ್ನು ವ್ಯಯಿಸಿ, ಲಾಹೋರ್‌ನಲ್ಲಿ ಕ್ರಾಂತಿಕಾರಿ ತಂಡ ರೂಪಿಸಿ ಬಲಪಡಿಸಲು ಅಜಯ ಶ್ರಮಿಸಿದ್ದ.

ಈಗ ಆ ಮಹಾಸೌಧ, ಇನ್ನೇನು ಗೃಹಪ್ರವೇಶ ನಡೆಯಲಿದೆ ಎನ್ನುವಾಗ, ಉರುಳಿ ಬೀಳುವಂತೆ ತೋರಿಬರುತ್ತಿದೆ.

ಅವನ ಸಂಗಡಿಗರು, ಬೀಳ್ಕೊಡಲೂ ಅವಕಾಶವಿಲ್ಲದೆ ಚದುರಿ ಹೋಗಿದ್ದಾರೆ. ಒಂದೆರಡು ತಿಂಗಳ ಕಾಲ ಎಲ್ಲಾದರೂ ನೆರೆಯ ಊರುಗಳಲ್ಲಿ ತಲೆ ಮರೆಸಿಕೊಂಡು ಮತ್ತೊಮ್ಮೆ ಜೊತೆಗೂಡಲು ಅವರು ನಿರ್ಧರಿಸಿದ್ದರು. ಆಗ ಪೋಲೀಸರ ಈ ಉತ್ಸಾಹ ಆಸಕ್ತಿಗಳು ಕೊಂಚ ಕಡಮೆಯಾಗಬಹುದೆಂಬ ನಂಬಿಕೆ ಅವರಿಗೆ.

ಪಂಡಿತ್ ಇಂದ್ರಪಾಲ್ ತಲೆ ತಪ್ಪಿಸಿಕೊಳ್ಳಲು ಒಪ್ಪಲಿಲ್ಲ. ಬಂದುದನ್ನು ಇದಿರಿಸೋಣ, ಸೆರೆಯಾಗುವುದಾದರೆ ಆಗಲಿ, ಎಂದಿದ್ದ. ಅವನ ಸಮಸ್ಯೆ ಆರ್ಥಿಕವಾದುದು. ಎಲ್ಲಾದರೂ ಹೋಗಿ ಗೆಳೆಯರು ವಾಸ ಮಾಡಲು ನೆರವು ಕೊಡುವ ಸ್ಥಿತಿಯಲ್ಲಿ ಅವನಿರಲಿಲ್ಲ.

ಯಶಪಾಲ್ ಪೋಲೀಸರ ಬಲೆಗೆ ಬೀಳಲು ಸಮ್ಮತಿಸಲಿಲ್ಲ. ಎಲ್ಲರೂ ಕೂಡಲೇ ಚದರಬೇಕೆಂಬುದೇ ಅವನ ಸಲಹೆ. ಹಣ ನೀಡಲೂ ಅವನು ಒಪ್ಪಿದ್ದ. ಆದರೆ, ಆ ಬಗೆಗೆ ಯತ್ನಿಸಲೂ ಮಾತನಾಡಲೂ ಇದೀಗ ಅವಕಾಶವಿಲ್ಲದೆ, ಥಕ್ಕನೆ ಅವರೆಲ್ಲ ಚದರಬೇಕಾಯಿತು.

ಇಂದ್ರಪಾಲ್‌ಗೆ ಯಶಪಾಲ್‌ನ ಸಲಹೆ ರುಚಿಸಿರಲೂ ಇಲ್ಲ. ದೇಶದ ಬಿಡುಗಡೆಯ ವಿಷಯದಲ್ಲಿ ಏಕಾಭಿಪ್ರಾಯವಿದ್ದರೂ, ಅವರೊಳಗೆ ಆಂತರಿಕ

ಭಿನ್ನಾಭಿಪ್ರಾಯಗಳಿದ್ದುವು. ಈ ಕಾರಣದಿಂದಲೇ ಇಂದ್ರಪಾಲ್ ಲಾಹೋರ್‌ನಲ್ಲಿ ಪ್ರತ್ಯೇಕವಾಗಿ ಪಾರ್ಟಿ ಕಟ್ಟಿದ್ದ. ತನ್ನ ಸರ್ವಸಂಪತ್ತನ್ನು ಅದಕ್ಕಾಗಿ ವ್ಯಯಿಸಿದ. ಯಶಪಾಲ್ ಆ ಪ್ರಾಂತ್ಯದ ಪಾರ್ಟಿಯ ವ್ಯವಸ್ಥಾಪಕ. ಆದರೂ, ಇಂದ್ರಪಾಲ್ ತನ್ನ ತಂಡದ ವೈಶಿಷ್ಟ್ಯವನ್ನು ಉಳಿಸಿಕೊಂಡೇ ಬಂದಿದ್ದ. ಅವನದು ಸ್ವತಂತ್ರ ಮನೋಭಾವ. ನಿರ್ದಿಷ್ಟವಾದ ಕೆಲಸ ನಿಖರವಾಗಿ ನಡೆಯಬೇಕೆಂಬ ಸಿಪಾಯಿ. ದೊಡ್ಡ ಪಾರ್ಟಿಯ ಒಂದು ಕೊಂಡಿಯಾಗಿ ನಿಂತರೆ, ತಮ್ಮ ಕೆಲಸ ನಿಧಾನವಾಗುವುದೆಂಬ ಶಂಕೆ ಅವರಿಗೆ.

ಎಲ್ಲರೂ ಪೋಲೀಸರ ಬಲೆಗೆ ಬೀಳಬಹುದು, ಎಂದು ಯಶಪಾಲ್ ಎಚ್ಚರಿಕೆ ನೀಡಿದ.

ಈಗ ಅವರೆಲ್ಲರೂ ಚದರಿದ್ದಾರೆ. ಯಾರು ಎತ್ತ ಹೋದರೋ ಒಂದೂ ತಿಳಿಯದು.

ಇಂದ್ರಪಾಲ್, ರೂಪ್‌ಚಂದ್ ಮತ್ತು ಕೆಲವರು ಲಾಹೋರ್‌ನಲ್ಲೇ ಉಳಿದು, ಬಂದುದೆಲ್ಲವನ್ನು ಇದಿರಿಸಬೇಕೆಂದು ಗೊತ್ತಾಗಿತ್ತು. ಇತರರು ಚದರಬೇಕು...ಎಲ್ಲಿಗೆ ?

ಹಳೆಯ ನಿರ್ಧಾರಗಳ ಜೊತೆಗೆ ಹೊಸ ಘಟನೆಗಳನ್ನು ನೆನೆಯುತ್ತ ಅಜಯ ನಡೆದಿದ್ದ. ಅವನ ಕಾಲುಗಳು ಹೆಜ್ಜೆ ಇಡುತ್ತ ಮುಂದೆ ಸಾಗಿದ್ದುವು.

ಕತ್ತಲು ದಟ್ಟವಾಯಿತು. ಮರಗಳೂ ಇದ್ದುವು. ಆತ ತಿರುಗಿ ನೋಡಿದ. ಯಾರಾದರೂ ತನ್ನ ಬೆನ್ನು ಹತ್ತುತ್ತಿದ್ದಾರೆಯೇ ಎಂದು ದಿಟ್ಟಿಸಿದ. ಯಾರೂ ಕಾಣಿಸಲಿಲ್ಲ. ಈಗ ದಾರಿಯೂ ಕಾಣಿಸದಷ್ಟು ಕತ್ತಲಾಗಿತ್ತು. ರಾವೀ ನದಿಯ ಸೇತುವೆಯನ್ನೂ ಅವನು ಹಾದು ಮುಂದೆ ಸಾಗಿದ.

ಲಾಹೋರ್ ನಗರ ತ್ಯಜಿಸಬೇಕು......!

ಹಸಿವು, ತೃಷೆಗಳು ಅವನನ್ನು ಕಾಡುತ್ತಿದ್ದರೂ ಅವುಗಳ ನೆನಪೇ ಅವನಿಗಿರಲಿಲ್ಲ. ಈಗ, ಅಪಾಯದಿಂದ ದೂರವಾಗಿದ್ದೇನೆ ಎಂದು ತಿಳಿದು ಕೊಂಚ ನಿಂತು, ದಣಿವು ಆರಿಸಿಕೊಂಡಾಗ, ಅವು ಆತನನ್ನು ಪೀಡಿಸಲಾರಂಭಿಸಿದುವು.

ಶಹದಾರಾ ರೈಲ್ವೆ ಸ್ಟೇಷನ್‌ವರೆಗೂ ನಡೆಯಬೇಕು. ಅಲ್ಲಿಂದ ರೈಲು ಏರಬೇಕು. ಮುಂದೆ ಪ್ರಯಾಣ ಬೆಳೆಸಬೇಕು......

ಹಾದಿ ತಪ್ಪದಿರಲೆಂದು ಅಜಯ ರೈಲು ದಾರಿಯಲ್ಲಿ, ಅದರ ಪಕ್ಕದ ಕಾಲುದಾರಿಯಲ್ಲಿ, ಹಳಿಗಳ ಮೇಲೆ ನಡೆಯುತ್ತ ಸಾಗಿದ.

ಒಂದೊಂದಾಗಿ ಹಳೆಯ ಕ್ರಾಂತಿಕಾರಿ ಹೋರಾಟಗಳ ಕತೆಗಳು ಅವನ ಮನಃಪಟಲದ ಮೇಲೆ ಹಾದುಹೋದುವು.

ಯಾವುದೇ ತತ್ತ್ವದ ಉಗಮವೂ ಈ ದೇಶದಲ್ಲಿ ರಕ್ತತರ್ಪಣವಿಲ್ಲದೆ ನಡೆದೇ ಇಲ್ಲ. ಸಾವಿರ ಸಾವಿರ ಮಂದಿ ಹತರಾಗಿದ್ದಾರೆ. ಲಕ್ಷಾಂತರ ಮಂದಿ ತಮ್ಮ ರಕ್ತದ ಹೊಳೆ ಹರಿಸಿದ್ದಾರೆ. ಪುರಾಣಯುಗದ ಕಥೆಯೂ ಅಷ್ಟೆ! ಇತಿಹಾಸದ ಘಟ್ಟಗಳಲ್ಲೂ ಹಾಗೆಯೇ.

ಹತ್ತು ಅವತಾರಗಳು; ನಾಲ್ಕು ಯುಗಗಳು!

ಅಸಂಖ್ಯಾತ ಯುಗಪುರುಷರು! ರಾಜ ಋಷಿಗಳು!!

ಎಲ್ಲರೂ ರಕ್ತತರ್ಪಣದ ಮಹಾ ಯಾಗದಲ್ಲಿ, ಹೋರಾಟದ ಅಮೃತ ಮಂಥನದಲ್ಲಿ, ಅವತರಿಸಿ, ಅನುಭವಿಸಿ, ಪ್ರತ್ಯಕ್ಷಿಯಾಗಿ, ತಾರಕೆಗಳ ಸಂಕುಲದಲ್ಲಿ ಸೇರಿ ಅಮರರಾಗಿದ್ದಾರೆ.

ಸ್ವಾತಂತ್ರ್ಯ ಸಾಧನೆಯ ಈ ಶತಮಾನವೂ ಕಡಮೆಯಿಲ್ಲ. ಅದೂ ಯುಗ ಯುಗಾಂತರದ ಸಾಧನೆಗಳನ್ನು ಬಯಸುತ್ತಿದೆ, ಬಲಿದಾನ ಬೇಡುತ್ತಿದೆ.

೧೮೫೭...

ಬ್ರಿಟಿಷ್ ಸಾಮ್ರಾಜ್ಯಶಾಹಿ ತನ್ನ ನಿಜವಾದ ರೂಪವನ್ನು ತೋರಿಸಿತು. ಅಸಂಖ್ಯಾತ ಮಂದಿಯ ಕೊಲೆಯಾಯಿತು. ಬ್ರಿಟಿಷ್ ಸರ್ಕಾರ ಒಂದಾವ ಕ್ರೂರ ರಕ್ಕಸರಿಗೂ ಕಡಮೆ ಇಲ್ಲದಂತೆ ವರ್ತಿಸಿತು.

ಕೊನೆಯ ಮೊಘಲ್ ಬಾದಶಹ–ಬಹದ್ದೂರ್‌ಶಹಾ! ಅವನ ಮೂವರು ಮಕ್ಕಳು ಮಿರ್ಜಾ ಮುಘಲ್, ಕಿಜಾರ್ ಸುಲ್ತಾನ್ ಮತ್ತು ಅಬುಬಕರ್. ಅವರ ರುಂಡಗಳನ್ನು ಕತ್ತರಿಸಿ ಅವುಗಳನ್ನು ಹಡ್ಸನ್, ಬಹದ್ದೂರ್ ಶಹಾನಿಗೇ ಅರ್ಪಿಸಿದ.

ತೈಮೂರನ ವಂಶಾವಳಿಯನ್ನು ಅಣಕಿಸುವಂತೆ ಬ್ರಿಟಿಷರು ಆಡಳಿತ ಮುಂದುವರಿಸಿದರು.

ಪ್ರತಿಭಟನೆ, ಕ್ರಾಂತಿ, ಪ್ರತಿರೋಧಗಳು ದಬ್ಬಾಳಿಕೆ ಬೆಳೆದಷ್ಟೂ ಉಗ್ರ ವಾಗತೊಡಗಿದುವು.

ಕೂಕಾ ಗುರು ಸದ್ಗುರು ರಾಮ್‌ಸಿಂಗ್ ಬಂಡಾಯವೆದ್ದರು. ಅವರ ಅನುಯಾಯಿಗಳಲ್ಲಿ ಐವತ್ತು ಮಂದಿಯನ್ನು ಗುಂಡಿನ ಬಾಯಿಗೆ ಕೊಡಲಾಯಿತು. ಹದಿನೆಂಟು ಮಂದಿಗೆ ಫಾಶಿಯಾಯಿತು. ಕೂಕಾ ಕ್ರಾಂತಿ ಭಾರತದ ಸಂಸ್ಕೃತಿಗೆ ತಕ್ಕಂತೆ ನಡೆಯಿತು. ಧರ್ಮಗುರು ಕತ್ತಿ ಎತ್ತಿದರು.

ಇಪ್ಪತ್ತು ವರ್ಷಗಳ ಅನಂತರ......

ತನ್ನ ತಾಯಿಯ ಮುಖ ನೋಡಲೂ ರಜಾ ಕೊಡದ ಬ್ರಿಟಿಷ್ ಅಧಿಕಾರಿ ಬಗೆಗೆ ಹೇಸಿ ರೋಷಗೊಂಡ ವಾಸುದೇವ್ ಬಲವಂತರಾವ್ ಫಡ್ಕೆ ಯುವಜನರನ್ನು ಸಂಘಟಿಸಿ ಕ್ರಾಂತಿಕಾರರ ಪಾರ್ಟಿಯನ್ನೇ ರಚಿಸಿದ. ಸಶಸ್ತ್ರ ದರೋಡೆ, ಗೆರಿಲ್ಲಾ ಹೋರಾಟ ನಡೆಸಿ ಮಿಲಿಟರಿ ಮತ್ತು ಪೋಲೀಸ್ ದಳಗಳನ್ನು ಇದಿರಿಸಿದ. ಆಜೀವ ಶಿಕ್ಷೆಗೆ ಗುರಿಯಾಗಿ, ಪೋಲೀಸರ ಹಿಂಸೆಯಿಂದ ಅಳಿದ.

ಸರ್ಕಾರದ ಅನೀತಿ ಮೇರೆ ಮೀರಿತು.

ಲೋಕಮಾನ್ಯ ಬಾಲ ಗಂಗಾಧರ್ ತಿಲಕ್ ಜನಜಾಗೃತಿಯನ್ನು ಉಂಟು ಮಾಡಿದರು. ಅತ್ಯಾಚಾರ ಖಂಡಿಸಿದರು. ಆದರೆ, ಪಿಸ್ತೂಲಿನ ಸದ್ದಿನಿಂದ ಮಾತ್ರವೇ ಎಚ್ಚರವಾಗಬಲ್ಲ ಸರ್ಕಾರಕ್ಕೆ ಅವರ ಶಬ್ದಗುಂಡುಗಳ ಸದ್ದು ಕೇಳಿಸಲಿಲ್ಲ.

ಛಾಪೇಕರ್ ಬಂಧುಗಳು ಕಿಡಿಕಿಡಿಯಾದರು. ದಾಮೋದರ್ ಛಾಪೇಕರ್ ಪ್ಲೇಗ್ ಕಮೀಷನರ್ ರ್‍ಯಾಂಡ್‌ನನ್ನು ಗುಂಡಿಟ್ಟು ಕೊಂದ. ಅವನ ತಮ್ಮ ಲೆಫ್ಟ್‌ನೆಂಟ್ ಆಯರೆಸ್ಟ್‌ನ ಕಡೆಗೆ ಗುಂಡು ಹಾರಿಸಿದ. ವಿಚಾರಣೆ ನಡೆಯಿತು. ಅವರಿಗೆ ಫಾಶಿ ಶಿಕ್ಷೆಯನ್ನು ವಿಧಿಸಲಾಯಿತು. ವಿರೋಧ ಸಾಕ್ಷಿ ಹೇಳಿದವನನ್ನು ಕೊಲ್ಲಲು ಕೊನೆಯ ತಮ್ಮ ಸಿದ್ಧನಾದ. ತನ್ನ ತಾಯಿಯ ಬಳಿಗೆ ತೆರಳಿ, ಅವಳ ಪಾದಗಳನ್ನು ಮುಟ್ಟಿ ವಂದಿಸಿ ಹೇಳಿದ.

" ಎರಡು ಹೂಗಳು ಅಂಬಾ ಭವಾನಿಯ ಪಾದ ಸೇರಿದವು. ಅಮ್ಮಾ, ಆ ತಾಯಿಯ ಪಾದ ಸೇರಲು ನನಗೆ ಅನುಮತಿ ಕೊಡು. "

ತಾಯಿ ಮಾತನಾಡಲಿಲ್ಲ. ತನ್ನ ಮಗನನ್ನು ಎತ್ತಿ ಮುದ್ದಿಸಿದಳು.

ಮಗ ತನ್ನ ಬಯಕೆ ಈಡೇರಿಸಿ, ಫಾಶಿ ಕಂಬವನ್ನೇರಿ ಭವಾನಿಯ ಪಾದ ಸೇರಿ, ಅಣ್ಣಂದಿರ ಜೊತೆಗೂಡಿದ.

ಅಲ್ಲಿಂದ ಇಲ್ಲಿಯವರೆಗೂ ಕ್ರಾಂತಿಯ ಕಿಡಿ ಹಾರುತ್ತ ಸಾಗಿದೆ. ರಕ್ತ ತರ್ಪಣ ನಡೆದಿದೆ.

ಈ ಶತಮಾನದಲ್ಲಿ......ವರ್ಷವರ್ಷವೂ ಹೋಳಿ ನಡೆದಿದೆ......

"ನಿನ್ನ ಕೊನೆಯ ಬಯಕೆ ಏನು ?"

ಫಾಸಿ ಕಂಬದ ಅಡಿಯಲ್ಲಿ ಉರುಳನ್ನು ನೋಡುತ್ತ ನಿಂತ ಅವಧ ಬಿಹಾರಿಯನ್ನು ಪ್ರಶ್ನಿಸಿದ ಬ್ರಿಟಿಷ್ ಅಧಿಕಾರಿ.

"ಬ್ರಿಟಿಷ್ ಸಾಮ್ರಾಜ್ಯಶಾಹಿಯ ಅಂತ್ಯ," ಎಂದ ಅವಧ.

"ಇಂಥ ಮಾತಿನಿಂದ ಈಗ ನಿನಗೇನು ಲಾಭ ? ನೀನು ಶಾಂತ ಮನಸ್ಸಿನಿಂದ ಸಾಯಬೇಕು."

"ಎಂಥ ಶಾಂತಿ ? ಎಲ್ಲೆಡೆಗೂ ಈ ದಾವಾಲನ ಹರಡಬೇಕೆಂಬುದೇ ನನ್ನ ಬಯಕೆ. ಅದರಲ್ಲಿ ನೀವು ಭಸ್ಮವಾಗಬೇಕು, ನಾವೂ ಭಸ್ಮವಾಗಬೇಕು. ಹಾಗೆ ನಮ್ಮ ದಾಸ್ಯವೂ ಅಳಿದು ಪುತ್ಥಳಿಯಂತಹ ಭಾರತ ಅಮರವಾಗಿ ಉಳಿಯುವುದು."

ಅದೇ ಅವಧನ ಕೊನೆಯ ಬಯಕೆಯಾಗಿತ್ತು. ಮುಂದಿನ ಮಾತು ಗಳಿಗೆ ಉರುಳು ತಡೆ ಹಾಕಿತು.

ಛಾಯಿ ಬಾಲಮುಕುಂದ......

ವಿಚಾರ ಸಂಗ್ರಹಿಸಲು ಪೋಲೀಸರು ಎಲ್ಲ ಬಗೆಯಿಂದಲೂ ಅವನನ್ನು ಹಿಂಸಿಸಿದರು. ಕೊನೆಗೆ ಗರಗಸ ತಂದರು. ನೆತ್ತಿಯ ಮೇಲಿರಿಸಿ ಸಿಗಿದರು. ಇಡೀ ದೇಹವನ್ನೇ ತುಂಡು ತುಂಡಾಗಿ ಕತ್ತರಿಸಿದರು.

ಅವನ ಪತ್ನಿ ರಾಮರಖಿ......ಪತಿಯನ್ನು ಸೆರೆಮನೆಯಲ್ಲಿ ಕಂಡು, ಅಲ್ಲಿನ ಆಹಾರದ ಬಗೆಗೆ ವಿಚಾರಿಸಿದಳು. ಬಾಲ-ಮುಕುಂದ ತನಗೆ ದೊರೆತ ಸೀದುಹೋದ ರೊಟ್ಟಿ, ಕಲ್ಲು ಮಣ್ಣು ತುಂಬಿದ ಅನ್ನ ತೋರಿಸಿದ. ಅಂದಿನಿಂದ ರಾಮರಖಿಯ ಊಟವೂ ಅದೇ ರೀತಿ ಸಾಗಿತು. ಕಲ್ಲು ಮಣ್ಣು ತುಂಬಿದ ಅನ್ನ ತಿನ್ನಲಾರಂಭಿಸಿದಳು.

ಮತ್ತೊಮ್ಮೆ ಭೇಟಿಯಾದಾಗ ಕೇಳಿದಳು ; 'ನೀವೆಲ್ಲಿ ಮಲಗುತ್ತೀರಿ ?' 'ಕತ್ತಲು ಕೋಣೆಯಲ್ಲಿ' ಎಂದು ಉತ್ತರ ಬಂತು. ಆಕೆಯೂ ಹಾಗೆಯೇ

ಕತ್ತಲು ಕೋಣೆಯಲ್ಲಿ, ಬೇಸಿಗೆಯಲ್ಲೂ ಕಂಬಳಿ ಹೊದೆದುಕೊಂಡು ಮಲಗ ಲಾರಂಭಿಸಿದಳು.

ಬಾಲ-ಮುಕುಂದ ಫಾಶಿ ಶಿಕ್ಷೆಗೆ ಗುರಿಯಾದ.

ಕಣ್ಣೀರಿಡುತ್ತ ಜನರು ಅವನ ಮನೆಗೆ ಬಂದರು. ರಾಮರಖಿಗೆ ಪರಿಸ್ಥಿತಿ ಅರಿವಾಯಿತು. ಅವಳು ಮಾತನಾಡಲಿಲ್ಲ. ಸ್ನಾನ ಮಾಡಿ, ಸುಂದರವಾಗಿ ಮದುಮಗಳಂತೆ ಅಲಂಕರಿಸಿಕೊಂಡಳು. ಆಭರಣಗಳನ್ನೆಲ್ಲ ತೊಟ್ಟುಕೊಂಡಳು. ಮನೆಯ ಚಾವಡಿಯಲ್ಲಿ ಪದ್ಮಾಸನ ಹಾಕಿ ಕುಳಿತು ಕೊಂಡಳು. ಕೆಲ ನಿಮಿಷಗಳಲ್ಲೇ ಅವಳು ಪತಿಯ ಪಾದ ಸೇರಿದ್ದಳು.

ನಿಜ ! ಒಂದೊಂದು ಕಥೆಯೂ ಅಜಯನನ್ನು ಎಚ್ಚರಿಸುತ್ತಿದ್ದುವು. 'ನಿನ್ನದೇನು ಮಹಾ ?' ಎಂದು ಪ್ರಶ್ನಿಸುತ್ತಿದ್ದುವು.

"ನಿನ್ನ ಹೆಸರೇನು ?"

"ಕ್ರಾಂತಿ."

"ವೃತ್ತಿಯೇನು ?"

"ಕ್ರಾಂತಿ."

"ಕ್ರಾಂತಿಯ ಆರಂಭ ಎಲ್ಲಿ......?"

"ಭಾರತದಲ್ಲಿ."

"ಯಾಕೆ ?"

"ಬ್ರಿಟಿಷ್ ಆಡಳಿತೆಯಲ್ಲಿನ ದಬ್ಬಾಳಿಕೆ ಮತ್ತು ಹಿಂಸೆಯನ್ನು ಸಹಿಸಲು ಇನ್ನು ಸಾಧ್ಯವಿಲ್ಲವಾಗಿದೆ."

ಈ ಶತಮಾನದ ಮಹೋನ್ನತ ಸಾಧನೆಯಾದ ಘದರ್ ಪಾರ್ಟಿಯ ಧ್ಯೇಯವಿದು. ಲಾಲಾ ಹರ್ದಯಾಳ್ ಅಮೇರಿಕದಲ್ಲಿ ನಿಂತು, ಭಾರತದಲ್ಲಿ ಕ್ರಾಂತಿ ನಡೆಸಲು ಶ್ರಮಿಸಿದರು. ಸಹಸ್ರ ಸಂಖ್ಯೆಯಲ್ಲಿ ವಿದೇಶಗಳಲ್ಲಿ ಭಾರತೀಯರು ನೆರವು ನೀಡಿದರು.

ಭಾರತದ ಏಳು ಭಾಷೆಗಳಲ್ಲಿ 'ಘದರ್' ಪತ್ರಿಕೆಯನ್ನು ಹೊರಡಿಸ ಲಾಯಿತು. ಭಾರತದಲ್ಲಿ ಬಂಡಾಯಕ್ಕಾಗಿ ವೀರ, ಉತ್ಸಾಹೀ ಯೋಧರು ಬೇಕಾಗಿದ್ದಾರೆ, ಎಂದು ಪತ್ರಿಕೆ ಪ್ರಕಟಿಸಿತು.

"ಸಂಬಳ ?"

" ಮರಣ."

" ಗೌರವ ?"

" ವೀರ ಪದವಿ."

" ಪಿಂಚಿಣಿ ?"

" ಸ್ವಾತಂತ್ರ್ಯ."

" ಕಾರ್ಯಕ್ಷೇತ್ರ...?"

" ಹಿಂದೂಸ್ಥಾನ್..."

ಹೌದು...ಈ ಹಿಂದೂಸ್ಥಾನ್ ತನ್ನ ಕಾರ್ಯಕ್ಷೇತ್ರ. ಇಲ್ಲಿ ಮರಣವೇ ಮಹಾನಪದವಿ ಎಂದು ದುಡಿದು ಬಲಿದಾನ ಅರ್ಪಿಸುವುದೇ ಧರ್ಮ. ಅಜಯ ರೈಲ್ವೆ ಸ್ಟೇಷನ್ನಿನಲ್ಲಿ ಕಾದಿದ್ದಂತೆ ರೈಲು ಬಂದಿತು. ಅದು ಕನಸಿನ ಲೋಕದಿಂದ ಅವನನ್ನು ಭೂಮಿಗೆ ಎಳೆಯಿತು.

ಅಜಯ ರಾವಲ್ಪಿಂಡಿಗೆ ಹೊರಟ.

ದಾಸ ಭಾರತದಲ್ಲೂ ಅತನೀಗ ಪೂರ್ಣ ಸ್ವತಂತ್ರ ಪ್ರಜೆ. ಅನ್ನವಿಲ್ಲ, ನೀರಿಲ್ಲ, ರೈಲಿನ ಟಿಕೇಟನ್ನೂ ಕೊಂಡುಕೊಂಡಿಲ್ಲ.

ಅವನಿಗೆ ಆ ಗಂಭೀರ ವಾತಾವರಣದಲ್ಲೂ ನಗೆ ಬಂತು. ಜನ ಜಂಗುಳಿಯ ನಡುವೆ ಒಂದು ಮೂಲೆಯಲ್ಲಿ ಮುದುಡಿ ಕುಳಿತ.

ಆದರೂ ಅವನ ಮಿದುಳು ಹಳೆಯ ಕತೆಗಳನ್ನು ಮೆಲುಕು ಹಾಕು ವುದರಲ್ಲೇ ನಿರತವಾಗಿದೆ.

ರಾವಲ್ಪಿಂಡಿಯಲ್ಲಿ ಏನು ಮಾಡಲಿ ? ಹೇಗೆ ಮರೆಯಾಗಿರಲಿ ? ಎಂದು ಮುಂದಿನ ದಾರಿಯ ಬಗೆಗೆ ಚಿಂತಿಸಲು ಯತ್ನಿಸುತ್ತಿದ್ದಾಗಲೆಲ್ಲ, ಹಳೆಯ ಕಥೆ ಅದನ್ನು ಬದಿಗೆ ಸರಿಸಿ ಕಾಡುತ್ತಿತ್ತು.

ಬಂದುದೆಲ್ಲವೂ ಬರಲಿ......

ಹೌದು......ನಿಜ ! ಅಪೇತಡೆಗಳಿಗೆ ಅಂಜದೆ, ಮುಂದಿನ ಸಂಕಟಗಳನ್ನು ಚಿಂತಿಸದೆ ಎಲ್ಲರೂ ಹೋರಾಡಿದ್ದಾರೆ. ಭಾರತದಲ್ಲಿ ಕ್ರಾಂತಿ ನಡೆಸಲೇ ಬೇಕೆಂದು ' ಕಾಮಗಾಟ ಮಾರು ' ಹಡಗಿನಿಂದ ಬಂದ ನಾಲ್ಕುನೂರು ಮಂದಿ ಸಿಕ್ಕಿಬಿದ್ದರು. ಅವರಲ್ಲಿದ್ದ ಕೋಟಿ ರೂಪಾಯಿಗಳಿಗೂ ಹೆಚ್ಚು ಹಣ ಸರಕಾರದ

ವಶವಾಯಿತು. ಹದಿನೈದು ಮಂದಿ ಹೋರಾಡಿ ಅಳಿದರು. ಯತ್ನ ಒಮ್ಮೆ ವಿಫಲವಾಯಿತು......

ಪ್ರಯತ್ನ ನಿಲ್ಲಲಿಲ್ಲ......

ಮೂರು ಸಾವಿರಕ್ಕೂ ಹೆಚ್ಚು ಮಂದಿ ವಿದೇಶಗಳಿಂದ ಕ್ರಾಂತಿಯ ಸೈನಿಕರಾಗಿ ಬಂದರು. ರಾಶ್ ಬಿಹಾರಿಯವರು ಕ್ರಾಂತಿಯ ಸಿದ್ಧತೆ ನಡೆಸಿದರು. ಬಾಂಬ್ ಕಾರ್ಖಾನೆಗಳು ತಲೆ ಎತ್ತಿದವು. ಅಪಾರ ಶಸ್ತ್ರಾಸ್ತ್ರಗಳ ಸಂಗ್ರಹವಾಯಿತು. ಧನ ಸಂಗ್ರಹಕ್ಕಾಗಿ ದರೋಡೆಗಳು ನಡೆದುವು. ಅನೇಕರನ್ನು ಹಿಡಿದು ಸರ್ಕಾರ ಗಲ್ಲಿಗೇರಿಸಿತು. ಸೈನಿಕರೂ ಕ್ರಾಂತಿಯಲ್ಲಿ ಭಾಗ ವಹಿಸಿದರು.

ಆದರೆ......ಘದರ್ ಪಾರ್ಟಿಯೊಳಗೇ ಸೇರಿದ್ದ ಇಬ್ಬರಿಂದಾಗಿ ಕ್ರಾಂತಿ ಸಫಲವಾಗಲಿಲ್ಲ. ೪೨ ಮಂದಿ ಮರಣವನ್ನಪ್ಪಿದರು. ೧೧೪ ಮಂದಿ ಆಜೀವ ಶಿಕ್ಷೆ ಗಳಿಸಿದರು. ೯೨ ಮಂದಿಗೆ ವಿವಿಧ ಶಿಕ್ಷೆಗಳು ದೊರೆತವು.

ಆದರೂ ಕ್ರಾಂತಿಯ ಕಿಡಿ ನಂದಿಲ್ಲ.

ಜನತೆಗೆ ಸ್ವಾತಂತ್ರ್ಯ ಇನ್ನೂ ಸಂದಿಲ್ಲ.

ಅಜಯನಿಗೆ ಹಾಗೇ ನಿದ್ದೆ ಬಂತು. ಅವನ ಮಿದುಳು ಏನು ಯೋಚಿಸುತ್ತಿತ್ತೋ ತಿಳಿಯದು.

ರೈಲು ಮುಂಜಾವದ ವೇಳೆಗೆ ರಾವಲ್ಪಿಂಡಿ ತಲುಪಿತು.



# ೨೦

"ರಾಮ್......ರಾಮ್......"

ಅಜಯ ತಿರುಗಿ ನೋಡಿದ. ಯಾರೋ ಅಪರಿಚಿತನೊಬ್ಬ ಅವನನ್ನು ನೋಡಿ ವಂದಿಸಿದ. ತಾನೂ ಪ್ರತಿಯಾಗಿ ವಂದಿಸಿ, ಅಜಯ ರೈಲಿನಿಂದಿಳಿದ.

ರೈಲು ರಾವಲ್ಪಿಂಡಿ ಸೇರಿದಾಗ ಬೆಳಕು ಹರಿದಿತ್ತು. ಹಸಿವು, ತೃಷೆ ಅಜಯನನ್ನು ಈಗ ತೀವ್ರವಾಗಿ ಕಾಡುತ್ತಿದ್ದುವು. ಅವನಿಗೆ ಓಡಾಡುವ ಶಕ್ತಿಯೂ ಕುಸಿದಂತೆ ಅನಿಸಿತು. ರೈಲ್ವೆ ನಿಲ್ದಾಣದಲ್ಲಿ ಇಳಿದೊಡನೆಯೇ ಆತ ಬಾವಿಯ ಬಳಿಗೆ ಧಾವಿಸಿದ. ನೀರಿನಿಂದ ಮುಖ ತೊಳೆದುಕೊಂಡು ಹಿಂತಿರುಗಿದ. ಕುಡಿಯುವ ನೀರಿನ ಹೂಜಿಯಿಂದ ನೀರನ್ನೆತ್ತಿ ಹೊಟ್ಟೆ ತುಂಬು ವಷ್ಟು ಕುಡಿದ. ಅದುವರೆಗೂ ಆತ ಅತ್ತಿತ್ತ ನೋಡಿರಲೇ ಇಲ್ಲ.

ಈಗ ರೈಲ್ವೇ ಸ್ಟೇಷನ್ ಬರಿದಾಗಿತ್ತು. ಕೊಂಚ ಹೊತ್ತು ಅಜಯ ಅಲ್ಲೇ ಕಲ್ಲುಬೆಂಚಿನ ಮೇಲೆ ಕುಳಿತುಕೊಂಡ.

ಆ ಅಪರಿಚಿತನಾರು ?

ಇಲ್ಲೂ ಗೂಢಚಾರರು ಬೆನ್ನು ಹತ್ತಿದರೆ ?

ಅಜಯನಿಗೆ ಹಲವಾರು ಯೋಚನೆಗಳು ಬಂದುವು. ತನ್ನ ಹಿಂದೆ ನೆರಳಾಗಿ ಪೋಲೀಸರು ತಿರುಗುತ್ತಿರಬಹುದು ಎಂದೂ ಅನಿಸಿತು. ಆದರೂ ಒಂದು ಧೈರ್ಯ. ಆಪತ್ಕಾಲದ ಧೈರ್ಯ. ಇಡೀ ಮುಳುಗಿದವನಿಗೆ ಚಳಿಯಾದರೂ ಎಲ್ಲಿ ? ಆದುದಾಗಲಿ ಎಂಬ ಧೈರ್ಯ ಅವನದಾಗಿತ್ತು.

ಟಿಕೆಟ್ ಪಡೆಯದೆ ಆತ ಪ್ರಯಾಣ ಮಾಡಿದ್ದ.

ರೈಲ್ವೆ ಸ್ಟೇಷನ್ನಿನಲ್ಲಿದ್ದ ಪ್ರಯಾಣಿಕರೆಲ್ಲ ಹೊರಟು ಹೋದ ಮೇಲೆ, ಟಿಕೆಟ್ ಪರೀಕ್ಷಕನೂ ಹಿಂತಿರುಗಿದ ಮೇಲೆ ಆತ ಹೊರಗಡೆ ಹೊರಡ ಬೇಕಾಗಿತ್ತು.

ರೈಲ್ವೆ ಸ್ಟೇಷನ್ನಿನಿಂದ ಹೊರಬಿದ್ದವನೇ ಅಜಯ ನೇರವಾಗಿ ತಲ್‌ವಾರನ್ ಬಜಾರ್‌ಗೆ ನಡೆದ. ಈ ಹಿಂದೆಯೂ ಅಜಯ ಅಲ್ಲಿಗೆ ಬಂದಿದ್ದ. ಪಾರ್ಟಿಯ

ಕೆಲಸಕ್ಕಾಗಿ ಇಲ್ಲಿ ಗೆಳೆಯರನ್ನು ಕಂಡಿದ್ದ. ಅದೊಂದು ಮನೆಯ ಮುಂದೆ ನಿಂತ.

" ಪಹಿಲ್‌ವಾನ್ ಇದ್ದಾರೇನು ? "

" ಯಾರು ? ಹರಿರಾಮ್ ಪಹಿಲ್‌ವಾನರೇ ? "

" ಹೌದು...... "

" ನೀವು...... ? "

" ಅವರ ಹಳೆಯ ಮಿತ್ರ. "

" ಅವರ ಮರ್ರಿಗೆ ಹೋಗಿದ್ದಾರೆ. "

" ಹಿಂದೆ...... ? "

" ಅದೇನೂ ತಿಳಿದಿಲ್ಲ. "

ನಿರಾಶನಾದ ಅಜಯ ಮುಂದೆ ನಡೆದ. ನಗರದಲ್ಲಿ ಮತ್ತೂ ಮುಕ್ಕಾಲು ಮೈಲಿ ದೂರದ, ಓಣಿಯನ್ನು ಹಾದು ಅಂಗಡಿಯೊಂದರ ಮುಂದೆ ನಿಂತ. ಅದು ಶರಣ ದಾಸನ ಅಂಗಡಿ. ಅಂಗಡಿ ಚಿಕ್ಕದಾದರೂ ಅದು ಕ್ರಾಂತಿಕಾರೀ ಚಳುವಳಿಯ ಇತಿಹಾಸವನ್ನೆಲ್ಲ ಬಲ್ಲುದು.

ಆದರೆ ಈಗ ವಿಚಾರಿಸಿದಾಗ ಅಲ್ಲಿ ದಾಸ್ ಇರಲಿಲ್ಲ. ಅವನು ಅಂಗಡಿಯನ್ನು ಬೇರೊಬ್ಬರಿಗೆ ವಿಕ್ರಯಿಸಿ ಎತ್ತಲೋ ಹೊರಟು ಹೋಗಿದ್ದ.

ಸುತ್ತಾಟವೆಲ್ಲ ವ್ಯರ್ಥವಾಯಿತು.

ಮತ್ತೆ ನೀರು ಕುಡಿಯುವ ಯತ್ನ. ಅದಕ್ಕಾಗಿ ಬಾವಿಯ ಬಳಿಗೆ ಯಾತ್ರೆ !

ಇನ್ನು ಹಿಂತಿರುಗುವುದೇ ಹಾದಿ ಎಂದುಕೊಂಡು ಅಜಯ ರೈಲ್ವೆ ಸ್ಟೇಷನ್ ಕಡೆಗೆ ಹೊರಟ. ತನ್ನ ಹಳೆಯ ಗೆಳೆಯರ ಬಗೆಗೆ ಚಿಂತಿಸಿದ. ಆದರೆ, ಯಾರ ನೆನಪೂ ಅವನಿಗಾಗಲಿಲ್ಲ. ಲಾಹೋರ್‌ನಲ್ಲಿ ಏನಾಯಿತೋ ಅದೂ ಅವನಿಗೆ ತಿಳಿದಿಲ್ಲ.

ಅವನು ನಡೆಯುತ್ತಿದ್ದಂತೆ ಯಾರೋ ತನ್ನ ಹಿಂದೆಯೇ ಬರುತ್ತಿರುವಂತೆ ಅವನಿಗೆ ಅನಿಸಿತು. ಅಜಯ ತಿರುಗಿ ನೋಡಿದ. ಮುಂಜಾನೆ ರೈಲ್ವೆ ಸ್ಟೇಷನ್ನಿನಲ್ಲಿ ಭೇಟಿಯಾದವನೇ ಮತ್ತೆ ಕಂಡುಬಂದಿದ್ದ.

ಮುಂಜಾವಿನಿಂದಲೂ ಈತ ತನ್ನ ಬೆನ್ನ ಹಿಂದೆ ಬಿದ್ದಿದ್ದಾನೆಯೇ ಎಂಬ ಸಂದೇಹ ಅಜಯನಲ್ಲಿ ಮೂಡಿತು. ಅದೇನೇ ಇದ್ದರೂ ಪರೀಕ್ಷಿಸಲೇ ಬೇಕಾಗಿದೆ. ಆಗುಂತಕನಿಂದ ದೂರವಾಗಲು ಸಾಧ್ಯವಿಲ್ಲವಾಗಿದೆ. ಆದುದ ರಿಂದ ಸಂಧಿಸಿ ಮಾತನಾಡುವದೇ ಉಚಿತ, ಎಂದುಕೊಂಡು ಅಜಯ ನಡೆಯನ್ನು ನಿಧಾನಿಸಿದ.

"ಅದೇನು ಅಷ್ಟು ಬೇಗನೆ ಹಿಂತಿರುಗುವಂತಿದೆ ?" ಎಂದು ಆತ ಪ್ರಶ್ನಿಸಿದ.

"ಹಾಗೇನೂ ಇಲ್ಲ. ಯಾರನ್ನೋ ಸಂಜೆಗೆ ನೋಡಬೇಕು. ಅದು ವರೆಗೆ ವಿಶ್ರಾಂತಿ ಪಡೆಯಲು ರೈಲ್ವೆ ಸ್ಟೇಷನ್ ಉಚಿತವಾದ ಸ್ಥಳ ತಾನೆ ?"

"ನಿಜ...ನಮ್ಮಂತಹವರಿಗಾಗಿ ವ್ಯವಸ್ಥಿತವಾದ ಛತ್ರ."

"ಸರ್ಕಾರ ನಮಗೆ ಮಾಡಿಕೊಟ್ಟ ಉಪಕಾರಗಳೆಂದರೆ ಇದೇ ತಾನೆ ?"

"ತಾತ್ಕಾಲಿಕವಾಗಿ ತಂಗಲು ರೈಲ್ವೆ ಸ್ಟೇಷನ್. ಖಾಯಂ ವಾಸಕ್ಕೆ ಜೇಲು," ಎನ್ನುತ್ತ ಆ ಹೊಸಬ ಅಜಯನ ಮುಖವನ್ನೇ ನೋಡಿದ. ಆದರೆ, ಅಜಯನಿಗೆ ಆಗಲೇ ಸಾಕಷ್ಟು ವರ್ಷಗಳ ಅನುಭವ, ಅಗ್ನಿ ಪರೀಕ್ಷೆ ಆಗಿದೆ. ಅವನ ಮುಖದಲ್ಲಿ ಯಾವ ಭಾವನೆಯನ್ನೂ ಆತ ವ್ಯಕ್ತಪಡಿಸಲಿಲ್ಲ.

"ಇಲ್ಲೇ ಏನು ತಾನೇ ಮಾಡುವುದಿದೆ ಬನ್ನಿ, ಚಹಾ ಕುಡಿದು ಬರೋಣ."

ತನ್ನ ಬಗೆಗೆ ಈ ಹೊಸಬ ತಿಳಿಯಲು ಎಲ್ಲ ಪ್ರಯತ್ನ ನಡೆಸುತ್ತಿದ್ದಾ ನೆಂಬುದು ಅಜಯನಿಗೆ ಈಗ ಖಚಿತವಾಯಿತು. ಅವನಂತೂ ನಕ್ಷತ್ರಕ ನಂತೆ ಬೆನ್ನು ಹತ್ತಿದ್ದಾನೆ. ತಾನು ಮಾತಿನಲ್ಲಿ ಎಚ್ಚರಿಕೆ ವಹಿಸಿದರೆ ಸರಿ ಎಂದುಕೊಂಡು ಅಜಯ ನಿರ್ಧರಿಸಿದ. ಅವನಿಗೂ ಈಗ ಚಹಾದ ಅಗತ್ಯ ವಿತ್ತು. ಅದು ಕೇವಲ ಚಹಾ ಮಾತ್ರ ಆದರೂ ಆಗಲಿ, ಅವನ ದಣಿವು ಕಡಿಮೆಯಾದೀತು.

ಇಬ್ಬರೂ ಚಹಾ ಅಂಗಡಿಗೆ ತೆರಳಿದರು. ಅಜಯ ತನ್ನ ಪರಿಸ್ಥಿತಿ ತಿಳಿಯದಂತೆ ಅದೆಷ್ಟೇ ಗಂಭೀರವಾಗಿ ವರ್ತಿಸಿದ್ದರೂ, ಅವನ ಮುಖ ಹಸಿದ ಪರಿಸ್ಥಿತಿಯನ್ನು ಪ್ರಕಟಿಸಿತ್ತು. ನೂತನ ಗೆಳೆಯ ಏನು ಬೇಕೆಂದು ಅಜಯನನ್ನು ಪ್ರಶ್ನಿಸಲೇ ಇಲ್ಲ. ತಾನಾಗಿಯೇ ಹೊಟ್ಟೆ ತುಂಬುವಷ್ಟು ಚಪಾತಿ,

ಪಲ್ಯ ಮತ್ತಿತರ ತಿಂಡಿತಿನಿಸುಗಳನ್ನು ತರಿಸಿ, ಅಜಯ ಬೇಡಬೇಡವೆಂದರೂ ತಿನ್ನಿಸಿದ.

ಹೊಟ್ಟೆಯ ಕಾಟ ತಪ್ಪಿತು. ಇನ್ನು ಇಪ್ಪತ್ನಾಲ್ಕು ತಾಸು ಹೋರಾಡಬಹುದು ಎಂದು ಯೋಚಿಸಿದ ಅಜಯ. ಆದರೂ ಈ ಕುರಿಯು ಕೊಬ್ಬುವಂತೆ ಮಾಡುತ್ತಿರುವವನು ಕಟುಕನೇ ಇರಬೇಕೆಂಬ ಸಂದೇಹ ಅವನಲ್ಲಿ ಮಾಯವಾಗಲಿಲ್ಲ.

ಆಗಲೇ ಮಧ್ಯಾಹ್ನ ಕಳೆದಿತ್ತು. ಸಂಜೆಯ ಗಾಡಿಗೆ ಮತ್ತೆ ಲಾಹೋರಿಗೆ ಹಿಂತಿರುಗಬೇಕೆಂದು ಅಜಯನ ನಿರ್ಧಾರವಾಗಿತ್ತು. ರಾವಲ್ಪಿಂಡಿಯಲ್ಲಿ ಅವನ ಗೆಳೆಯರಾರೂ ಇಲ್ಲ. ಅಡಗಿ ಕುಳಿತಿರಲು ಎಡೆಯೂ ಇಲ್ಲ. ಮುಂದಿನ ಊರಿಗಾದರೂ ಪ್ರಯಾಣ ಬೆಳೆಸೋಣವೆಂದರೆ ಕೈಯಲ್ಲಿ ಕಾಸೂ ಇಲ್ಲ. ಇದೀಗ ಜೆತೆಗೂಡಿದ ಸ್ನೇಹಿತನು ಯಾರೆಂಬ ಬಗೆಗೆ ಅಜಯನಿಗಿನ್ನೂ ಅರ್ಥವಾಗಿಲ್ಲ. ಆತನೇನೋ ತಾನು ಹಳೆಯ ಬಂಧು ಎಂದು ಹಳೆಯ ಕಥೆ ಹೇಳುತ್ತಲೇ ನಡೆದಿದ್ದಾನೆ. ಗುಲಾಬ್‌ಸಿಂಗ್ ಮಾಸ್ತರರ ಶಿಷ್ಯ ಎನ್ನುತ್ತಾನೆ. ಬೇಣಿತಾಯಿಯ ವಿಚಾರವನ್ನೂ ಅರಿತಿದ್ದಾನೆ. ಅಜಯನ ನಿತ್ಯ ಜೀವನದ ಬಗೆಗೆ ಅವನೂ ಹಲವಾರು ಪ್ರಶ್ನೆಗಳನ್ನು ಕೇಳಿದನಾದರೂ, ಅವುಗಳಿಗೆ ಅಜಯ ಸರಿಯಾದ ಉತ್ತರ ನೀಡಿರಲಿಲ್ಲ.

ಹೋಟೆಲಿನಿಂದ ಹೊರಬಿದ್ದ ಅವರು ಮತ್ತೆ ರೈಲ್ವೆ ಸ್ಟೇಷನ್ನಿಗೆ ಬಂದರು. ಅಲ್ಲಿನ ಕಲ್ಲುಬೆಂಚಿನ ಮೇಲೆ ಕುಳಿತರು.

ಇನ್ನೊಮ್ಮೆ ಎಂದಾದರೂ ಭೇಟಿಯಾಗುತ್ತೇನೆ ಎಂದು ತಿಳಿಸಿ ಆ ಗೆಳೆಯ ಹೊರಟುಹೋದ.

ರಾತ್ರಿ ಕತ್ತಲಾದ ಬಳಿಕವೇ ರೈಲು ಅತ್ತ ಬರುತ್ತದೆ. ಅದುವರೆಗೆ ಇನ್ನೇನು ಕಾದಿದೆಯೋ ಎಂಬ ಭೀತಿ ಅಜಯನನ್ನು ಕಾಡುತ್ತಿತ್ತು. ಬೆಂಚಿನ ಮೇಲೆ ಕುಳಿತು, ಬೆನ್ನು ಸೋತಿತು. ಪ್ಲಾಟ್‌ಫಾರಂ ಕಡೆಗೆ ಬಂದು ಒರಗು ಬೆಂಚಿನ ಮೇಲೆ ಕುಳಿತ. ಹಾಗೇ ಬಳಲಿದ, ಅವನ ಕಣ್ಣುಗಳು ಮುಚ್ಚಿಕೊಂಡವು.

ಸಂಜೆಯ ಸೂರ್ಯ ವೇಗವಾಗಿ ಇಳಿಯುತ್ತಿದ್ದ. ಇನ್ನೊಂದು ತಾಸು. ಅಷ್ಟರಲ್ಲಿ ರೈಲು ಬರಬಹುದು. ಹೋದ ದಾರಿಗೆ ಸುಂಕವಿಲ್ಲ ಎಂದುಕೊಂಡು ಅಜಯನೂ ಲಾಹೋರ್‌ಗೆ ಹಿಂತಿರುಗಬಹುದು.

ಅಷ್ಟರಲ್ಲಿ ಯಾರೋ ಇಬ್ಬರು ಅವನ ಬಳಿಗೆ ಬಂದು ಬೆಂಚಿನ ಮೇಲೆಯೇ ಕುಳಿತರು.

ಬಹಳ ಹೊತ್ತು ಯಾರೂ ಮಾತನಾಡಲಿಲ್ಲ. ಅವರಿಬ್ಬರು ಮಾತ್ರ ತಮ್ಮೊಳಗೆ ತಮ್ಮ ಸಂಸಾರ ತಾಪತ್ರಯಗಳ ಬಗೆಗೆ ಚರ್ಚಿಸುತ್ತಿದ್ದರು. ಅಂತೂ ಕೊನೆಗೆ ಮೌನ ಒಡೆಯಿತು.

" ಲಾಹೋರ್‌ಗೆ ಹೊರಟಿದ್ದೀರೇನು ?"

" ಇಲ್ಲ, ಯಾರನ್ನೋ ಕಾಯುತ್ತಿದ್ದೇನೆ. ಅವರು ಲಾಹೋರ್‌ಗೆ ಹೋಗುತ್ತಾರೆ," ಎಂದ ಅಜಯ.

ಮಾತು ಬೆಳೆಯಿತು. ವ್ಯಾಪಾರ ವ್ಯವಹಾರಗಳ ಬಗೆಗೇ ಧರ್ಮ ದೇವರುಗಳ ವಿಚಾರವಾಗಿಯೇ ಅವರು ಮಾತನಾಡಿದರು.

" ಇನ್ನರ್ಧ ಗಂಟೆಯಲ್ಲಿ ರೈಲು ಬರಬಹುದು. ಬನ್ನಿ, ಚಹಾ ಕುಡಿದು ಬರೋಣ."

ಅವರ ಒತ್ತಾಯಕ್ಕೆ ಕಟ್ಟುಬಿದ್ದು ಅಜಯ ಅವರನ್ನು ಹಿಂಬಾಲಿಸಿದ. ಆಗಲೇ ಸೂರ್ಯನೂ ಮುಳುಗಿದ್ದ. ಕತ್ತಲು ಇಳಿದು ಬಂದು, ಮಸುಕಾಗಿ ಬೀದಿ ಕಾಣಿಸುತ್ತಿತ್ತು. ಅಂಗಡಿಗಳು ಸೀಮೆ ಎಣ್ಣೆಯ ದೀಪದಿಂದ ತಮ್ಮ ಅಸ್ತಿತ್ವ ಪ್ರಕಟಿಸಿದುವು.

ನಡೆದು ಹೋಗುತ್ತಿದ್ದಂತೆ ಯಾರೋ ಇದಿರಿಗೆ ಬಂದರು. ಪೋಲೀಸ್ ಅಧಿಕಾರಿಯಂತಿದ್ದ ಆ ವ್ಯಕ್ತಿ. ಅಜಯನ ಹೃದಯ ಎಚ್ಚರಿಸಿತು. ಆತ ನೆಲವನ್ನು ನೋಡುತ್ತ ಮುನ್ನಡೆದ.

ಅಭ್ಯಾಸ ಬಲ ಅನೇಕ ವೇಳೆ ಅಕಾಲದಲ್ಲಿ ಕಥೆ ಹೇಳುತ್ತದೆ.

ಅವನ ಹೊಸ ಗೆಳೆಯರಲ್ಲೊಬ್ಬ ಥಕ್ಕನೆ ಕೈಯೆತ್ತಿ ವಂದಿಸಿದ.

ಅದು ಪೋಲೀಸರ ವಂದನೆ ಎಂಬುದನ್ನು ಅಜಯ ಗಮನಿಸದಿರಲಿಲ್ಲ.

ಆದರೂ ತನಗೇನೂ ತಿಳಿಯದೆಂಬಂತೆ ಅಜಯ ಅವರನ್ನು ಹಿಂಬಾಲಿಸಿದ. ಅಪಾಯ ಕಾಲದಲ್ಲಿ ಸ್ಥೈರ್ಯವೇ ಮುಖ್ಯ ಎಂಬುದು ಅವನಿಗೆ ಅರಿವಾಗಿತ್ತು. ಮೂವರೂ ಹೋಟೆಲ್ ಪ್ರವೇಶಿಸಿ ಚಹಾ ಕುಡಿಯಲು ಕುಳಿತರು. ಚಹಾ ಗ್ಲಾಸುಗಳು ಮೇಜಿನ ಮೇಲೆ ನಿಂತುವು. ಅಜಯ ಏನನ್ನೋ ಹುಡುಕುವವನಂತೆ ನಟಿಸುತ್ತ ಒಂದು ಗ್ಲಾಸನ್ನು ಕೆಳಕ್ಕೆ ಬೀಳಿಸಿದ.

ಗಾಬರಿ, ಪಶ್ಚಾತ್ತಾಪ, ಕ್ಷಮಾಯಾಚನೆಗಳನ್ನೆಲ್ಲ ಚೆನ್ನಾಗಿ ಅಭಿನಯಿಸುತ್ತ ಅಜಯ ಗ್ಲಾಸನ್ನು ಎತ್ತಿಕೊಂಡ. ಅರ್ಧ ಒಡೆದ ಗ್ಲಾಸು ಅವನಿಗೆ ಆಯುಧವೇ ಆಯಿತು. ಮಿಂಚಿನ ವೇಗದಲ್ಲಿ ಆ ಗ್ಲಾಸಿನಿಂದ ಗೆಳೆಯರಲ್ಲಿ ಒಬ್ಬನ ಮುಖಕ್ಕೆ ತಿವಿದ. ಮತ್ತೊಬ್ಬನ ಎದೆಗೆ ಚುಚ್ಚಿದ. ಈ ಆಕಸ್ಮಿಕದಿಂದ ಅವರು ಎಚ್ಚರವಾಗುವ ಮೊದಲೇ ಅಜಯ ನಸು ಕತ್ತಲೆಯಲ್ಲೇ ಹೋಟೆಲಿನಿಂದ ಹೊರಗೆ ನೆಗೆದು ಮಾಯವಾದ.

ಮುಖ, ಕಣ್ಣುಗಳಲ್ಲಿ ರಕ್ತ ಸೋರುತ್ತಿದ್ದ ಒಬ್ಬ ಕುಸಿದು ಬಿದ್ದ. ಇನ್ನೊಬ್ಬ ಎದೆಯ ಮೇಲೆ ಕೈ ಹಿಡಿದುಕೊಂಡು ಅಜಯನನ್ನು ಹಿಂಬಾಲಿಸಲು ಯತ್ನಿಸಿದ. ಆದರೆ, ಅಜಯ ಆಗಲೇ ಬಹಳ ದೂರ, ಮರಗಳ, ಕಟ್ಟಡಗಳ ಮರೆಯಲ್ಲಿ ಸಾಗುತ್ತ ನಡೆದಿದ್ದ.

ರೈಲು ರಸ್ತೆಯ ಪಕ್ಕದಲ್ಲೇ ಮುಂದಿನ ಸ್ಟೇಷನ್‌ವರೆಗೂ ನಡೆಯುವ ಶಿಕ್ಷೆ ಅವನಿಗೆ ಲಭಿಸಿತು.

ಲಾಹೋರ್‌ಗೆ ಮತ್ತೆ ಮುಂಜಾನೆ ಹಿಂತಿರುಗಿದ ಅಜಯ. ಲಾಹೋರಿ ಗೇಟ್ ಬಳಿಯಲ್ಲಿದ್ದ ಸ್ನೇಹಿತನ ಮನೆಗೆ ತೆರಳಿ, ಬಟ್ಟೆ ಬದಲಾಯಿಸಿ ಕೊಂಚ ವಿರಮಿಸಿದ. ಅಲ್ಲಿ ಪತ್ರಿಕೆಯೂ ಅವನ ಕೈಗೆ ದೊರೆಯಿತು. ಅದರಲ್ಲಿ ಅವನ ಗೆಳೆಯರ ದಸ್ತಗಿರಿಯ ಬಗೆಗೆ ಯಾವುದೇ ಸುದ್ದಿಯೂ ಇರಲಿಲ್ಲ.

ಆದರೂ ಪಾರ್ಟಿಯ ಮನೆಗಳಿಗೆ ಹೋಗಿ ವಿಚಾರಿಸುವುದು ಅಪಾಯ ಕಾರಿ ಎಂದೆನಿಸಿತು ಅಜಯನಿಗೆ. ಅವನು ನಗರದ ಹೊರವಲಯದಲ್ಲಿ, ಎಲ್ಲಾದರೂ ನಿರ್ಜನ ಪ್ರದೇಶದಲ್ಲಿ, ಸಂಜೆಯಾಗುವವರೆಗೂ ಕಾಲ ಕಳೆಯ ಬೇಕಾಗಿತ್ತು. ಅಜಯ ಗೆಳೆಯನ ಮನೆಯಿಂದ ಹೊರಟು, ನಿರ್ಜನ ಪ್ರದೇಶ ವಾದ ಮಸ್ತಿ ಗೇಟ್ ಬಳಿಗೆ ತೆರಳಿದ. ಅಲ್ಲಿ ಮರಗಿಡಗಳ ಮರೆಯಲ್ಲಿ, ಮುಸುಕು ಹಾಕಿಕೊಂಡು ಮಲಗಿ ಮುಂದಿನ ದಾರಿಯ ಬಗೆಗೆ ಚಿಂತಿಸಿದ.

ಸಂಜೆ ಸುಮಾರು ಐದು ಘಂಟೆಯ ವೇಳೆಗೆ ಅಜಯ ಅವನ ಹಳೆಯ ಗೆಳೆಯ ಪೂರಣ್‌ಸಿಂಗ್‌ನನ್ನು ಅಲ್ಲಿ ಸಂಧಿಸಿದ. ಮರಗಳ ಮರೆಯಲ್ಲಿ ಕುಳಿತಿದ್ದ ಅಜಯನೆಡೆಗೆ ಸಿಂಗ್ ಬಂದು ತಾನೂ ಕುಳಿತುಕೊಂಡ. ಪೂರಣ್ ಸಿಂಗ್ ಅಜಯನ ಸಹಪಾಠಿಯೂ ಆಗಿದ್ದ.

"ನನಗೆಲ್ಲ ತಿಳಿದಿದೆ. ನನ್ನ ಮನೆಗೇ ಬಂದುಬಿಡು."

"ಅದು ಪಾರ್ಟಿಯ ಮನೆಯ ಹತ್ತಿರವೇ ಇದೆ. ತೀರಾ ಅಪಾಯ."

"ಅಪಾಯವೇನೂ ಇಲ್ಲ. ನನ್ನ ಕೋಣೆಯಲ್ಲಿರು. ಕಿಟಿಕಿ ಬಾಗಿಲುಗಳನ್ನು ಭದ್ರಪಡಿಸಿದರಾಯಿತು."

ಅವನ ಒತ್ತಾಯಕ್ಕೆ ಮಣಿದು ಅಜಯ ನಡೆದ. ಆಗಲೇ ಎರಡು ದಿನಗಳಿಂದ ಊಟವಿಲ್ಲದೆ ಅವನು ಬಳಲಿದ್ದ. ಚೆನ್ನಾಗಿ ಊಟ ಮಾಡಿ, ಕೋಣೆಯೊಳಗೆ ವಿಶ್ರಮಿಸಿದ. ಮುಂಜಾನೆಯವರೆಗೂ ಗಾಢ ನಿದ್ರೆ ಅವನನ್ನು ಅಪ್ಪಿತು.

ಮುಂಜಾನೆ ಎದ್ದವನೇ ಅಜಯ ಕಿಟಿಕಿ ಬಾಗಿಲುಗಳನ್ನು ಅರೆತೆರೆದು ಇಣಿಕಿದ. ಅವನ ಪಾರ್ಟಿಯ ಮನೆ ಕಡೆಗೆ ದೃಷ್ಟಿ ಹಾಯಿಸಿದ. ಆ ಮನೆಯ ಮುಂದೆ ಪೋಲೀಸರು ಸುತ್ತಾಡುತ್ತಿದ್ದುದು ಅವನಿಗೆ ಕಾಣಿಸಿತು. ಅವನ ಶಂಕೆ ಬಲವಾಯಿತು. ಅವನು ಹೊರಗಡೆ ನಡೆದು ಸುತ್ತಾಡುವಂತೆಯೂ ಇರಲಿಲ್ಲ. ಎಲ್ಲರಿಗೂ ಅವನ ಪರಿಚಯವಿದೆ. ಈ ಕೋಣೆಯೊಳಗೇ ಬಾಗಿಲು ಭದ್ರಪಡಿಸಿಕೊಂಡು, ಉಸಿರು ಬಿಗಿಹಿಡಿದು, ಹಗಲೆಲ್ಲ ಕುಳಿತಿರುವುದು ತೀರಾ ಹಿಂಸೆ. ಶಾಲೆಗಳಿಗೆ ರಜಾ ದಿನ ಎಂಬುದು ಅವನಿಗೆ ನೆನಪಾಯಿತು.

ಅಜಯ ಮನೆಯಿಂದ ಮೆಲ್ಲನೆ ಹೊರಬಂದ. ಹಿಂದಿನ ಬಾಗಿಲಿನಿಂದ ಹೊರಟು, ಓಣಿಗಳಲ್ಲೇ ಸಾಗಿ, ಖಲ್ಸಾ ಹೈಸ್ಕೂಲಿನೊಳಗೆ ಕಾಲಿಟ್ಟ. ಅಲ್ಲಿ ಯಾರ ಸುಳಿವೂ ಇರಲಿಲ್ಲ. ಮುರಿದ ಕಿಟಿಕಿಯೊಂದರ ಮೂಲಕ ಒಳನುಗ್ಗಿ, ಒಂದು ಮೂಲೆಯಲ್ಲಿ ಒರಗಿಕೊಂಡ.

ಮಧ್ಯಾಹ್ನದ ವೇಳೆಗೆ ಪೂರಣ್‌ಸಿಂಗ್ ರೊಟ್ಟಿಯನ್ನು ಕಟ್ಟಿಕೊಂಡು ಅತ್ತ ಬಂದ. ಆಗಲೆ, ಅವನು ಸಾಕಷ್ಟು ಸುದ್ದಿ ಸಂಗ್ರಹಿಸಿದ್ದ. ಅಜಯನ ಗೆಳೆಯರೆಲ್ಲರೂ ದಸ್ತಗಿರಿಯಾಗಿದ್ದರು. ಹಲವಾರು ಮನೆಗಳ ಶೋಧವನ್ನು ಪೋಲೀಸರು ನಡೆಸಿದ್ದರು. ಅಜಯನನ್ನು ಪೋಲೀಸರೀಗ ಹುಡುಕುತ್ತಿದ್ದರು.

"ಇನ್ನು ನೀನಿಲ್ಲಿರುವುದು ತೀರಾ ಅಪಾಯ," ಎಂದು ಪೂರಣ್‌ಸಿಂಗ್ ಎಚ್ಚರಿಕೆ ನೀಡಿದ. ಅಜಯನ ಸೆರೆ ಖಚಿತವೆಂಬ ಭೀತಿ ಅವನಲ್ಲಿ ಮೂಡಿತ್ತು.

"ನಿಜ. ಆದರೆ ಎಲ್ಲಿಗೆ ಹೋಗಲಿ? ಹಣವಿದ್ದಿದ್ದರೆ, ಬಹಳ ದೂರ ಹೊರಟು ಹೋಗುತ್ತಿದ್ದೆ."

"ಸಾಧ್ಯವಾದ ವ್ಯವಸ್ಥೆ ನಾಳೆ ಮಾಡುತ್ತೇನೆ," ಎಂದು ಪೂರಣ್ ಭರವಸೆ ನೀಡಿದ. ಅಜಯನಿಗೆ ಪ್ರತಿ ನಿಮಿಷವೂ ಯುಗವಾಗಿ ಕಾಣಿಸು ತ್ತಿತ್ತು. ಸೂರ್ಯನಿನ್ನೂ ಮುಳುಗಿರಲಿಲ್ಲ. ತನ್ನ ಗೆಳೆಯರೆಲ್ಲರೂ ದಸ್ತಗಿರಿ ಯಾದ ಸುದ್ದಿ ಅಜಯನ ಹೃದಯವನ್ನು ಹಿಂಡುತ್ತಲಿತ್ತು. ಎತ್ತ ಹೋಗಲಿ, ಏನು ಮಾಡಲಿ, ಎಂಬ ಯೋಚನೆ ಕಾಡುತ್ತಿದ್ದರೂ ಯಾವ ಉತ್ತರವೂ ಅವನಿಗೆ ಹೊಳೆಯಲಿಲ್ಲ.

ಬೆಳಕು, ಹೋಗಲೋ ಬೇಡವೋ ಎಂದು ಇನ್ನೂ ತುಯ್ಯಲಾಡುತ್ತಿತ್ತು. ಅನೇಕ ವರ್ಷಗಳ ಕಾಲ ಆ ಶಾಲೆಯಲ್ಲಿ ಅಜಯ ಓದಿದ್ದ. ಹಳೆಯ ಬಾಲ್ಯದ ನೆನಪುಗಳೆಲ್ಲ ಮರುಕಳಿಸಿದವು. ಇನ್ನು ಈ ಶಾಲೆಯ ದರ್ಶನವಾದರೂ ಆಗುವುದೋ ಇಲ್ಲವೋ ಯಾರು ಬಲ್ಲ? ಅದೇ ಕೋಣೆಯಲ್ಲಿ ಅವನು ಓದಿದ್ದ. ಶಾಲೆಯಲ್ಲಿ ತಿರುಗಾಡಿದ್ದ. ಅಂಗಳದಲ್ಲಿ ಆಟವಾಡಿದ್ದ. ಕೋಣೆಯಿಂದ ಅಜಯ ಹೊರಗಡೆ ಬಂದ. ಒಮ್ಮೆ ಅಂಗಳದಲ್ಲಿ ನಿಂತು ಶಾಲೆಯನ್ನು ಕಣ್ಣು ತುಂಬ ನೋಡಿದ. ಮತ್ತೆ ತಿರುಗಿ, ಕಣ್ಣುಗಳನ್ನು ಒರೆಸಿಕೊಳ್ಳುತ್ತ ಅಲ್ಲಿಂದ ನಡೆದು ಬಿಟ್ಟ.

ಪೇಟೆಯಿಂದ ಬಹಳ ದೂರ ಹೋಗಬೇಕು. ಸಾಧ್ಯವಾದರೆ, ಲಾಹೋರನ್ನೇ ತ್ಯಜಿಸಿ ದೂರದ ಊರಿಗೆ ಹೋಗಿಬಿಡಬೇಕು ಎಂಬುದು ಅವನ ಬಯಕೆ.

ಬಯಕೆಗಳೆಲ್ಲ ಫಲಿಸಿದರೆ ಬದುಕೇ ನಂದನವಾದೀತು.

ಆ ರಾತ್ರಿ ಗುರುದತ್ ಭವನದಲ್ಲಿ ಕಳೆಯಲು ಅಜಯ ನಿರ್ಧರಿಸಿದ. ಅಲ್ಲಿಂದ ಖಾಲಿ ಕೋಣೆಯೊಳಗೆ ಹೋಗಿ, ಚಿಲಕ ಹಾಕಿ, ಉರುಳಿಕೊಂಡ. ಸೊಳ್ಳೆಗಳ ಕಾಟದಿಂದ ದೂರವಾಗಲು ಮುಸುಕು ಎಳೆದ. ಆದರೂ ಅವನಿಗೆ ನಿದ್ದೆ ಹತ್ತಲೊಲ್ಲದು. ಹಲವಾರು ಯೋಚನೆಗಳು; ಭೀತಿ, ಶಂಕೆಗಳು, ಬೇಡವೆಂದರೂ ಅವನನ್ನು ಕಾಡುತ್ತಿದ್ದವು.

ಪೂರಣ್ ಸಿಂಗ್ ರೊಟ್ಟಿ ತಂದು ಕೊಟ್ಟ. ಹಾಗೇ ಹತ್ತು ರೂಪಾಯಿ ಗಳನ್ನು ಅಜಯನ ಕೈಲಿಟ್ಟ. ಮುಂಜಾನೆಯೇ ಊರು ಬಿಡಬೇಕೆಂದು ಎಚ್ಚರಿಸಿದ.

ಸುಮಾರು ಹತ್ತು ಘಂಟೆ ರಾತ್ರೆ. ಯಾರೋ ಆ ಕಟ್ಟಡದ ಸುತ್ತ ನಡೆದಂತೆ ಕಂಡು ಬಂತು. ಉಸಿರು ಬಿಗಿ ಹಿಡಿದು ಅಜಯ ಮಲಗಿಕೊಂಡ.

ಮೂಲೆ ಮೂಲೆಯನ್ನು ಯಾರೋ ಹುಡುಕುತ್ತಿರುವಂತೆ ಕೇಳಿಸಿತು. ರಾತ್ರಿ ಇಡೀ ಜಾಗೃತಾವಸ್ಥೆಯಲ್ಲೇ ಕಳೆಯಿತು.

ಬೆಳಕು ಹರಿಯುತ್ತಿದ್ದಂತೆ ಅಜಯ ಅಲ್ಲಿಂದ ಹೊರಬಿದ್ದ. ರಾವೀ ನದಿಯ ಕಡೆಗೆ ನಡೆದ. ಸೇತುವೆಯನ್ನು ಹಾದು, ಆಚೆ ಕಡೆಯ ದಡ ಸೇರಿದ. ನದಿಯ ನೀರಲ್ಲಿ ಮುಖ ತೊಳೆದು ಸಾಕಷ್ಟು ನೀರು ಕುಡಿದ.

ಇನ್ನೂ ಊರಿಗೆ ಬೆಳಗಾಗಿರಲಿಲ್ಲ. ಹಾಯಾಗಿ ತಂಗಾಳಿ ಬೀಸುತ್ತಿತ್ತು. ಮರಗಿಡಗಳೂ, ಹಸಿರು ಹುಲ್ಲೂ ಅವನನ್ನು ಸ್ವಾಗತಿಸಿದವು. ಅಜಯ ಅಲ್ಲೇ ಮರದಡಿಯಲ್ಲಿ, ಹುಲ್ಲಿನ ಮೇಲೆ ಒರಗಿಕೊಂಡ. ನಿದ್ದೆಯೂ ಹತ್ತಿತು.

ಸುಮಾರು ಹತ್ತು ಘಂಟೆ ಇರಬಹುದು.

ಕಾಲುಗಳೆಡೆಯಲ್ಲಿ ಅದೇನೋ ತಣ್ಣಗಿನ ವಸ್ತು ಸಿಲುಕಿದಂತೆ ಅನಿಸಿ ಅಜಯನಿಗೆ ಎಚ್ಚರವಾಯಿತು. ಹಾಗೇ ಮಲಗಿಕೊಂಡೇ ನೋಡಿದ.

ಹಾವೊಂದು ಅವನ ಕಾಲಿನ ಮೇಲಿನಿಂದ ಹಾದು ಹೋಯಿತು.

ಅಜಯ ಎದ್ದು ಕುಳಿತ. ಹಾವು, ನಿಜ. ಅದು ಆ ಹುಲ್ಲಿನಲ್ಲಿ ವೇಗ ವಾಗಿ ಸಾಗಿ ಮರೆಯಾಯಿತು.

ಸಾವಿನ ದವಡೆಯಿಂದ ಪಾರಾಗಿದ್ದ ಅಜಯ. ಆದರೆ, ಎಂಥ ಸಾವು ? ದೇಶದ ಬಿಡುಗಡೆಗಾಗಿ ಹೋರಾಡಿ, ಫಾಶಿಯ ಕಂಬವೇರಬೇಕೆಂದು ಬಯಸಿ ದುಡಿದವನಿಗೆ ಇಂಥ ದುರ್ಮರಣವೇ ? ಅವನ ಇಡೀ ದೇಹವೇ ಕಂಪಿಸಿತು. ಅದೊಂದು ಕ್ಷಣದ ಘಟನೆ ಅವನ ಮೇಲೆ ಸಿಡಿಲೆರಗಿದಂತೆ ಆಗಿತ್ತು.

ಕಣ್ಣುಜ್ಜಿಕೊಂಡು ಅಜಯ ಸುತ್ತಲೂ ನೋಡಿದ.

ದೂರದಲ್ಲಿ ರಸ್ತೆಯಲ್ಲಿ ಸೈಕಲ್ ಸವಾರನೊಬ್ಬ ಇಕ್ಕಡೆಗಳಿಗೂ ಅತ್ತಿತ್ತ ನೋಡಿಕೊಂಡು ನಿಧಾನವಾಗಿ ಸಾಗುತ್ತಿದ್ದ.

ಅವನ ಆ ನೋಟ ಸಂದೇಹವನ್ನು ಹುಟ್ಟಿಸುವಂತಿತ್ತು.

ಅಜಯ ಮರದ ಮರೆಯಲ್ಲಿ ಅಡಗಿ ಕುಳಿತುಕೊಂಡ.

ಮರದ ರೆಂಬೆಯ ಮೇಲೆ ಕುಳಿತಿದ್ದ ಕಾಗೆಯೊಂದು ವಿಚಿತ್ರವಾಗಿ ಕೂಗುತ್ತಾ, ರೆಕ್ಕೆಗಳನ್ನು ಬಡಿದು ಗದ್ದಲ ಮಾಡಿತು.

ಅಜಯ ಅಲ್ಲಿಂದೆದ್ದು ಮತ್ತೊಂದು ಪೊದರಿನ ಕಡೆಗೆ ನಡೆದ.

ಆ ಕಾಗೆ, ಇನ್ನೂ ಜೋರಾಗಿ ಕೂಗಿ ಅಜಯನನ್ನೇ ಕುಕ್ಕುವಂತೆ ಅವನೆಡೆಗೆ ಧುಮುಕಿ ಮೇಲಕ್ಕೆ ಹಾರಿತು.

ಕೆಲವೇ ನಿಮಿಷಗಳು...ಯಾರೋ ಕೂಗಿ ಕರೆದಂತಾಯಿತು.

"ಸರ್ದಾರ್...ಕೊಂಚ ನಿಲ್ಲಿ..."

ಅಜಯ ತಿರುಗಿ ನೋಡಿದ. ಯಾರೋ ಅವನೆಡೆಗೆ ಧಾವಿಸಿ ಬರುತ್ತಿದ್ದರು. ಅಜಯ ಹೊಲವನ್ನು ಹಾದು ವೇಗವಾಗಿ ನಡೆದ. ಓಟದ ಸಿದ್ಧತೆ ಮಾಡಿಕೊಂಡ.

ಅಷ್ಟರಲ್ಲಿ ಪೋಲೀಸರ ಶಿಳ್ಳು ಕೇಳಿಸಿತು.

ಹತ್ತಾರು ಮಂದಿ ಎಲ್ಲ ಕಡೆಯಿಂದಲೂ ಅವನ ಕಡೆಗೆ ನಡೆದು ಬಂದರು. ಕೆಲವೇ ನಿಮಿಷಗಳ ಹಿಂದೆ ಇಬ್ಬರೇ ಕಾಣಿಸಿಕೊಂಡಿದ್ದರು. ಈಗ ಹತ್ತಾರು ಮಂದಿ!

ಅಜಯ ಮುಂದೆ ನಡೆಯದಾದ.

ಒಬ್ಬ ಅವನ ಅಂಗಿಯನ್ನು ಹಿಡಿದು ಉಸಿರು ಕಟ್ಟುವಂತೆ ತಿರುವಿದ.

ಮತ್ತೊಬ್ಬ ಕೈಗೆ ಬೇಡಿ ತೊಡಿಸಿದ.

ಅಜಯ ಮುಗುಳು ನಗೆ ನಕ್ಕ.

ಅವನ ಜೀವಮಾನದಲ್ಲೇ ಮಹೋನ್ನತ ಘಟನೆ ಇದು. ಅವನು ಬಾಲ್ಯದಿಂದಲೂ ಕಾಣುತ್ತಿದ್ದ ಕನಸಿನ ನಿಜವಾದ ಸುವರ್ಣ ದಿನ.

ಅದೃಷ್ಟದ ಕುಲಿಮೆಯಿಂದ ನೆಗೆವ ಕಿಡಿಯಂತಿತ್ತು ಅವನ ಮುಗುಳು ನಗೆ!

## ೨೧

ಅಜಯ ಪೋಲೀಸರ ಕೈಯಲ್ಲಿ ಸಿಕ್ಕಿಬಿದ್ದ !

ಸಾಮ್ರಾಜ್ಯಶಾಹಿ ಅರಸೊತ್ತಿಗೆಯ ಈ ಜೀತದ ಗುಲಾಮರನ್ನು ಕಂಡಾಗ ಲೆಲ್ಲ ಅವನ ಮೈ-ಮನ ಉರಿಯುತ್ತಿತ್ತು.

ಎಂದಿನವರೆಗೆ ಈ ಪೋಲೀಸ್ ಪಡೆ ಹೀಗೇ ಇರುವುದೋ ಅಂದಿನವರೆಗೆ ಯಾವುದೇ ಸ್ವಾತಂತ್ರ್ಯವೂ ಸ್ವಾತಂತ್ರ್ಯವಾಗಲಾರದು ಎಂಬುದು ಕ್ರಾಂತಿಕಾರರ ಖಚಿತ ಅಭಿಮತ.

ಶಾಂತನಾಗಿದ್ದರೂ ಅಜಯನ ಮನದೊಳಗೆ ಭೀಕರ ಜ್ವಾಲೆ ಉರಿಯು ತ್ತಿತ್ತು.

ಭಾರತ ಮಾತೆಗೆ ಅರ್ಪಿಸಿದ ಕರ್ಪೂರದಂತೆ ಅವನು ಉರಿಯುತ್ತಿದ್ದ.

ಅಕ್ಬರಿ ಮಂಡಿ ಪೋಲೀಸ್ ಸ್ಟೇಷನ್ನಿನಲ್ಲಿ ಅವನಿಗೀಗ ಕಾಲುಗಳಿಗೂ ಬೇಡಿ ಬಿತ್ತು.

ಅಲ್ಲಿಂದ ಮುಂದೆ ವಿವಿಧ ಪೋಲೀಸ್ ಅಧಿಕಾರಿಗಳ ಪ್ರಶ್ನೆಗಳು, ವಿಚಾರಣೆಗಳು, ನಿಂದೆಗಳು, ಅಪಹಾಸ್ಯಗಳು ಹಾಗೂ ಚಿತ್ರಹಿಂಸೆಗಳು ಒಂದೊಂದಾಗಿ ನಡೆದುವು. ಅದೆಲ್ಲವನ್ನು ಇದಿರು ನೋಡುತ್ತಿದ್ದ ಅಜಯ, ಈಗ ಬೆದರುವ ಕಾರಣವೇ ಇರಲಿಲ್ಲ.

" ನೀನು ಯಾವಾಗ ಪಾರ್ಟಿ ಸೇರಿದೆ ?"

ಜಿಲ್ಲಾ ಪೋಲೀಸ್ ಅಧಿಕಾರಿ ಪ್ರತಾಪ್‌ಸಿಂಗ್ ತನ್ನ ಕುರ್ಚಿಯನ್ನು ಅಜಯನ ಬಳಿಗೆ ಸೆಳೆದು ಪ್ರಶ್ನಿಸಿದ.

" ನನಗೆ ಪಾರ್ಟಿಯ ವಿಚಾರವೇ ತಿಳಿಯದು. ನಾನು ವಿದ್ಯಾರ್ಥಿ."

" ವಿದ್ಯಾರ್ಥಿ ? ವಿದ್ಯಾರ್ಥಿಯಾದವನು ಪೋಲೀಸರನ್ನು ಹೆದರಿಸಲು ಅದೇಕೆ ಬಾಂಬ್ ಎಸೆಯಬೇಕು ? ಪೋಲೀಸರ ಬಗೆಗೆ ಏಕೆ ದ್ವೇಷ ?"

ಅಜಯ ಉತ್ತರಿಸಲಿಲ್ಲ. ಸಿಂಗ್ ಪ್ರಶ್ನಿಸುತ್ತಲೇ ಇದ್ದ. ಮತ್ತೆ ಅದೇ ಪ್ರಶ್ನೆ, ಅದಕ್ಕೂ ಉತ್ತರ ಸಿಗಲಿಲ್ಲ.

ಸಿಂಗ್ ನಡೆದ ಎಲ್ಲ ಘಟನೆಗಳನ್ನು ವಿವರವಾಗಿ ಕಥೆ ಹೇಳುವಂತೆ ಹೇಳ ತೊಡಗಿದ. ಆತ ಆತ್ಮವಿಶ್ವಾಸದಿಂದ ಗಂಭೀರವಾಗಿ ಮಾತನಾಡಿದ. ಸಿಬ್ ಖೈದಿಯಾದ ಅಜಯನಿಗೆ ನೆರವಾಗುವ ಬಯಕೆ ವ್ಯಕ್ತಪಡಿಸಿದ.

ಅಜಯನ ತಾಳ್ಮೆ ಕೆಟ್ಟಿತು. ಆಗಲೇ ಇಂಥ ಮಥನ ನಾಲ್ಕಾರು ಬಾರಿ ನಡೆದಿತ್ತು.

ಪೋಲೀಸ್ ಅಧಿಕಾರಿಗಳ ತಾಳ್ಮೆ ಬೇಗನೆ ಕೆಡುತ್ತದೆ. ಕೂಡಲೇ ಬಲಾತ್ಕಾರ, ಅವಾಚ್ಯ ಶಬ್ದಗಳು ಆರಂಭವಾಗುತ್ತವೆ. ಅಕ್ಬರಿ ಮಂಡಿ ಪೋಲೀಸ್ ಇನ್ಸ್‌ಪೆಕ್ಟರ್ ಮೂರನೆಯ ದಿನವೇ ತನ್ನ ನಿಜರೂಪ ತೋರಿಸಿದ.

"ನಿಮ್ಮ ವಿಚಾರ ನನಗೆ ತಿಳಿಯದು. ನಾನಂತೂ ನಿಮ್ಮ ಕೈಯಲ್ಲಿ ಸಿಕ್ಕಿ ಬಿದ್ದಿದ್ದೇನೆ. ಏನು ಮಾಡುತ್ತೀರೋ ಮಾಡಿ."

ಅಜಯನ ಈ ಉದ್ರೇಕದಿಂದಲೂ ಪ್ರತಾಪ್‌ಸಿಂಗ್ ರೊಚ್ಚಿಗೇಳಲಿಲ್ಲ.

"ನಿನಗೇಕೋ ನಾನು ಪೋಲೀಸ್ ಅಧಿಕಾರಿ ಎಂಬುದರಿಂದ ಸಂದೇಹ ಬಂದಿದೆ. ಆಗಲೇ ಸಿಟ್ಟಿನಿಂದ ನಿನ್ನ ಮುಖ ಕೆಂಪಾಗಿದೆ. ಕೋಪ ಒಳ್ಳೆಯದಲ್ಲ. ನಿನ್ನ ಗೆಳೆಯರು ಆಗಲೇ ನಡೆದುದೆಲ್ಲವನ್ನೂ ಹೇಳಿದ್ದಾರೆ."

ಸಮಾಧಾನದ ಹೊಸ ತಂತ್ರದ ಬಾಣವನ್ನು ಸಿಂಗ್ ಹೊರತೆಗೆದ. ಅಜಯ ಮಾತ್ರ ಮೌನವನ್ನೇ ತಳೆದ.

"ಇಂದ್ರಪಾಲ್‌ನ ಪರಿಚಯವಿದೆಯೇ ?"

"ಇಲ್ಲ."

"ನಿಜ ! ನಿನ್ನಿಂದ ಇಲ್ಲವೆಂದು ಹೇಳಿಸಲೆಂದೇ ಈ ಪ್ರಶ್ನೆ ಕೇಳಿದೆ. ನಿನ್ನ ಗೆಳೆಯರು ಕೆಲವರು ನಡೆದುದೆಲ್ಲವನ್ನು ಹೇಳಿದ್ದರೂ ನೀನೀಗ ನಿರಾಕರಿಸುತ್ತಿದ್ದೀಯ. ವಿಚಾರ ಮಾಡು, ಕನಸು ಕಾಣುತ್ತ ಕುಳಿತಿರಬೇಡ."

ಸಿಂಗ್ ಅಜಯನ ಬೆನ್ನು ತಟ್ಟಿ ಅಲ್ಲಿಂದ ಹೊರಟುಹೋದ. ಆದರೆ, ಅವನು ಅಜಯನ ಮನಸ್ಸಿನಲ್ಲಿ ಸಂದೇಹದ ಬೀಜವನ್ನು ಬಿತ್ತಿದ್ದ.

ಯಾರು ಈ ಪೋಲೀಸರ ಹಿಂಸೆ ತಡೆಯಲಾರದೆ ಪಾರ್ಟಿಯ ಕತೆ ಹೇಳಿರಬಹುದು ? ಯಶ್‌ಪಾಲ್, ಚಂದ್ರಶೇಖರ ಆಜಾದ್ ಮತ್ತಿತರ ಕೆಲವರು ಇನ್ನೂ ದಸ್ತಗಿರಿಯಾಗಿಲ್ಲ ಎಂಬುದು ಅಜಯನಿಗೆ ತಿಳಿದೇ ಇತ್ತು. ತನಗಿಂತ ಮೊದಲು ಸೆರೆಯಾದವರು ಸುದ್ದಿ ಹೇಳಿರಬಹುದೇ ?

ಸಂದೇಹದ ಸುಳಿಯಲ್ಲಿ ಸಿಲುಕಿ, ಸೊಳ್ಳೆಗಳ ಕಾಟಕ್ಕೆ ಒಳಗಾಗಿ ಅಜಯ ನಿಗೆ ನಿದ್ರೆಯೂ ಬರಲಿಲ್ಲ.

ಮರುದಿನ ಮತ್ತೆ ಡಿ. ಎಸ್. ಪಿ. ಸಿಂಗ್ ಅವನೆಡೆಗೆ ಬಂದ.

"ನೀನೂ ನಿನ್ನ ಗೆಳೆಯರೂ ಗುರ್ಜನ್‌ವಾಲಾದಲ್ಲಿ ಬಾಂಬ್ ಸಿಡಿಸಿದ್ದೀರಿ ಎಂದು ತಿಳಿಯಿತು. ಅದರಿಂದಾಗಿ ಒಬ್ಬ ಪೋಲೀಸ್ ಮೃತನಾದ."

ಅಜಯ ಮಾತನಾಡಲಿಲ್ಲ. ಸಿಂಗ್ ಪುನಃ ಹೇಳಿದ.

"ಕೊಲೆಗಡುಕರಂತೆ ಹಟ ಮಾಡಬೇಡ. ನಿನ್ನ ಮರಣದಂಡನೆ ಖಚಿತ ವಾಗುತ್ತಿದೆ."

"ನೀವು ನನ್ನ ಮೇಲೆ ಅಂಥ ಆರೋಪ ಹುಟ್ಟಿಸಲು ಯತ್ನಿಸುತ್ತಿದ್ದೀರಿ. ಯಾರು ಹೇಳಿದರು ಈ ಕಥೆ ? ಅವರನ್ನು ನೋಡಿ ವಿಚಾರಿಸುತ್ತೇನೆ," ಎಂದ ಅಜಯ.

"ಹಾಗೆ ವ್ಯವಸ್ಥೆ ಮಾಡುವ ಅಧಿಕಾರ ನನಗಿಲ್ಲ."

"ಅವನ ಹೇಳಿಕೆ ತೋರಿಸಿ."

"ಆಪಾದಿತರ ಸಹಿ ಪಡೆಯುವ ಕೆಲಸವನ್ನು ನಾವು ಮಾಡುವುದಿಲ್ಲ. ಆದರೆ ಒಂದು ಮಾತು ನಿಜ. ದಸ್ತಗಿರಿಯಾದವರೆಲ್ಲ ಪೂರ್ಣ ಹೇಳಿಕೆ ಕೊಟ್ಟಿದ್ದಾರೆ. ಈಗ ಗುಟ್ಟಿನ ವಿಷಯವೇನೂ ಉಳಿದಿಲ್ಲ."

"ನೀವು ಸುಳ್ಳು ಹೇಳುತ್ತೀರಿ."

"ಅದಕ್ಕೇ ನೀನು ಹುಡುಗ ಅನ್ನುತ್ತಿರುವುದು. ತಿಳಿಯಿತೇನು ? ಪಂಡಿತ ಇಂದ್ರಪಾಲ್, ಶಿವರಾಮ್, ಶರಣದಾಸ್, ಹಾಗೂ ಖೈರಾತಿ ರಾಮ್ ಇವರೂ ಸರ್ಕಾರದ ಪರವಾಗಿ ಸಾಕ್ಷಿ ಹೇಳಲಿದ್ದಾರೆ. ಇಡೀ ಆರೋಪ ನಿರಾ ಕರಿಸುವ ಹೊಣೆ ನಿನ್ನ ಮೇಲೆ ಬೀಳುತ್ತದೆ."

ಅತ್ಯಂತ ಬಲವಾದ ಬ್ರಹ್ಮಾಸ್ತ್ರವನ್ನೇ ಸಿಂಗ್ ಈಗ ಬಳಸಿದ್ದ. ಸಿಂಗ್ ಅಜಯನ ಹಟಮಾರಿತನವನ್ನು ಅಪಹಾಸ್ಯ ಮಾಡಿದ. ಮುಂದೆ ಇತರ ಅಧಿಕಾರಿಗಳು ಏನೇನು ಹಿಂಸೆ ಕೊಡಬಹುದೆಂಬುದನ್ನೆಲ್ಲ ವಿವರಿಸಿದ.

"ಮುಂದೇನಾದೀತೆಂದು ನೀವು ಹೇಳುವಂತಿದೆ."

"ನೀನು ಮೂರ್ಖ. ಇದುವರೆಗೆ ನಾನು ನಿನಗೆ ಅಪಾಯವಾಗದಂತೆ ಯತ್ನಿಸಿದ್ದೇನೆ. ನಿನ್ನ ಗೆಳೆಯರು ಬಗೆದ ದ್ರೋಹವನ್ನು ನೀನಿನ್ನೂ ಅರ್ಥ ಮಾಡಿಕೊಳ್ಳದಿದ್ದರೆ ನಿನಗೆ ದೇವರೇ ಗತಿ."

ಸಿಂಗ್ ಹೊರಟುಹೋದ. ಅಜಯ ತನ್ನ ಕೋಣೆಯನ್ನು ಸೇರಿದ. ಕೋಣೆಯ ಬಾಗಿಲು ಭದ್ರವಾಯಿತು.

ಎರಡು ದಿನಗಳ ಅನಂತರ ಮಹಮ್ಮದೀಯ ಪೋಲೀಸ್ ಇನ್ಸ್‌ಪೆಕ್ಟರ್ ಒಬ್ಬ ಅಜಯನನ್ನು ಪ್ರಶ್ನಿಸಲು ಬಂದ. ಖೋಟಾ ನಾಣ್ಯ ತಯಾರಿಕೆ ಬಗೆಗೆ ಆತ ಪ್ರಶ್ನಿಸಿದ. ಅಜಯ ಯಾವುದೇ ಉತ್ತರವನ್ನು ಕೊಡಲಿಲ್ಲ. ಪರಿಣಾಮ ವಾಗಿ ಅವಾಚ್ಯ ಮಾತುಗಳ ಆಶೀರ್ವಾದ ದೊರೆಯಿತು. ಇಬ್ಬರು ಕಾನ್ಸ್ ಟೇಬಲ್‌ಗಳು ಅಜಯನನ್ನು ಚೆನ್ನಾಗಿ ಹೊಡೆದು ಹಿಂಸಿಸಿದರು. ಯಾವುದೇ ಹಿಂಸೆಗೂ ಅಜಯ ಜಗ್ಗಲಿಲ್ಲ. ಇನ್ಸ್‌ಪೆಕ್ಟರ್ ನಿರಾಶನಾದ.

ನಾಲ್ಕಾರು ದಿನಗಳಿಂದಲೂ ಸಿಂಗ್ ಆ ಕಡೆಗೆ ಬಂದಿರಲಿಲ್ಲ. 'ಕೋಟೆ' ಸ್ಟೇಷನ್‌ನಲ್ಲಿನ ಕಂಬವೊಂದಕ್ಕೆ ಕೈಕಾಲುಗಳಿಗೆ ಬೇಡಿ ತೊಡಿಸಿದ ಅಜಯನನ್ನು ಈಗ ಕಟ್ಟಿಹಾಕಲಾಗಿತ್ತು. 'ಕೋಟೆ' ಎನಿಸಿದ್ದರೂ ಇಲ್ಲಿ ವಿಶೇಷವೇನೂ ಇರಲಿಲ್ಲ. ಇದ್ದ ಸುಮಾರು ಹತ್ತು ಹನ್ನೆರಡು ಕತ್ತಲ ಕೋಣೆಗಳಲ್ಲಿ ತೀವ್ರ ಅಪಾಯಕಾರಿ ಖೈದಿಗಳನ್ನು ಇಡಲಾಗುತ್ತಿತ್ತು. ಮಿಕ್ಕವರನ್ನು ಹಾಲ್‌ನಲ್ಲೂ ಜಗಲಿಯಲ್ಲೂ ನಿಂತ ಹಳೆಯ ಕಂಬಗಳಿಗೆ ಬಿಗಿದಿರುತ್ತಿದ್ದರು. ಅಲ್ಲಿ ಒಂದು ಸೌಲಭ್ಯವೆಂದರೆ, ಒಳ ಧ್ವನಿಯಲ್ಲೇ ಖೈದಿಗಳು ಪರಸ್ಪರ ಮಾತನಾಡಿಕೊಳ್ಳ ಬಹುದು. ಅದನು ಪೋಲೀಸರು ನೋಡಿದರೆ ಮಾತ್ರ ಅಪಾಯ ಇದ್ದೇ ಇದೆ.

ಅದೊಂದು ದಿನ ಪ್ರತಾಪ್‌ಸಿಂಗ್, ಅಜಯನನ್ನು ಕಚೇರಿಗೆ ಬರಮಾಡಿ ಕೊಂಡರು. ಅವರೊಬ್ಬರೇ ಕೋಣೆಯಲ್ಲಿ ಕುಳಿತಿದ್ದರು.

"ನಿನ್ನ ಮಿತ್ರ ಇಂದ್ರಪಾಲ್ ತಪ್ಪೊಪ್ಪಿಕೊಂಡಿದ್ದಾನೆ. ಸರ್ಕಾರದ ಪರ ಸಾಕ್ಷಿ ಹೇಳಲಿದ್ದಾನೆ. ಇತರ ನಾಲ್ಕು ಮಂದಿಯೊಡನೆ ಅವನು ಕ್ಷಮಾದಾನ ಬೇಡಿದ್ದಾನೆ. ನಿನ್ನ ವಿಚಾರವೇನು ?"

ಅಜಯನ ಮೇಲೆ ಸಿಡಿಲು ಬಡಿದಂತಾಯಿತು. ಅವನು ಮೂಕನಾಗಿ ಕುಳಿತುಕೊಂಡ.

" ನಾಳೆ ಸರ್ಕಾರ ಅವರನ್ನು ಕ್ಷಮಿಸಲಿದೆ. ಈಗಲೂ ನಿನಗೆ ಅವಕಾಶ ಇದ್ದೇ ಇದೆ. ಪೂರ್ಣ ಹೇಳಿಕೆ ನೀಡಿ ಪ್ರಾಣ ಉಳಿಸಿಕೊಳ್ಳಬಹುದು."

ಅಜಯ ಉತ್ತರ ನೀಡಲಿಲ್ಲ. ಅವನನ್ನು ಪೋಲೀಸರು ಪುನಃ ಕರೆತಂದು ಅವನಿದ್ದ ಸ್ಥಳದಲ್ಲೇ ಕಂಬಕ್ಕೆ ಬಿಗಿದರು. ಅಜಯ ಅಲ್ಲೇ ತನ್ನ ಹರಕು ಕಂಬಳಿ ಮೇಲೆ ಮುದುಡಿ ಕುಳಿತ. ಅವನ ತಲೆಯಲ್ಲಿ ಸಾವಿರ ಯೋಚನೆಗಳು ಸುಳಿದುವು. ಅವನು ಪೋಲೀಸರು ಹಾಗೂ ಗಾರ್ಡ್‌ಗಳ ಜತೆ ಮಾತನಾಡಿ ಸಂಗ್ರಹಿಸಿದ ಸುದ್ದಿಯೊಂದಿಗೆ ಈಗ ದೊರೆತ ವಾರ್ತೆಯನ್ನು ಸೇರಿಸಿ ಮೆಲುಕು ಹಾಕಿದ.

ಪೋಲೀಸರೀಗ ಸಾಕಷ್ಟು ಹೇಳಿಕೆ ಮತ್ತು ಸಾಕ್ಷ್ಯ ಸಂಗ್ರಹಿಸಿ, ವಿಚಾರಣೆ ಆರಂಭಿಸಲು ಸಿದ್ಧತೆ ನಡೆಸಿದ್ದರು. ಆದರಿಂದಾಗಿ ಆರೋಪಿಗಳ ಮೇಲಿನ ಹಿಂಸೆ ಕಡಮೆಯಾಗಿತ್ತು. ಬಂಧುಗಳ ಭೇಟಿಗೆ ಅವಕಾಶ ಕೊಡಲಾಗಿತ್ತು. ಆಹಾರ ಹಾಗೂ ಇತರ ವಿಚಾರದಲ್ಲಿನ ದೂರುಗಳ ಕಡೆಗೆ ಗಮನ ಕೊಡ ಲಾಯಿತು.

ಇದಾದ ಕೆಲವು ದಿನಗಳಲ್ಲಿ ಅಜಯ ಮತ್ತು ಅವನ ಗೆಳೆಯರ " ಸ್ಟೇಷನ್ " ವಾಸ ಅಂತ್ಯವಾಯಿತು. ಗೆಳೆಯರೆಲ್ಲರನ್ನು ಪೋಲೀಸ್ ಸ್ಟೇಷನ್ ಗಳಿಂದ ಈಗ ನಿಜವಾದ ಜೇಲಿಗೆ ಕಳುಹಿಸಲಾಯಿತು.

ಮೊದಲ ಬಾರಿಗೆ, ಬಹಳ ದಿನಗಳ ಅನಂತರ, ಗೆಳೆಯರೆಲ್ಲರೂ ಜೇಲಿನಲ್ಲಿ ಒಂದುಗೂಡಿದರು. ಅಜಯನಿಗೆ ಇದುವರೆಗಿನ ಸಂಕಟಗಳೆಲ್ಲ ಒಮ್ಮೆಲೆ ಮರೆತು ಹೋದುವು. ಆನಂದದಿಂದ ಉತ್ಸಾಹಗೊಂಡ. ಪಂಡಿತ್ ರೂಪ್‌ಚಂದ್, ಜಹಂಗೀರಿಲಾಲ್, ಕುಂದನ್‌ಲಾಲ್, ಜೈಪ್ರಕಾಶ್ ಅವನಿಗೆ ಭೆಟ್ಟಿಯಾದರು.

ಜೇಲಿನೊಳಗೆ, ಅಧಿಕಾರಿಯೊಬ್ಬ ಅವರೆಲ್ಲರ ಹೆಸರು ಮತ್ತಿತರ ವಿವರ ಗಳನ್ನು ಬರೆದುಕೊಂಡ. ಒಬ್ಬೊಬ್ಬರನ್ನಾಗಿ ಜೇಲಿನ ಕಾವಲುಗಾರರು ಕರೆದು ಕೊಂಡು ಹೋಗಿ, ನಿರ್ದಿಷ್ಟವಾದ ಕೋಣೆಗಳಲ್ಲಿ ಸೇರಿಸಿದರು.

ಎಲ್ಲ ದುರಂತಗಳಿಗೂ ಸಿದ್ಧನಾದವನಂತೆ ಅಜಯ ನಡೆದ. ಜೇಲಿನ ಗೇಟಿನಿಂದ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಅವನ ಕೋಣೆ ಇತ್ತು. ಕೋಣೆಗಳನ್ನು ಸಾಲು ಸಾಲಾಗಿ ಕಟ್ಟಲಾಗಿತ್ತು. ಕೆಲವರು ಇಲ್ಲಿ, ಕೆಲವರು

ಅಲ್ಲಿ, ಎಂದು ಅವರನ್ನು ಬೇರೆ ಬೇರೆ ಸಾಲು ಸಾಲುಗಳಲ್ಲಿ ದೂರವಾಗಿ ಇರಿಸ ಲಾಗಿತ್ತು. ಕೆಲ ದಿನಗಳ ಹಿಂದೆ ಅತ್ತ ಬಂದವರು ಎಲ್ಲಿದ್ದಾರೆ ಎಂಬುದು ಹೊಸಬರಿಗೆ ತಿಳಿಯುವಂತಿರಲಿಲ್ಲ. ಪ್ರತಿಯೊಬ್ಬನಿಗೂ ಪ್ರತ್ಯೇಕವಾದ ಕತ್ತಲ ಕೋಣೆ.

ಮುಂಜಾನೆ ಒಂದು ಘಂಟೆ ಕಾಲ ಖೈದಿಗಳನ್ನು ಕೋಣೆಯಿಂದ ಹೊರಗೆ ಬಿಟ್ಟರು. ಅಜಯ ತನ್ನ ಗೆಳೆಯರನ್ನು ಕಂಡ. ದಸ್ತಗಿರಿಯಾದ ದಿನದಿಂದ ಆದುವರೆಗೆ ನಡೆದುದನ್ನೆಲ್ಲ ಅವರು ಪರಸ್ಪರ ಹೇಳಿಕೊಂಡರು. ಆದರೆ, ಜೇಲಿ ನಲ್ಲಿರುವ ಇತರ 'ಕ್ರಿಮಿನಲ್' ಖೈದಿಗಳೊಡನೆ ಮಾತನಾಡುವ, ಬೆರೆಯುವ ಅಧಿಕಾರ ಅವರಿಗಿರಲಿಲ್ಲ.

ವಿಚಾರಣೆಯ ಹಂತದಲ್ಲಿರುವ ಖೈದಿಗಳಿಗೆ ತಮ್ಮದೇ ಉಡಿಗೆ ಧರಿಸುವ ಅಧಿಕಾರವಿತ್ತು. ಹೊರಗಿನಿಂದ ಬೇಕಾದ ಬಟ್ಟೆಯನ್ನು ತರಿಸಿಕೊಳ್ಳಬಹು ದಾಗಿತ್ತು.

ಜೇಲಿನ ಗೋಡೆಗಳು ಪ್ರತಿಕ್ರಾಂತಿಯ ಮಹಾ ಮೇರುವಿನಂತೆ ಅವರ ಇದಿರು ನಿಂತಿದ್ದುವು. ಕ್ರಾಂತಿಕಾರಿಗಳು 'ಭೀಕರ ಖೈದಿಗಳು.' ಅವರ ಕಡೆಗೆ ಅಧಿಕಾರಿಗಳ ಗಮನ ಶೀರಾ ವಿಶೇಷ. ಕ್ರಾಂತಿಕಾರೀ ಮನೋಭಾವನೆಯನ್ನು ಅದುಮಿ, ಅವರನ್ನು ಕುರಿಗಳಾಗಿ ಮಾರ್ಪಡಿಸುವುದೇ ಅಧಿಕಾರಿಗಳ ಗುರಿ ಯಾಗಿತ್ತು.

ಕೆಲವೇ ದಿನಗಳಲ್ಲಿ ಅಜಯನಿಗೆ ಇತರ ರಾಜಕೀಯ ಖೈದಿಗಳ ವಿವರವೂ ತಿಳಿಯಿತು. ಅವರು ಜೆತೆಗೂಡಿ ಬೆಳಗಿನ ಕಾಲದಲ್ಲಿ ಮಾತುಕತೆ ನಡೆಸುವುದು ಸಾಧ್ಯವಾಯಿತು. ಆದರೆ ಅದಕ್ಕೂ ಅವರು ಹೋರಾಡಬೇಕಾಯಿತು. ಆಹಾರ, ದೀಪ, ತರಕಾರಿ, ನೀರು, ಗಾಳಿ ಎಲ್ಲವುಗಳಿಗೂ ಇಲ್ಲಿ ಹೋರಾಟ ನಡೆಯಲೇಬೇಕು. ಹೋರಾಟವಿಲ್ಲದೆ ಏನೂ ಸಿಗಲಾರದು ಎಂಬುದು ಅಜಯನಿಗೆ ಅರಿವಾಯಿತು.

ಹೊಸ ವಾತಾವರಣಕ್ಕೆ ಹೊಂದಿಕೊಂಡು, ಎಲ್ಲರೂ ಜೊತೆಯಾಗಿ ಹೋರಾಡುವ ನಿರ್ಧಾರ ಮಾಡುತ್ತಿದ್ದಂತೆ ಅವರ ಧೈರ್ಯವನ್ನೆಲ್ಲ ಅಳಿಸುವ ಸುದ್ದಿ ಬಂದಿತು.

ಭಾರತದ ಕ್ರಾಂತಿಕಾರಿ ಸೇನೆಯ ಮಹಾ ದಂಡನಾಯಕ ಚಂದ್ರಶೇಖರ್ ಆಜಾದ್, ಪೋಲೀಸರೊಡನೆ ಹೋರಾಡಿ ಮಡಿದಿದ್ದ.

ಕೇವಲ ಹದಿನಾಲ್ಕು ವರ್ಷದವನಿದ್ದಾಗಲೇ ಸತ್ಯಾಗ್ರಹದಲ್ಲಿ ಭಾಗ ವಹಿಸಿದರು ಆಜಾದ್. ಆಗ ಆ ಪುಟ್ಟ ಬಾಲಕನ ಕೈಗೆ ಹೊಂದುವ ಬೇಡಿಯೂ ಪೋಲೀಸರ ಬಳಿ ಇರಲಿಲ್ಲ. ಆದರೆ, ಜೇಲಿನಲ್ಲಿ ಹನ್ನೆರಡು ಚಡಿ ಏಟುಗಳು ಆಜಾದ್‌ಗೆ ದೊರೆತುವು. ಅಷ್ಟೇ ಸಾಕು! ಅಂದಿನಿಂದ ಆಜಾದ್ ಬ್ರಿಟಿಷ್ ಸಾಮ್ರಾಜ್ಯದ ಅಸಮಾನ ವೈರಿಯಾದ. ಕ್ರಾಂತಿಕಾರಿ ಚಳುವಳಿಯನ್ನು ಆರಂಭಿಸಿ ಎಲ್ಲೆಲ್ಲೂ ಸರ್ಕಾರವನ್ನು ಇದಿರಿಸಿದ.

ವೀರ ಭಾರತ ಮಾತೆಯ ಬಿಡುಗಡೆಗಾಗಿ ಕೋವಿಯನ್ನು ಹೊತ್ತು, ಅಪಾರ ಮದ್ದುಗುಂಡುಗಳನ್ನು ಇರಿಸಿಕೊಂಡು, ನಿರಂತರ ಹೋರಾಡ ಬಲ್ಲವಳೇ ತನ್ನ ಆದರ್ಶ ಪತ್ನಿ ಎಂದು ಆಜಾದ್ ಆಗಾಗ ನಗುತ್ತ ಹೇಳಿ ದ್ದುಂಟು.

ಲಾಹೋರ್ ಕಾಂಗ್ರೆಸ್ ಅಧಿವೇಶನದಲ್ಲಿ ಅದೊಂದು ಸಂಸ್ಮರಣೀಯ ಸಂಗತಿ. ಜನತೆಯ ನಾಯಕ ಜವಾಹರಲಾಲ್‌ರನ್ನು ಆಜಾದ್ ಸಂಧಿಸಿದರು. ದೇಶದ ಪ್ರಬಲ ಪಕ್ಷಕ್ಕೂ ಹೆಚ್ಚಾಗಿ ಸಾಮ್ರಾಜ್ಯಶಾಹಿಯನ್ನು ಇದಿರಿಸಿ ಹೋರಾಡುತ್ತಿರುವ ಈ ವೀರರನ್ನು ಆಲಿಂಗಿಸಿದರು ನೆಹರೂ. ತನ್ನ ಅಭಿಮಾನ ಗಳಿಸಿದ ವೀರನೊಡನೆ ದೇಶದ ಬಗೆಗೆ ಮಾತುಕತೆ ನಡೆಸಿದರು.

ಆದರೆ, ಆಜಾದ್ ಕ್ರಾಂತಿಯ ಹಾದಿಯಿಂದ ಚಲಿಸಲಿಲ್ಲ.

ದೇಶದ ಸ್ವಾತಂತ್ರ್ಯಕ್ಕಾಗಿ ಎಷ್ಟೇ ಸೆರೆ ಸೇರಲಿ, ಬಲಿದಾನ ಅರ್ಪಿಸಲಿ, ಮತ್ತೊಮ್ಮೆ ಚಳುವಳಿಯನ್ನು ಬಲಪಡಿಸಿ ಹೋರಾಡುವುದೇ ಆಜಾದ್‌ನ ಗುರಿಯಾಗಿತ್ತು.

ಆತನ ಬಯಕೆಯಂತೆಯೇ ಮರಣವು ಅವನನ್ನು ಕೆಣಕಿ ಹೋರಾಡಿತು.

ಭಗತ್‌ಸಿಂಗ್ ಮತ್ತಿತರರನ್ನು ಸೆರೆಯಿಂದ ಬಿಡಿಸಬೇಕೆಂದು ಆಜಾದ್ ಮತ್ತೊಮ್ಮೆ ಯೋಜನೆ ರೂಪಿಸುತ್ತಿದ್ದ. ಸ್ವಾತಂತ್ರ್ಯ ಸಂಗ್ರಾಮದ ಜ್ಯೋತಿ ಯನ್ನು ಜ್ವಲಂತವಾಗಿ ಬೆಳಗಿಸಲು ಆಜಾದ್ ನಾಡಿನಾದ್ಯಂತ ಸಂಚರಿಸಿದ.

ಆ ದಿನ, ಅಲಹಾಬಾದ್‌ನ ಆಲ್‌ಫ್ರೆಡ್ ಪಾರ್ಕ್‌ನಲ್ಲಿ ಆಜಾದ್ ಕುಳಿತು ಮುಂದಿನ ದಾರಿ ಯೋಚಿಸುತ್ತಿದ್ದ.

ವೀರಭದ್ರ ತಿವಾರಿ ಎಂಬಾತ ಅವನನ್ನು ಕಂಡು ಪೋಲೀಸರಿಗೆ ಸುದ್ದಿ ಮುಟ್ಟಿಸಿದ.

ಹದಿನೈದು ವರ್ಷಗಳಿಂದಲೂ ಅನೇಕ ಹೋರಾಟಗಳನ್ನು ನಡೆಸಿದರೂ ಪೋಲೀಸರ ಕೈಗೆ ಸಿಗದೆ ಮಿಂಚಿನಂತೆ ಚಲಿಸುತ್ತಿದ್ದ ಆಜಾದ್ ಈಗ ಅಪಾಯಕ್ಕೆ ಒಳಗಾದ.



ಪೋಲೀಸರು ಪಾರ್ಕ್ ಸುತ್ತುಗಟ್ಟಿದರು. ಎಲ್ಲ ದಾರಿಗಳಲ್ಲೂ ಕಾವಲಾದರು. ಪೋಲೀಸನೊಬ್ಬ ಅವನು ಅಡಗಿ ಕುಳಿತಲ್ಲಿಗೂ ಬಂದು ನಿಂತ. ಆಗಲೇ ಆಜಾದ್‌ಗೆ ನಿಜವಾದ ಪರಿಸ್ಥಿತಿಯ ಅರಿವಾಯಿತು. ಫಕ್ಕನೆ ನೆಗೆದು, ಆಯಕಟ್ಟಿನ ಸ್ಥಳದಲ್ಲಿ, ದಿಣ್ಣೆಯೊಂದರ ಮರೆಯಲ್ಲಿ ನಿಂತ. ಎರಡು ಕೈಗಳಲ್ಲಿ ಎರಡು ರಿವಾಲ್ವರ್ ಹಿಡಿದು ಗುಂಡು ಹಾರಿಸಿದ. ಆದರೆ, ನೂರಾರು ಮಂದಿ ಪೋಲೀಸರು ಅವನೆಡೆಗೆ ಗುಂಡು ಹಾರಿಸುತ್ತಿದ್ದಾಗ ಈ ಹೋರಾಟ ವಿಫಲವಾಗಲೇಬೇಕಾಯಿತು. ಇಬ್ಬರು ಪೋಲೀಸ್ ಅಧಿಕಾರಿಗಳಿಗೇನೋ ಗಾಯವಾಯಿತು. ಆದರೆ, ಆಜಾದ್‌ನ ದೇಹವನ್ನು ಪ್ರವೇಶಿಸಿದ ಗುಂಡುಗಳಿಗೆ ಲೆಕ್ಕವೇ ಇರಲಿಲ್ಲ. ಕೊನೆಯ ಉಸಿರು ಇರುವವರೆಗೂ ಆಜಾದ್ ಹೋರಾಡಿದ. ರಕ್ತದ ಹೊಳೆ ಹರಿಯಿತು. ಕೈಗಳು ಸೋತುವು. ದೇಹ ಕುಸಿಯಿತು. ಕಟ್ಟಕಡೆಯ ಗುಂಡಿನಿಂದ ತನಗೇ ಹೊಡೆದುಕೊಂಡು ಆಜಾದ್ ಅಸು ನೀಗಿದ.

ಕೊನೆಗೂ ಆಜಾದ್ ಪೋಲೀಸರ ಕೈಗೆ ಸಿಗಲಿಲ್ಲ.

ಸುದ್ದಿ ತಲುಪಿದ ರಾತ್ರೆ ಜೇಲಿನಲ್ಲಿ ಯಾವ ರಾಜಕೀಯ ಖೈದಿಯೂ ಆಹಾರ ಸ್ವೀಕರಿಸಲಿಲ್ಲ. ಅವರ ಪಾಲಿಗೆ ಭಾರತದ ಕ್ರಾಂತಿಯುಗವೇ ಮುಗಿದಂತಾಗಿತ್ತು.

ಮುಂದೇನು ದಾರಿ ?

ಕೆಲವು ದಿನಗಳವರೆಗೂ ಯಾರಿಗೂ ಏನೂ ತೋರಲಿಲ್ಲ. ಆದರೆ, ಅವರಲ್ಲಿ ಅಂತಿಮ ಧೈರ್ಯ ಈಗ ಉಕ್ಕಿ ಬಂತು. ನಿರಂತರ ಹೋರಾಟ, ಹಕ್ಕುಬಾಧ್ಯತೆಗಳಿಗಾಗಿ ಹೋರಾಟ ನಡೆಸಿ ಪ್ರಾಣಾರ್ಪಣ ಮಾಡಲೂ ಈಗ ಕ್ರಾಂತಿಕಾರಿಗಳು ನಿರ್ಧರಿಸಿದರು.

# ೨೨

ಭಾರತದ ಇತಿಹಾಸದಲ್ಲಿ ಸುವರ್ಣಾಕ್ಷರದಿಂದ ಬರೆದಿಡುವ ಐತಿಹಾಸಿಕ ಪುರುಷರಾದರು. ಸ್ವಾತಂತ್ರ್ಯ ಸಂಗ್ರಾಮಕ್ಕೆ ಸರ್ವಸ್ವವನ್ನು ಅರ್ಪಿಸಿದ ಮಹಾನ್ ತ್ಯಾಗಿಗಳಾದರು. ಒಂದೊಂದು ಹೆಸರೂ ನೂರು, ಸಾವಿರಾರು ಭಾರತೀಯರಲ್ಲಿ ಜಾಗೃತಿಯ ಜ್ಯೋತಿಯನ್ನು ಸದಾ ಬೆಳಗುವುದು.

ಭಗತ್‌ಸಿಂಗ್......

ರಾಜಗುರು......

ಶುಕದೇವ್......

ಕೊರಳಿಗೆ ಉರುಳು ಬಿಗಿಯುವಾಗಲೂ ಅವರು ತೋರಿಸಿದ ಅಸದೃಶ ದೇಶಪ್ರೇಮ ಕತೆಯಾಗಿ ನಾಡಿನ ಎಲ್ಲೆಡೆ ಹರಡಿತ್ತು. ಪ್ರತ್ಯಕ್ಷದರ್ಶಿಯಾಗಿದ್ದ ರಂಜಾನ್‌ನಿಂದ ಆ ರುದ್ರ ಕತೆ ಕೇಳಿ ಅಜಯ ಪುಲಕಿತನಾಗಿದ್ದ.

ತನಗೂ ಅಂತಹ ಮಹಾ ದಿವಸ ಎಂದು ಬಂದೀತು ?

"ವೈಭವಶಾಲೀ ಭವಿಷ್ಯದ ಸುಖ ಸ್ವಪ್ನ ಕಾಣಲು ಮಾನವ ರಕ್ತವನ್ನು ಸುರಿಸುವುದು ನಮಗೆ ಅನಿವಾರ್ಯವಾಗಿದೆ...ಸರ್ವರಿಗೂ ಸ್ವಾತಂತ್ರ್ಯ ಗಳಿಸಿ ಕೊಡುವ ಕ್ರಾಂತಿಯ ಬಲಿಪೀಠದಲ್ಲಿ ವ್ಯಕ್ತಿಯ ಬಲಿದಾನವು ಅಪರಿಹಾರ್ಯ ವಾದುದು."

ಭಗತ್‌ಸಿಂಗ್ ದೇಶದ ಜನತೆಗೆ ಕೊಟ್ಟ ಕೊನೆಯ ಹೇಳಿಕೆ ಅದು. ಹೌದು ! ಅಜಯನೂ ಆ ದಿವಸಕ್ಕಾಗಿ ಕಾದಿದ್ದಾನೆ. ಕ್ರಾಂತಿಯ ಬಲಿಪೀಠ ದಲ್ಲಿ ತನ್ನ ಬಲಿದಾನವೂ ಆಗಬೇಕು.

ವಿಚಾರಣೆ ಆರಂಭವಾಯಿತು.

ಮುಂಜಾನೆ ಪೋಲೀಸ್ ಅಧಿಕಾರಿಯೊಬ್ಬ ಅಜಯ ಮತ್ತು ಅವನ ಗೆಳೆಯರಿದ್ದ 'ಬ್ಯಾರಕ್' ಕಡೆಗೆ ಬಂದು ಸುತ್ತಾಡಿದ. "ಕೂಡಲೇ ಎಲ್ಲರೂ ಸಿದ್ಧರಾಗಿ, ಕೋರ್ಟಿಗೆ ಹಾಜರಾಗಬೇಕು," ಎಂದು ಅಪ್ಪಣೆಯಿತ್ತ.

ಅಧಿಕಾರಿಗಳ ಆಜ್ಞೆಯಾಯಿತು. ಮುಂದಿನದು ಗಾರ್ಡ್‌ಗಳ, ಕಾನ್ಸ್ ಟೇಬಲ್‌ಗಳ ಕೆಲಸ. ಅವರು ಪ್ರತಿಯೊಂದು ಕೋಣೆಯ ಬಳಿ ಬಂದು ಸುದ್ದಿ ಮುಟ್ಟಿಸಿದರು.

ವಿಚಾರಣೆ ಹತ್ತಿರ ಬಂದಂತೆ, ಸಂಘಟಿತ ಹೋರಾಟ ಪ್ರತಿಭಟನೆಗಳು ನಡೆದಂತೆ ಈಗ ರಾಜಕೀಯ ಖೈದಿಗಳಿಗೆ ಕೊಂಚ ಸ್ವಾತಂತ್ರ್ಯ ದೊರೆತಿತ್ತು. ಅವರು ಹಾಡುತ್ತ ಗೊಣಗುತ್ತ ಗಟ್ಟಿಯಾಗಿ ಮಾತನಾಡುತ್ತ ಪರಸ್ಪರ ತಿಳಿದುಕೊಳ್ಳಬಹುದಾಗಿತ್ತು.

ಮೂರು ಮಂದಿ ನ್ಯಾಯಾಧೀಶರ ವಿಚಾರಣಾ ಸಮಿತಿಯೊಂದು ನೇಮಕವಾಗಿತ್ತು. ಇಬ್ಬರು ಯುರೋಪಿಯನ್ನರು, ಒಬ್ಬ ಭಾರತೀಯರು. ಸಣ್ಣದೊಂದು ಪಟ್ಟಣದಷ್ಟೇ ವಿಶಾಲವಾದ ಸೆಂಟ್ರಲ್ ಜೇಲಿನ ಒಂದು ಮೂಲೆಯಲ್ಲಿ, ಹೊರಗಿನಿಂದಲೂ ಜನರು ಬರಬಹುದಾದ ಕಡೆ ವಿಚಾರಣಾ ನ್ಯಾಯಾಲಯವನ್ನು ವ್ಯವಸ್ಥೆಗೊಳಿಸಲಾಗಿತ್ತು.

ನಿರ್ದಿಷ್ಟ ಸಮಯವಾಯಿತು, ಆಪಾದಿತರನ್ನೆಲ್ಲ ಕೋಣೆಯಿಂದ ಹೊರಗಡೆ ತಂದು ಸಾಲಾಗಿ ನಿಲ್ಲಿಸಲಾಯಿತು. ಎಲ್ಲರೂ ಜತೆಯಾಗಿ ಸೇರಿದ ಆನಂದದಿಂದ ಅವರು ಘೋಷಿಸಿದರು :

" ಇಂಕ್ವಿಲಾಬ್ ಜಿಂದಾಬಾದ್ !..."

" ವಂದೇ ಮಾತರಂ !..."

ಕೋರ್ಟಿನಲ್ಲಿ ಬೇಡಿ ತೊಡಿಸಿದ ಖೈದಿಗಳನ್ನು ಸಾಲಾಗಿ ನಿಲ್ಲಿಸ ಲಾಯಿತು. ವಿಚಾರಣೆ, ಪರಿಶೀಲನೆ, ಪ್ರಶ್ನೆಗಳನ್ನು ನಡೆಸಿದ ಪ್ರಮುಖ ಅಧಿಕಾರಿಗಳು ಅಲ್ಲಿದ್ದರು. ತಾವು ಗೆದ್ದೆವು ಎಂಬ ಅಭಿಮಾನಯುತ ಗಾಂಭೀರ್ಯ ಅವರ ಮುಖದಲ್ಲಿ ಮಿಂಚುತ್ತಿತ್ತು. ಇತರ ಹಲವಾರು ಮಂದಿ ಉನ್ನತ ಪೋಲೀಸ್ ಅಧಿಕಾರಿಗಳೂ, ನಗರದ ಹಲವು ಮಂದಿ ವಕೀಲರೂ ಸೇರಿದ್ದರು.

ಪ್ರೇಕ್ಷಕರ ಗ್ಯಾಲರಿಯೂ ತುಂಬಿ ತುಳುಕುತ್ತಿತ್ತು.

ಗಂಭೀರವಾದ ನಿಲುವಿನಿಂದ, ಅಧಿಕಾರ ವಾಣಿಯಿಂದ ಪಬ್ಲಿಕ್ ಪ್ರಾಸಿ ಕ್ಯೂಟರ್ ಪಂಡಿತ್ ಜ್ವಾಲಾ ಪ್ರಸಾದ್‌ರವರು ಮೊಕದ್ದಮೆಯ ಬಗೆಗೆ ವಿವರ ನೀಡಿ, ಆರೋಪಗಳ ಹೊರೆ ಹೊರಿಸಿ, ಅಪರಾಧಗಳನ್ನು ಮಂಡಿಸಿದರು.

ಖೈದಿಗಳಿಗೆ ಇದರಲ್ಲಿ ಆಸಕ್ತಿಯೇನೂ ಇರಲಿಲ್ಲ. ಪೋಲೀಸರು ವಿಚಾರಣೆ ನಡೆಸಿದಾಗ ಏನೇನು ಮಾಡಿದರು, ಯಾರು ಏನು ಉತ್ತರ ಕೊಟ್ಟರು ಎಂಬ ಬಗೆಗೆ ವಿಚಾರ ವಿನಿಮಯಮಾಡುವುದೇ ಅವರ ಕೆಲಸ ವಾಗಿತ್ತು. ಇನ್ನೂ ಕೆಲವರೊಡನೆ ವಿವರ ಪಡೆಯುವುದು ಉಳಿದಿತ್ತು.

ಆರೋಪಗಳ ಕಥೆಯನ್ನು ಕೇಳುತ್ತಿದ್ದಂತೆ ಅವರಿಗೇ ಅನೇಕ ಹೊಸ ವಿಷಯಗಳು ತಿಳಿದುಬಂದುವು. ಅವರಿಗೆ ಅರಿವಿಲ್ಲದ ಇತರ ಘಟನೆಗಳನ್ನು ಅವರ ತಲೆಯ ಮೇಲೆ ಹೇರಿಸಲಾಗಿತ್ತು.

ಅಂದಿನ ವಿಚಾರಣೆ ಮುಗಿಯಿತು. ಆಪಾದಿತರಿಗೆ ಆಪಾದನೆಗಳ ಪಟ್ಟಿಯನ್ನು ಕೊಟ್ಟು, ಪ್ರತಿವಾದಿಸಲು ಅವಕಾಶ ನೀಡಲಾಯಿತು.

ಮಾಲಿಕ್ ಕುಂದನ್ ಲಾಲ್ ತನ್ನ ಕಂಚಿನ ಕಂಠದಿಂದ ಘೋಷಣೆ ಗಳನ್ನು ಆರಂಭಿಸಿದ. ಇತರರು ಅನುಸರಿಸಿದರು. ಖೈದಿಗಳನ್ನು ಜೇಲಿಗೆ ಮತ್ತೆ ಹಿಂತಿರುಗಿಸಲಾಯಿತು.

ಖೈದಿಗಳನ್ನೀಗ ಸೆಂಟ್ರಲ್ ಜೇಲಿನಲ್ಲಿ ಮರಣ ದಂಡನೆಗೆ ಗುರಿಯಾದ ಖೈದಿಗಳನ್ನಿರಿಸುವ ೧೪ ನೇ ನಂಬರಿನ ವಾರ್ಡಿಗೆ ಒಯ್ಯಲಾಯಿತು. ಅದೊಂದು ಪ್ರತ್ಯೇಕವಾಗಿ ಗೋಡೆ ಹಾಕಿದ ತೋಟದೊಳಗಿತ್ತು. ಹಗಲಲ್ಲೂ ಕತ್ತಲು ಕವಿದ ಕೋಣೆಗಳು. ಆ ಗೋಡೆಯಲ್ಲಿ ಬಾಗಿಲೆಂದು ಕೊರೆದ ಪುಟ್ಟ ಕಿಂಡಿಯ ಮೂಲಕ ಒಳಗೆ ಪ್ರವೇಶ. ನೇರವಾಗಿ, ಎರಡು ಸಾಲಾಗಿರುವ ಕೋಣೆ ಗಳು. ರಾಜಕೀಯ ಖೈದಿಗಳಷ್ಟೇ ಇಲ್ಲಿ ಪರಸ್ಪರ ನೋಡಿಕೊಳ್ಳಬಹುದು. ಜೇಲಿನ ಇತರ ಯಾವುದೇ ವ್ಯವಹಾರವೂ ತಿಳಿಯದಂತಹ ಪ್ರತ್ಯೇಕವಾದ ಗುಹೆ ಇದು. ಈ ವಠಾರದಲ್ಲೇ ಸುಮಾರು ಐವತ್ತು ಕೋಣೆಗಳೆನ್ನಲಾದ ಗೂಡುಗಳಿದ್ದುವು.

ಖೈದಿಗಳನ್ನು ಪ್ರತ್ಯೇಕವಾದ ಕೋಣೆಗಳಲ್ಲಿ ಸೇರಿಸಿ ಬೀಗ ಹಾಕ ಲಾಯಿತು. ಪರಸ್ಪರ ಘೋಷಣೆಗಳ ಮೂಲಕ ಅವರು ತಮ್ಮ ಅಸ್ತಿತ್ವ ವನ್ನು ಅರಿತುಕೊಂಡರು.

ಈಗ ನಗರದ ಹಲವಾರು ಮಂದಿ ವಕೀಲರು ಖೈದಿಗಳನ್ನು ಭೇಟಿ ಮಾಡಲು ಬಂದರು. ತಾವು ಅಪರಾಧಿಗಳ ಪರವಾಗಿ ವಾದಿಸಲು ಸಿದ್ಧ ವಾದರು. ಕಾಂಗ್ರೆಸ್ ನಾಯಕರು ಕೆಲವರು ಅತ್ತ ಬಂದು, ಎಲ್ಲ ರೀತಿಯ

ನೆರವು ನೀಡುವುದಾಗಿ ಭರವಸೆಯಿತ್ತರು. ಈ ಕ್ರಾತಿಕಾರರನ್ನಾದರೂ ಬದುಕಿಸಲು ಅವರು ಉತ್ಸುಕರಾಗಿದ್ದರು.

ಕೋರ್ಟಿನಲ್ಲಿ ಅಪರಾಧಿಗಳ ಅಪರಾಧದ ಕಥೆಯನ್ನು ವಿವರವಾಗಿ ಪೋಲೀಸ್ ಅಧಿಕಾರಿಗಳು ನೀಡಿದರು.

ವಿಚಾರಣೆ ಆರಂಭವಾಯಿತು.

ಪಂಡಿತ್ ಇಂದ್ರಪಾಲ್ ಪೋಲೀಸರ ಪ್ರಮುಖ ಸಾಕ್ಷಿ. ಗಂಭೀರ ವಾಗಿ ಕೋರ್ಟಿಗೆ ಬಂದು, ಸಾಕ್ಷಿ ಕಟ್ಟೆಯಲ್ಲಿ ಅವನು ನಿಂತ. ಪೋಲೀಸರ ಮುಖದಲ್ಲಿ ಹರ್ಷ ಮೂಡಿತ್ತು. ಖೈದಿಗಳ ಮುಖ ಬಾಡಿತ್ತು.

ವಿಚಾರಣೆ ನಡೆಯುತ್ತಿದ್ದಂತೆ ಇಂದ್ರಪಾಲ್ ತಾನು ಹಿಂದೆ ಹೇಳಿಕೆ ಕೊಟ್ಟಿದ್ದನ್ನೆಲ್ಲ ಅಲ್ಲಗಳೆದ. ಪೋಲೀಸರ ಹಿಂಸೆ ತಾಳಲಾರದೆ ಹೀಗೆ ಹೇಳಬೇಕಾಯಿತೆಂದು ತಿಳಿಸಿ, ಪೋಲೀಸರ ಚಿತ್ರಹಿಂಸೆಗಳನ್ನು ವಿವರಿಸಿದ. ಕ್ರಾಂತಿಕಾರಿ ಚಟುವಟಿಕೆಯ ಆರಂಭ, ಯಶ್‌ಪಾಲ್‌ರ ಸ್ನೇಹ ಈ ಬಗೆಗೆ ತಿಳಿಸಿದ. ಇತರ ಯಾರೊಬ್ಬರ ಬಗೆಗೂ ಹೇಳಲಿಲ್ಲ.

ಪೋಲೀಸರು ರೋಷದಿಂದ ಕುದಿದರು.

ಪಂಡಿತ್ ಇಂದ್ರಪಾಲ್ ತನ್ನ ಗೆಳೆಯರನ್ನು ಬಿಟ್ಟುಕೊಡಲಿಲ್ಲ.

ಆಗಲೇ ಒಂದು ತಿಂಗಳ ಕಾಲ ಕಳೆದಿತ್ತು.

ಅಷ್ಟರಲ್ಲಿ ತಲೆ ಮರೆಸಿಕೊಂಡಿದ್ದ ಸೀತಾರಾಮ್ ದಸ್ತಗಿರಿಯಾದ. ಪುನಃ ವಿಚಾರಣೆ ಮೊದಲಿನಿಂದ ತೊಡಗಿತು. ಇಂದ್ರಪಾಲ್ ಮತ್ತೆ ಹೇಳಿದ್ದನ್ನೇ ಹೇಳಿದ.

ಅಂತೂ ಇಂದ್ರಪಾಲ್ ಪೂರ್ಣ ಕತೆ ಹೇಳಲು ಆರು ತಿಂಗಳಾದರೂ ಬೇಕಾದೀತೆಂದು ಎಲ್ಲರಿಗೂ ಅನಿಸಿತು. ಅಲ್ಲದೆ, ಸುಮಾರು ಏಳು ನೂರು ಸಾಕ್ಷಿಗಳನ್ನು ಪೋಲೀಸರು ಸಿದ್ಧಪಡಿಸಿದ್ದರು. ಖೈದಿಗಳ ಆಸಕ್ತಿ, ಉತ್ಸಾಹ ಗಳು ಈಗ ಅಳಿದುವು. ಅವರು ಜೇಲಿನ ವಾತಾವರಣಕ್ಕೆ ಹೊಂದಿಕೊಂಡು ಇಲ್ಲೇ ನಾಲ್ಕು ವರ್ಷ ಬಾಳಬೇಕಾದೀತೆಂದು ಸೂಕ್ತ ಮನೋಧರ್ಮವನ್ನು ರೂಢಿಸಿಕೊಂಡರು. ಜೇಲಿನ ನಿರಾಶಾ ವಾತಾವರಣ ಈಗ ಅಳಿದು ಉತ್ಸಾಹ ತಲೆದೋರಿತು.

ಖೈದಿಗಳು ತಮ್ಮ ಭವಿಷ್ಯದ ಬಗೆಗೆ ಚಿಂತಿಸುವುದನ್ನೇ ಮರೆತು, ಬಾಳಿ ಬದುಕಲು ಸಿದ್ಧರಾದರು. ಓದು, ಬರೆಹ, ಆಟ, ವಿನೋದಗಳು ಈಗ ಅವರವಾದವು. ಧರ್ಮವೀರನಿಗೆ ವ್ಯಾಯಾಮದಲ್ಲಿ ಆಸಕ್ತಿ. ದಿನವೂ ಎರಡು ಗಂಟೆಗಳ ಕಾಲ ಅವರ ಅಖಾಡದಲ್ಲಿ ವ್ಯಾಯಾಮ ನಡೆಯುತ್ತಿತ್ತು. ಗಾಂಧಿಜೀಯ ಆರೋಗ್ಯ ಸಾಧನ ಎಂಬ ಗ್ರಂಥ ಎಲ್ಲರ ಕೈಪಿಡಿಯಾಗಿತ್ತು. ವಾಲಿಬಾಲ್, ಬ್ಯಾಡ್‌ಮಿಂಟನ್, ಇಸ್ಪೀಟುಗಳೂ ತಲೆಹಾಕಿದವು. ವಿಚಾರ ವಿನಿಮಯ, ರಾಜಕೀಯ ಚರ್ಚೆಗಳೂ ನಡೆದವು. ವಿವಿಧ ಹಬ್ಬಗಳ ಆಚರಣೆ, ವಿಶೇಷ ತಿಂಡಿಪದಾರ್ಥಗಳ ತಯಾರಿಕೆ, ಸಂಗೀತ, ಕ್ರಾಂತಿ ಗೀತಾ ಪಠಣ, ವಿವಿಧ ಆಟಿಕೆಗಳ ತಯಾರಿಕೆಗಳೂ ನಡೆದವು.

ಹೀಗೆ ತಮ್ಮೊಳಗೆ ಸಂಘಟನೆ ಸಾಧಿಸಿ ದುಃಖ ಮರೆತ ರಾಜಕೀಯ ಖೈದಿಗಳು ಆಗಾಗ 'ಕ್ರಿಮಿನಲ್' ಖೈದಿಗಳ ಕಷ್ಟನಿವಾರಣೆಗಾಗಿಯೂ ಹೋರಾಟ ವನ್ನು ನಡೆಸುತ್ತಿದ್ದರು.

ವರ್ಷಗಳು ಉರುಳಿದುವು. ಸರ್ಕಾರದ ಪರ ಸಾಕ್ಷಿಗಳೆಲ್ಲರ ವಿಚಾರಣೆ ಮುಗಿಯಲು ಎರಡು ವರ್ಷಗಳ ಕಾಲ ಬೇಕಾಯಿತು.

ಡಿಸೆಂಬರ್ ೧೯೩೩ ರಲ್ಲಿ......

ಅಜಯ ಮತ್ತು ಅವನ ಗೆಳೆಯರಿಗೆ ಶಿಕ್ಷೆ ವಿಧಿಸಲಾಯಿತು. ಮರಣ ದಂಡನೆ, ಜೀವಾವಧಿ ಶಿಕ್ಷೆ, ಹಾಗೂ ಮತ್ತೊಂದು ಇಪ್ಪತ್ತು ವರ್ಷಗಳ ಶಿಕ್ಷೆ ಅವನ ಪಾಲಿಗೆ ಬಂತು.

ಕ್ರಾಂತಿಕಾರೀ ಯುವಜನರ ಈ ತಂಡದ ಜೀವನದ ಮಹೋನ್ನತ ಅಧ್ಯಾಯ ಕೊನೆಗಂಡಿತು.

ಹೈಕೋರ್ಟಿಗೆ ಅಪೀಲು ಹೋಗುವ ಕಾರ್ಯವೀಗ ಆರಂಭವಾಯಿತು. ಆದರೆ, ಅಲ್ಲಿ ಯಾವುದೇ ಉಪಕಾರವಾದೀತೆಂಬ ಬಗೆಗೆ ಯಾರಿಗೂ ವಿಶ್ವಾಸ ವಿರಲಿಲ್ಲ.

ಬಿಡುಗಡೆಯಾದ ಗೆಳೆಯರು ಹೊರಟು ಹೋದರು. ಶಿಕ್ಷೆಗೆ ಗುರಿಯಾದವರು, ಅವಧಿ ತೀರುವವರೆಗೆ ಆಶಾವಾದಿಗಳಾಗಿ ಬಾಳಲು ಬಯಸಿ, ಪಾಲಿಗೆ ಬಂದುದೇ ಪಂಚಾಮೃತವೆಂದು ನೆಮ್ಮದಿ ತಾಳಿದರು.

ಅಜಯನ ಕಥೆಯೇ ಬೇರೆ.

ಅವನಿಗೆ ಆ ಕೂಡಲೇ ಸಾಯುವ ಅಧಿಕಾರವೂ ಇಲ್ಲ.

ಇಪ್ಪತ್ತು ವರ್ಷಗಳ ಶಿಕ್ಷೆ, ಜತೆಗೆ ಆಜೀವ ಶಿಕ್ಷೆ. ಇವೆರಡನ್ನೂ ಏಕಕಾಲದಲ್ಲಿ ಅನುಭವಿಸಿದರೂ ಆತ ಅನೇಕ ವರ್ಷಗಳಕಾಲ ಸೆರೆಮನೆಯಲ್ಲಿದ್ದು ಬದುಕಿರಬೇಕು. ರಿಯಾಯಿತಿಗಳು ದೊರೆತರೂ ಏನಿಲ್ಲೆಂದರೂ ಹದಿನಾರು ವರ್ಷಗಳ ಕಾಲ ಬದುಕಿ, ಅನಂತರದಲ್ಲೇ ನೇಣುಗಂಬವನ್ನೇರಬೇಕು.

ಹೈಕೋರ್ಟಿನ ತೀರ್ಮಾನ ಏನಿದೆಯೋ ?

ಕೆಲವು ವಾರಗಳಲ್ಲೇ ಹೈಕೋರ್ಟಿಗೆ ಅಪೀಲು ಹೋಯಿತು. ವಕೀಲರುಗಳು ಅನುಮತಿ ಬೇಡಿ ಜೇಲಿನೊಳಗೆ ಬಂದರು. ಅಜಯ ಹಾಗೂ ಅವನ ಗೆಳೆಯರೆಲ್ಲ ಜೊತೆಗೂಡಿ, ಅವರ ಮುಂದೆ ಕುಳಿತು ಸಮಾಲೋಚನೆ ನಡೆಸಿದರು.

ಮತ್ತೆ ವಿಚಾರಣೆಯ ನಾಟಕ !

ಆದರೆ ವಾರಕ್ಕೆರಡು ಬಾರಿ ವಿಚಾರ ವಿನಿಮಯದ ಹೆಸರಲ್ಲಿ, ಆಪಾದಿತರೆಲ್ಲ ಪರಸ್ಪರ ಭೇಟಿಯಾಗುವ ಮಾತು ಕತೆ ನಡೆಸುವ ಸೌಲಭ್ಯ ದೊರೆಯಿತು.

ಅಜಯ, ತನ್ನ ಜೊತೆಗಾರರಾಗಿ ಸಾವನ್ನು ಇದಿರು ನೋಡುತ್ತಿದ್ದವರನ್ನೇ ಸ್ನೇಹಿತರಾಗಿ ಮಾಡಿಕೊಳ್ಳಬೇಕಾಯಿತು. ಅವರ ದುಃಖದ ಕಥೆಗಳನ್ನು ಕೇಳಿ, ಅನುಕಂಪ ತೋರಿ ಆತ ಎಲ್ಲರ ಗೆಳೆಯನಾದ.

ಹೈಕೋರ್ಟು ಅಜಯನ ಮರಣ ದಂಡನೆಯನ್ನು ವಜಾ ಮಾಡಿತು.

ಉರುಳಿನ ನೆರಳಲ್ಲಿ ಬಾಳಿದ ಅವನೀಗ ಆ ನೆರಳಿನಿಂದ ದೂರವಾಗಿ ಕಾಲ ಕಳೆಯಬೇಕಾಯಿತು. ಈ ತೀರ್ಮಾನ ಅವನಲ್ಲಿ ನಿರಾಸೆಯನ್ನು ಉಂಟುಮಾಡಿತು. ಬೇಗನೇ ಈ ರುದ್ರ ನರಕದಿಂದ ದೂರವಾಗುವ ಕನಸು ಕಾಣುತ್ತಿದ್ದ ಅಜಯ. ಈಗ ಹಾಗಾಗಲಿಲ್ಲ. ಅದೆಷ್ಟೋ ವರ್ಷಗಳ ಕಾಲ ಆತ ಈ ಸೆರೆಮನೆಯಲ್ಲೇ ಕೊಳೆಯಬೇಕು. ತನ್ನ ಬಿಡುಗಡೆಯೊಂದಿಗೆ ದೇಶದ ಬಿಡುಗಡೆಯ ದಿನವನ್ನು ಇದಿರು ನೋಡಬೇಕು.

೧೫ ನೇ ವಾರ್ಡಿನಿಂದ ಈಗ ಮತ್ತೊಮ್ಮೆ ಅಜಯ ೧೪ ನೇ ವಾರ್ಡಿಗೆ ಹಿಂತಿರುಗಿ ಗೆಳೆಯರನ್ನು ಕೂಡಿಕೊಂಡ.

ಈಗ ಅಜಯ ಪೂರ್ಣ ಖೈದಿ.

ಅವನ ಬಾಳು-ಬದುಕುಗಳೆಲ್ಲ ಈ ವಿಶಾಲವಾದ ಕೋಟೆಯೊಳಗೆ.

"ಸಾಯುವುದು ಸುಲಭ. ಆದರೆ, ಆಜೀವ ಪರ್ಯಂತ ಉತ್ಸಾಹವನ್ನು ಉಳಿಸಿಕೊಳ್ಳುವುದು ಕಷ್ಟ," ಎಂಬ ಮಾತು ಅಜಯನಿಗೆ ಈಗ ನಿಜವೆಂದೆನಿಸಿತು. ಅವನ ಆಸಕ್ತಿ, ಉತ್ಸಾಹಗಳು ಉರುಳಿಬಿದ್ದುವು. ಗರಿ ಮುರಿದು ನೀರಲ್ಲಿ ನೆನೆದ ಹಕ್ಕಿಯಂತಾದ. ಎಲ್ಲ ಗೆಳೆಯರೂ ಜೊತೆಯಾಗಿಯೇ ಇದ್ದಾರೆ, ನಿಜ. ಆದರೆ, ಮುಂದಿನ ಯಾವ ಯೋಜನೆ ಬಗೆಗೂ ಮಾತನಾಡುವ ಆಶಾವಾದ ಅವರಲ್ಲಿ ಉಳಿದಿರಲಿಲ್ಲ.

ಖೈದಿಗಳು ಮಾಡಬೇಕಾದ ಕೆಲಸಗಳು ಅವರಿಗೂ ದೊರೆತುವು. ಕಾಗದ ರಟ್ಟುಗಳ ಫೈಲ್, ಲಕೋಟೆ ಹಾಗೂ ಬ್ಯಾಗ್ ತಯಾರಿಕೆ ಅವರ ಪಾಲಿಗೆ ಬಂತು.

ದಿನ ಕಳೆದಂತೆ ಇದೇ ನಮ್ಮ ಮನೆ, ತೋಟ, ನಗರ ಎಂಬ ಭಾವನೆ ಬೆಳೆಯಿತು. ಆಗಲೇ ಒಂದು ವರ್ಷವೂ ಕಳೆದಿತ್ತು. ರಾತ್ರಿವೇಳೆ ಖೈದಿಗಳು ಕೋಣೆಗಳನ್ನು ಸೇರಿ, ಹಗಲೆಲ್ಲ ಹೊರಗಡೆ ಕಾಲ ಕಳೆಯುತ್ತಿದ್ದರು. ಓದು, ವ್ಯಾಯಾಮಗಳ ಕಡೆಗೆ ಹೆಚ್ಚಿನ ಗಮನ ಹರಿಯಿತು.

ಕ್ರಾಂತಿಕಾರರಿಗಾಗಿಯೇ ಜೇಲಿನಲ್ಲಿ ಪ್ರತ್ಯೇಕ ವಾರ್ಡ್ ನಿರ್ಮಾಣವಾಗುತ್ತಿತ್ತು. ಅದಕ್ಕೂ ಸುತ್ತಲೂ ಎತ್ತರವಾದ ಗೋಡೆ ಕಟ್ಟಲಾಗಿತ್ತು. ಕೋಟೆಯೊಳಗೆ ಹಲವಾರು ಕೋಟೆಗಳು! ಆದರೆ, ಈ ವಾರ್ಡಿನ ಸುತ್ತ ವಿಶಾಲ ಪ್ರದೇಶವಿತ್ತು. ಸುತ್ತಾಡಲು, ಆಟವಾಡಲು ಅವಕಾಶವಿತ್ತು.

ವಾರ್ಡು ಸಿದ್ಧವಾದೊಡನೆ ಅಜಯನೂ ಆತನ ಗೆಳೆಯರೂ ತಮ್ಮ ಹೊಸ ರಾಜ್ಯಕ್ಕೆ ತೆರಳಿದರು. ಇನ್ನೂ ಹಲವಾರು ಮಂದಿ ರಾಜಕೀಯ ಖೈದಿಗಳು ಅವರ ಜೊತೆ ಸೇರಿದರು. ಬಾಹ್ಯ ಜಗತ್ತು ಮಾತ್ರವೇ ಅಲ್ಲ. ಜೇಲಿನ ಇತರರ ಸಂಪರ್ಕ ಇಲ್ಲವಾದರೂ ಈ ಪ್ರದೇಶ ಅನುಕೂಲವೇ ಆಗಿತ್ತು. ನಿಮಿಷ ನಿಮಿಷಗಳ ಕಿರುಕುಳ ಇಲ್ಲಿರಲಿಲ್ಲ.

ಪಂಡಿತ್ ರೂಪ್‌ಚಂದ್, ಇಂದ್ರಪಾಲ್, ಮಾಲಿಕ್ ಕುಂದನ್ ಲಾಲ್, ಜಹಂಗೀರಿಲಾಲ್ ಮತ್ತಿತರರೆಲ್ಲ ಈಗ ಅಜಯನಿಗೆ ಭೇಟಿಯಾದರು. ಹಳೆಯ ಕಾಲದ ಕ್ರಾಂತಿಕಾರೀ ತಂಡದ ದಿನಗಳೂ ಅವರಿಗೆ ನೆನಪಾದವು. ಪರಸ್ಪರ

ವಿಚಾರ ವಿನಿಮಯ, ಮಾತುಕತೆಗಳಲ್ಲಿ ದಿನಗಳು ಕಳೆದುದೇ ಅವರಿಗೆ ಅರಿವಾಗಲಿಲ್ಲ.

ಇಷ್ಟೊಂದು ಮಂದಿ ಜೊತೆಯಾಗಿ ಸೇರಿ ಹೊತ್ತು ಕಳೆಯುವುದಾದರೂ ಹೇಗೆ ?

ಅವರಿಗೆ ವಿಶಾಲವಾದ ಪ್ರದೇಶ ಆಹ್ವಾನ ನೀಡುತ್ತಿತ್ತು.

ತಮ್ಮ ಕೈ ಹಾಗೂ ದೊರೆತ ಕಡ್ಡಿ, ಕೋಲುಗಳನ್ನೇ ಬಳಸಿ, ಅವರೀಗ ತೋಟಗಾರಿಕೆಯಲ್ಲಿ ತೊಡಗಿದರು. ತರಕಾರಿ ಬೆಳೆದರು. ಹಣ್ಣುಗಳ ಗಿಡಗಳನ್ನು ಗಾರ್ಡುಗಳ ಮೂಲಕ ತರಿಸಿಕೊಂಡರು. ಈ ಹೊಸ ಉದ್ಯಮ ಅವರ ಉತ್ಸಾಹವನ್ನು ಬೆಳೆಸಿತು.

ಕೆಲವೇ ತಿಂಗಳಲ್ಲಿ ಸುಂದರವಾದ ತೋಟ ಬೆಳೆದು ನಿಂತಿತು. ತರಕಾರಿ ಬೆಳೆದಾಯಿತು. ಅದನ್ನು ಉಪಯೋಗಿಸುವುದು ಸಮಸ್ಯೆಯಾಯಿತು. ಹಬ್ಬಗಳ ಆಚರಣೆಯ ದಿನಗಳಲ್ಲಿ ಅವುಗಳನ್ನು ಬಳಸಲು ಮುಂದಾದರು.

ಯಾವುದೇ ವಸ್ತು ಬೇಕಾದರೂ ಜೇಲಿನೊಳಗೆ ಬರುತ್ತದೆ. ಆದರೆ ಅದರ ಬೆಲೆ ಮಾತ್ರ ಇಮ್ಮಡಿ ಮುಮ್ಮಡಿಯಾಗಬಹುದು. ಜೇಲಿನ ಕಾವಲುಗಾರರು, ಗಾರ್ಡುಗಳು ಈ ಸಾಹಸ ನಡೆಸಿ ತಮ್ಮ ಆದಾಯ ಹೆಚ್ಚಿಸಿಕೊಳ್ಳುತ್ತಿದ್ದರು.

ಆದರೆ, ಜೇಲಿನಲ್ಲಿ ಯಾವುದೇ ಸ್ವಾತಂತ್ರ್ಯ ಇರಬಾರದೆಂಬುದೇ ಅಲ್ಲಿನ ಶಾಸನ. ತೋಟಗಾರಿಕೆಯನ್ನು ಕಂಡು ಅದೊಂದು ದಿನ ಜೇಲರಿಗೂ ಕೋಪ ಉಕ್ಕಿತು. "ಅಶಿಸ್ತು !" ಎಂದು ಆತ ಕಿರಿಚಿದ. ಮರುದಿನವೇ ವರ್ಷಕಾಲದ ಆ ಪ್ರಯತ್ನವೆಲ್ಲ ಅಳಿದುಹೋಯಿತು. ಜೇಲಿನ ಗಾರ್ಡುಗಳು, ಕ್ರಿಮಿನಲ್ ಖೈದಿಗಳ ಸಹಕಾರದಿಂದ ಅದನ್ನು ನೆಲಸಮ ಮಾಡಿದರು.

ಈ ವಿಷಯದಲ್ಲಿ ಕ್ರಾಂತಿಕಾರಿಗಳಿಗೂ ಜೇಲು ಅಧಿಕಾರಿಗಳಿಗೂ ತೀವ್ರ ಹೋರಾಟವೇ ನಡೆಯಿತು. ಕ್ರಾಂತಿಕಾರಿಗಳು ಮತ್ತೊಮ್ಮೆ ತೋಟಗಾರಿಕೆ ಆರಂಭಿಸಿದರು.

ಅಜಯ ನೆಟ್ಟಿದ್ದ ಮಾವಿನ ಗಿಡ ಆಗಲೇ ಅವನ ಎತ್ತರಕ್ಕೆ ಬೆಳೆದಿತ್ತು. ಜೇಲು ಸೇರಿ ಎಷ್ಟು ವರ್ಷವಾಯಿತೆಂಬುದನ್ನು ಅದು ಅವನಿಗೆ ತಿಳಿಯಹೇಳುತ್ತಿತ್ತು.

ಗಿಡದ ಮಾತು ಅಜಯನಿಗೆ ಅರ್ಥವಾಗದಿದ್ದರೂ, ಹೊರಗಿನ ಜಗತ್ತಿನ ಸುದ್ದಿ ಅವನಿಗೆ ಅದರ ಅರ್ಥ ಹೇಳಿತು.

ದೇಶದಲ್ಲಿ ಮಹಾ ಚುನಾವಣೆಗಳು ನಡೆದು ಹಲವು ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ನಾಯಕರು ಆಡಳಿತೆ ಆರಂಭಿಸಿದ್ದರು. ಅಲ್ಲಿ ರಾಜಕೀಯ ಖೈದಿಗಳ ಪರಿಸ್ಥಿತಿ ಸುಧಾರಿಸಿದ ಬಗೆಗೂ ಅವನಿಗೆ ವಾರ್ತೆ ತಿಳಿಯಿತು.

ಆದರೆ ಪಂಜಾಬ್‌ನಲ್ಲಿ......

ಬ್ರಿಟಿಷ್ ಸರ್ಕಾರದ ಸ್ನೇಹಿತರೇ ಅಧಿಕಾರಕ್ಕೆ ಬಂದರು. ಸರ್ ಸಿಕಂದರ್ ಹಯಾತ್ ಖಾನ್ ಮುಖ್ಯಮಂತ್ರಿಗಳಾದರು.

ರಾಜಕೀಯ ಖೈದಿಗಳ ಪರಿಸ್ಥಿತಿ ಸುಧಾರಿಸುವ ಅಥವಾ ಬಿಡುಗಡೆ ಹೊಂದುವ ವಾತಾವರಣ ಇಲ್ಲಿರಲಿಲ್ಲ! ಬದಲಾಗಿ ಅಂಡಮಾನ್‌ನಲ್ಲಿದ್ದ ಮುನ್ನೂರು ಮಂದಿ ರಾಜಕೀಯ ಖೈದಿಗಳು ಭಾರತಕ್ಕೆ ಹಿಂತಿರುಗಿದರು. ಅವರಲ್ಲಿ ಹತ್ತು ಮಂದಿ ಲಾಹೋರ್ ಸೆರೆಮನೆಗೆ ಸೇರಿದರು.

## ೨೩

ಅಜಯ ತಾನು ನೆಟ್ಟು ಬೆಳೆಸಿದ ಮಾವಿನ ಗಿಡಕ್ಕೆ ನೀರೆರೆಯುತ್ತಿದ್ದ.

ಕೆಲವೇ ವರ್ಷಗಳು ಸಾಕು...

ಈ ಗಿಡ ಮರವಾಗಿ ಫಲ ಕೊಡಲಿದೆ. ಗೆಳೆಯರೆಲ್ಲರೂ ಜೊತೆಗೂಡಿ ಆ ದಿನ ವಸಂತೋತ್ಸವ ಆಚರಿಸಬೇಕು !

ಆದರೆ......?

ಎಲ್ಲ ಕಾಯಿಗಳು ಒಂದೇ ಬಾರಿಗೆ ಬೆಳೆಯುವುದಿಲ್ಲ ; ಹಣ್ಣಾಗುವುದೂ ಇಲ್ಲ.

ಹಾಗಾಗುವುದೂ ಉಚಿತವಲ್ಲ.

ಹಾಗಾದರೆ, ಮತ್ತೆ ಒಂದು ವರ್ಷ ಫಲಕ್ಕಾಗಿ ಕಾಯಬೇಕು. ಕೆಲವೊಮ್ಮೆ ಅದು ಎರಡು ವರ್ಷಗಳಾಗುವುದೂ ಉಂಟು.

ಸ್ವಾತಂತ್ರ್ಯ ಚಳುವಳಿ ಹೀಗೇ ನಡೆಯಿತು. ನಿರಂತರವಾದ ಹೋರಾಟ ಸಾಗಿತು. ಕೆಲವು ಮಾಗಿದ್ದುವು. ಕೆಲವು ಕಾಯಿಯಾಗಿದ್ದುವು. ಕೆಲವು ಮಿಡಿಗಳು. ಇನ್ನು ಕೆಲವು ಹೂವಾಗಿಯೇ ಬಾಡಿದುವು !

ಹೌದು. ಆದರೂ ನಮ್ಮ ಕರ್ತವ್ಯ ನಾವು ಮಾಡಲೇಬೇಕು.

ಈ ಗಿಡಕ್ಕೆ ನೀರೆರೆಯಬೇಕು.

ಸ್ವಾತಂತ್ರ್ಯ ಚಳುವಳಿಯ ಕತೆಯೂ ಹೀಗೇ ನಡೆಯುತ್ತದೆ.

ಇಂದು ಹೋರಾಡಿದವರು, ಸೆರೆಯಾದವರು, ಬಲಿಯಾದವರು ಯಾರೋ, ಏನೋ, ಮುಂದೆ ಆ ಸ್ವಾತಂತ್ರ್ಯದ ಸವಿ ಅನುಭವಿಸುವವರು ಇನ್ನು ಯಾರೋ ?

ಮುಂದಿನ ಪೀಳಿಗೆ ಸ್ವತಂತ್ರವಾಗಿ ಸುಖವಾಗಿ ಬಾಳಲೆಂದು ಇಂದಿನ ಪೀಳಿಗೆ ಹೋರಾಡಬೇಕು.

ಮುಂದೆ ಹಣ್ಣು ಬಿಡಲಿ ಎಂದು ಇಂದು ಗಿಡ ನೆಟ್ಟು, ನೀರೆರೆದು, ಪೋಷಿಸಿ ಬೆಳೆಸಬೇಕು.

" ನೀರನೆರೆ ಗೆಳೆಯ......
ಗಿಡ ಬೆಳೆಯಲೆಂದು......ಹೂ ಅರಳಲೆಂದು......
ನೀರನೆರೆ ಗೆಳೆಯ...ss
ಹೂವಾಗಿ ಅರಳುವುದೊ ? ಕಾಯಾಗಿ ಉರುಳುವುದೊ ?
ನಾವಿದನು ಅರಿತಿಹೆವೆ ?
ಆದರೂ...ನೀರನೆರೆ ಗೆಳೆಯ..."

ಅಜಯನಿಗೂ ಹಳೆಯ ನೆನಪುಗಳು ಮರುಕಳಿಸಿದುವು. ೧೯೩೭ ರ ಆ ಉತ್ಸಾಹ, ಬಿಡುಗಡೆಯಾಗುತ್ತೇವೆ ಎಂಬ ಕನಸು. ಅನಂತರ ನಡೆದ ಉಪವಾಸ ಸತ್ಯಾಗ್ರಹ ಹಾಗೂ ಚಿತ್ರ ಹಿಂಸೆಗಳು. ಅವೆಲ್ಲವೂ ವಿಫಲವಾಗಿ ಕಾಂಗ್ರೆಸ್ ನಾಯಕರು ಅವರಿಗೆ ಸಹಾಯ ಮಾಡಲಾಗದೆ ವಿಷಾದಿಸಿದ ಘಟನೆ, ಕಾಂಗ್ರೆಸ್ ಸಂಸ್ಥೆ ಹಾಗೂ ಗಾಂಧಿಜಿ ಮಾಡಿದ ಪ್ರಯತ್ನಗಳು–ಎಲ್ಲವೂ ನಿರುಪಯುಕ್ತ ವಾಗಿದ್ದವು.

ಆ ದಿನಗಳು ಕಳೆದು ಮರೆತುಹೋಗಿವೆ. ಈಗ ಮಹಾ ಯುದ್ಧ ಆರಂಭ ವಾಗಿದೆ.

ಭಾರತೀಯರ ಪ್ರತಿನಿಧಿಯೆನಿಸಿದ ಕಾಂಗ್ರೆಸ್ಸಿನ ಅಭಿಪ್ರಾಯವನ್ನು ಕೇಳದೆ, ಬ್ರಿಟಿಷ್ ಸರ್ಕಾರ ಭಾರತವೂ ಯುದ್ಧದಲ್ಲಿ ಪಾಲುಗೊಂಡಿದೆ ಎಂದು ಘೋಷಿಸಿ, ಜರ್ಮನಿಯ ವಿರುದ್ಧ ಯುದ್ಧ ಸಾರಿ, ಎಲ್ಲ ಸ್ವಾತಂತ್ರ್ಯಗಳನ್ನೂ ಮೊಟಕು ಮಾಡುವ ಸುಗ್ರೀವಾಜ್ಞೆಗಳನ್ನು ಹೊರಡಿಸಿದೆ.

ಅಜಯ ತೋಟಗಾರಿಕೆಯಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದ. ಅವನ ನೆಚ್ಚಿನ ಗಿಡಗಳಿಗೆ ನೀರೆರೆಯುತ್ತಲೂ ಇದ್ದ.

ಕಾಂಗ್ರೆಸ್ ಮಂತ್ರಿಮಂಡಲಗಳು ರಾಜಿನಾಮೆ ನೀಡಿ ಅಧಿಕಾರ ತ್ಯಜಿಸಿ ದುವು......

ಬ್ರಿಟಿಷ್ ಸರ್ಕಾರದ ಸರ್ವಾಧಿಕಾರೀ ನೀತಿಯನ್ನು ಪ್ರತಿಭಟಿಸಿ ಗಾಂಧೀಜಿ, ವೈಯಕ್ತಿಕ ಸತ್ಯಾಗ್ರಹವನ್ನು ಘೋಷಿಸಿದರು. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೊಸ ಅಧ್ಯಾಯ ಆರಂಭವಾಯಿತು.

ಮತ್ತೊಮ್ಮೆ ಸಹಸ್ರಾರು ಮಂದಿಯ ದಸ್ತಗಿರಿಯಾಯಿತು. ಜೇಲು ಗಳು ತುಂಬಿದುವು. ಕಾಂಗ್ರೆಸ್ಸಿಗರಲ್ಲದೆ, ಪ್ರಗತಿಶೀಲರೆಲ್ಲರೂ ಸೆರೆ ಸೇರಿದರು.

ಕಾರ್ಮಿಕರು, ರೈತರು ಯುದ್ಧವನ್ನು ವಿರೋಧಿಸಿದವರು, ಬಲಾತ್ಕಾರದ ಯುದ್ಧ ನಿಧಿ ಸಂಗ್ರಹವನ್ನು ಪ್ರತಿಭಟಿಸಿದವರು ದಸ್ತಗಿರಿಯಾದರು.

ಅಜಯ ಮತ್ತು ಅವನ ಗೆಳೆಯರ ಉತ್ಸಾಹ ಈಗ ಹೆಚ್ಚಿತು. ಹೊಸ ಗೆಳೆಯರೊಡನೆ ಚರ್ಚೆ ವಿಚಾರ ವಿನಿಮಯ ನಡೆಯಿತು.

" ಹಿಂದೀ ಹಮ್ ಚಾಲೀಸ್ ಕರೋಡ್,

ಹಮ್ ದೇಶ್ ಪೆ ಮರ್ನೇವಾಲೆ,

ಕ್ಯಾ ಮೌತ್‌ಸೆ ಡರ್ನೆವಾಲೆ ? "...

ಹೊಸತೊಂದು ಗೀತ ; ಹೊಸ ಉತ್ಸಾಹಗಳಿಂದ ದೇಶಭಕ್ತರ ಜೇಲಿನ ಕಾರ್ಯಕ್ರಮಗಳು ನಡೆದುವು. ಬ್ರಿಟಿಷ್ ಸರ್ಕಾರ ಎಚ್ಚರಿಕೆಯಿಂದ ಕಾಲ ಹಾಕುತ್ತಿತ್ತು. ತನ್ನ ಸೇನಾಸಂಗ್ರಹ, ಶಸ್ತ್ರಾಸ್ತ್ರಗಳ ಸಂಗ್ರಹವೇ ಅದರ ಗುರಿಯಾಗಿತ್ತು.

ಹದಿನಾರು ತಿಂಗಳಲ್ಲಿ...

ಜರ್ಮನಿಯ ಸರ್ವಾಧಿಕಾರಿ ಅಡಾಲ್ಫ್ ಹಿಟ್ಲರ್‌ನ ಪದತಲದಲ್ಲಿ ಇಡೀ ಯೂರೋಪ್ ಬಾಗಿ ನಿಂತಿತ್ತು. ಬ್ರಿಟನ್ ಮಾತ್ರ ಉಳಿದಿದೆ. ಪೂರ್ವ ದಿಕ್ಕಿನಲ್ಲಿ ಪೋಲೆಂಡಿನ ಅರ್ಧಭಾಗ ರಷ್ಯದ ಅಂಕೆಯಲ್ಲಿದೆ...

" ಇಂದು ಜರ್ಮನಿ ನಮ್ಮದು ; ನಾಳೆ ಇಡೀ ವಿಶ್ವ ನಮ್ಮದು, " ಎಂದು ಘೋಷಿಸಿದ ಹಿಟ್ಲರ್.

ಎಲ್ಲೆಲ್ಲೂ ಬ್ರಿಟಿಷ್ ಸೇನೆಗಳು ಸೋಲನ್ನು ಕಂಡು ಹಿಂದಕ್ಕೆ ಉರುಳುತ್ತಿದ್ದುವು.

ಸಂಪೂರ್ಣ ಸ್ವಾತಂತ್ರ್ಯದ ಘೋಷಣೆಯನ್ನು ಮೊಳಗಿದ ಲಾಹೋರ್‌ನಲ್ಲಿ, ಮುಸ್ಲಿಂ ಲೀಗ್ ಅಧಿವೇಶನ ನಡೆಯಿತು. ಪ್ರತ್ಯೇಕ ಪಾಕಿಸ್ತಾನವೇ ತಮ್ಮ ಗುರಿ ಎಂದು ಸಮ್ಮೇಳನ ಘೋಷಿಸಿತು. ಇದನ್ನು ಕೇಳಿದ ಅಜಯ ಆ ದಿವಸವಿಡೀ ಚಿಂತಾಗ್ರಸ್ತನಾಗಿ ಕುಳಿತ. ಸ್ವಾತಂತ್ರ್ಯದ ಮಹಾ ಹೋರಾಟದ ಸಮಯದಲ್ಲಿಯೂ ಬ್ರಿಟಿಷರು ಜಾತೀಯತೆಯ ವಿಷ ಬೀಜವನ್ನು ನೆಡಲು ಸಮರ್ಥರಾಗಿದ್ದರು.

ಆದರೆ ಭಾರತದಲ್ಲಿ ಹೊಸ ತಂತ್ರವನ್ನುಪಯೋಗಿಸಿ ಮಹಾ ಹೋರಾಟ ಒಂದನ್ನು ಮಹಾತ್ಮಾಜೀ ನಡೆಸಿದ್ದರು. ಅಹಿಂಸೆಯ ಹೊಸ ಅಸ್ತ್ರದಿಂದ ಹಿಂಸೆಯನ್ನು ಎದುರಿಸಿ ಗಾಂಧೀಜಿ ನಿಂತಿದ್ದರು.

ಒಂದಾದ ಮೇಲೊಂದು ಹೋರಾಟ, ಸತ್ಯಾಗ್ರಹ. ಭಾರತದ ನಾಯಕರು ಎಂತಹ ದಬ್ಬಾಳಿಕೆಗೂ ಮಣಿಯಲಿಲ್ಲ. ಉತ್ಸಾಹದಾಯಕವಾದ ಸ್ವಾತಂತ್ರ್ಯದ ಕತೆಗಳು ಜೇಲಿನೊಳಗೆ ನುಸುಳಿ ಬರುತ್ತಿತ್ತು.

'ಬೆಂಕಿ ಆರಲಿಲ್ಲ, ಉರಿಯುತ್ತಿದೆ.' ಅಜಯ ಅದೆಷ್ಟೋ ಬಾರಿ ಹೇಳುತ್ತಾನೆ.

ಆದರೆ ಈ ಸತ್ಯಾಗ್ರಹ ಹಾಗೂ ಈ ಅಹಿಂಸೆ ಬ್ರಿಟಿಷ್ ಸಾಮ್ರಾಜ್ಯ ಶಾಹಿಯನ್ನು ಮಣಿಸೀತೆ ಎಂಬ ಶಂಕೆ ಸದಾ ಅಜಯನಲ್ಲಿ ಮೂಡುತ್ತದೆ. ಅವರಿಗೆ ಅರ್ಥವಾಗುವ ಭಾಷೆ ಒಂದೇ. ಅದು ಕ್ರಾಂತಿಕಾರಿಯೇ ಕಲಿಸಬೇಕು.

ತಾನೂ ಬಿಡುಗಡೆ ಹೊಂದಿದ್ದರೆ ಈ ಮಹಾ ಸಂಗ್ರಾಮದಲ್ಲಿ ಭಾಗ ವಹಿಸಬಹುದಿತ್ತು.

ಬ್ರಿಟಿಷ್ ಶಾಮ್ರಾಜ್ಯಶಾಹಿ ಭಾರತವನ್ನು ಬಿಟ್ಟು ತೊಲಗಬಹುದೇ ?

ಆರಂಭವಾಯಿತು, 'ಕ್ವಿಟ್ ಇಂಡಿಯಾ' ಆಂದೋಲನ. ೧೯೪೨ ರ ಭಾರತ ತೊಲಗಿ ಚಳವಳಿ ಆಂಗ್ಲ ಸಿಂಹಾಸನವನ್ನು ನಡುಗಿಸಿತು.

"ಮಾಡಿ ಇಲ್ಲವೇ ಮಡಿಯಿರಿ!" ಕಾಂಗ್ರೆಸ್ ನಾಯಕರ ಅಂತಿಮ ಕರೆ.

ಆ ಘೋಷಣೆ ಅಜಯನ ಅಂತಃಕರಣವನ್ನು ಕಲಕಿತು. ಅವನೂ ಪ್ರಾರ್ಥಿಸಿದ, ದೇಶದ ಬಿಡುಗಡೆಗಾಗಿ ಮಡಿಯುವ ಆ ಸುದಿನ ಬರಲಿ ಎಂದು !

ದೇಶದಾದ್ಯಂತ ಘೋಷಣೆ ಮುಗಿಲು ಮುಟ್ಟಿತು "ಭಾರತ ಬಿಟ್ಟು ತೊಲಗಿ!"

ದೇಶದಾದ್ಯಂತ ಭೀಕರ ಹೋರಾಟ ಆರಂಭವಾಯಿತು. ಮಹಾನಾಯಕ ರೆಲ್ಲರ ಸೆರೆಯಾಯಿತು. ಬ್ರಿಟಿಷ್ ಸರ್ಕಾರ ತನ್ನ ಪೋಲೀಸ್, ಮಿಲಿಟರಿ ಶಕ್ತಿಗಳನ್ನೆಲ್ಲ ಜನತೆಯ ಮೇಲೆ ಕಳುಹಿಸಿತು. ಇಡೀ ದೇಶವೇ ರೊಚ್ಚಿಗೆದ್ದು ಹೋರಾಡಿತು.

ಅಳಿದವರ ಲೆಕ್ಕವಿಲ್ಲ. ಸೆರೆಯಾದವರಿಗಾಗಿ ನೂರಾರು ಸೆರೆಮನೆಗಳು ತಲೆ ಎತ್ತಿದುವು. ನರಳಿದವರು ಲಕ್ಷ–ಲಕ್ಷ...

ಸೆರೆಮನೆಗಳಲ್ಲಿ ಸಾವಿರಾರು ಮಂದಿ ಕೊಳೆದರು...ವರುಷ ಕಳೆದ ಬಳಿಕ ಬಿಡುಗಡೆಯಾದರು.

ಆದರೆ, ಅಜಯನಿಗೆ ಆ ಭಾಗ್ಯವಿಲ್ಲ. ಶಿಕ್ಷೆಗೆ ಒಳಗಾದವರಿಗೆ ಆ ಪುಣ್ಯವಿಲ್ಲ.

ಅಜಯ ನೀರು ಎರೆಯುತ್ತಲೇ ಇದ್ದ.

ತನ್ನ ಗಿಡದೊಂದಿಗೆ ಅವನೂ ಬೆಳೆದಿದ್ದಾನೆ. ವಯಸ್ಕನಾಗಿದ್ದಾನೆ. ತಾರುಣ್ಯವನ್ನೆಲ್ಲ ಸೆರೆಮನೆಯಲ್ಲಿ ಕಳೆದಿದ್ದಾನೆ.

ಆದರೆ ದೇಶದ ಸುದ್ದಿಗಳೆಲ್ಲ ಅವನಿಗೀಗ ತಿಳಿಯುತ್ತವೆ. ಅವನು ಹಳೆಯ ಖೈದಿ. ಎಲ್ಲ ನೌಕರರ, ಖೈದಿಗಳ, ಅಧಿಕಾರಿಗಳ ಸ್ನೇಹಿತ.

ನೇತಾಜಿ...ಭಾರತದಿಂದ ಮಾಯವಾಗಿದ್ದಾರೆ. ಆಜಾದ್ ಹಿಂದ್ ಸೇನೆ ಜಪಾನರ ಜೊತೆ ಸೇರಿ ನಿಂತಿದೆ. ಭಾರತದ ಬಿಡುಗಡೆ ಖಚಿತ, ಎಂದು ಸುದ್ದಿ ಬಂದಾಗ ಇತರರಂತೆ ಅವನೂ ಹರ್ಷಿತನಾದ, ನಲಿದ. 'ಚಲೋ ದಿಲ್ಲಿ' ರಣಘರ್ಜನೆ ಜೇಲಿನ ಗೋಡೆಯನ್ನು ಭೇದಿಸಿ ಬಂದಿತು.

"ನನಗೆ ರಕ್ತ ಕೊಡಿ ; ನಾನು ನಿಮಗೆ ಸ್ವಾತಂತ್ರ್ಯ ಕೊಡುವೆ," ಎಂಬ ಸುಭಾಷರ ಆಹ್ವಾನ ಅಜಯನಲ್ಲಿ ಹೊಸ ವಿಶ್ವಾಸ ಮೂಡಿಸಿತು.

ಆದರೆ, ಆ ಉತ್ಸಾಹ ಹೆಚ್ಚು ಕಾಲ ಉಳಿಯಲಿಲ್ಲ. ಜರ್ಮನಿಯನ್ನು ನಂಬಲಾಗದು ಎಂದು ಅವರೇ ಹೇಳಿದ್ದರು, ಅದು ನಿಜವಾಯಿತು. ಜಪಾನನ್ನು ನಂಬಬಹುದೇ ? ಆ ದೇಶ, ಸ್ವತಂತ್ರ ಭಾರತವನ್ನು ತಾನೇ ಆಳುವುದಿಲ್ಲ ಎಂದು ಯಾವ ಭರವಸೆ.

ಇಲ್ಲ ; ಭಾರತೀಯರು ತಾವೇ ಸಂಘಟಿತರಾಗಿ, ತಮ್ಮ ಸ್ವಾತಂತ್ರ್ಯ ಗಳಿಸಬೇಕು ; ಯಾವ ದೇಶವೂ ಸ್ವಾತಂತ್ರ್ಯವನ್ನು ರಫ್ತು ಮಾಡಲು ಸಾಧ್ಯವಿಲ್ಲ ; ಬಾಣಲೆಯಿಂದ ಉರಿಯುವ ಬೆಂಕಿಗೆ ಭಾರತೀಯರು ಬೀಳುತ್ತಾರೆ, ಎಂದು ಅಜಯ ತನ್ನ ಗೆಳೆಯರಿಗೆ ಹೇಳಿದ.

ಬ್ರಿಟನ್ ಪ್ರತಿ ಆಕ್ರಮಣಕ್ಕೆ ಸಿದ್ಧವಾಯಿತು.

ಅಮೆರಿಕ ಯುದ್ಧದಲ್ಲಿ ಭಾಗವಹಿಸಿತು.

ಹಿಟ್ಲರನ ಸೋಲು ಹತ್ತಿರವಾಯಿತು.

ಮಜ್ಜಿಗೆ ಬಡಿಸಿದವನೇ ಊಟವನ್ನು ಅಂತ್ಯಗೊಳಿಸಿದವನಾಗುತ್ತಾನೆ...

ಯುದ್ಧ ಕೊನೆಗಾಣಿಸಲು ಅಮೆರಿಕ ನಿರ್ಧರಿಸಿತು. ಜಪಾನಿನ ಹಿರೋಷಿಮಾ ಮತ್ತು ನಾಗಸಾಕಿ ನಗರಗಳ ಮೇಲೆ ಅಣುಬಾಂಬ್ ಸುರಿಸಿತು.

ಲಕ್ಷಾಂತರ ಮಂದಿ ಸುಟ್ಟು ಭಸ್ಮವಾದರು.

ಯುದ್ಧ ಕೊನೆಗಂಡಿತು.

ಹಿಟ್ಲರ್ ಮಡಿದ.

ಬ್ರಿಟಿಷ್ ಸರ್ಕಾರಕ್ಕೆ ವಿಜಯವಾಯಿತು.

ಸ್ವಾತಂತ್ರ್ಯ ಪ್ರೇಮಿಗಳೀಗ ನಿರಾಶೆಯ ಮಡುವಿನಲ್ಲಿ ಇಳಿದರು.

'ಕಾಲ ಕೂಡಿಬರಲಿ' ಎಂಬುದೇ ಅವರ ಬಯಕೆಯಾಗಿತ್ತು.

ಕಾಲ ಕೂಡಿ ಬರುತ್ತಿತ್ತು.

ಕರಾಚಿ, ಮುಂಬಯಿ, ಲಾಹೋರ್ ದೆಹಲಿಗಳಲ್ಲಿ ಭಾರತದ ವಿಮಾನ ದಳಗಳು ಸಂಚು ನಡೆಸಿದುವು. ೧೯೪೬ ರಲ್ಲಿ ಮುಂಬಯಿಯಲ್ಲಿ ಐದು ಸಾವಿರ ನೌಕಾ ಸೇನೆ 'ಆಜಾದ್ ಹಿಂದ್ ಫೌಜ್' ಬಿಲ್ಲೆ ಧರಿಸಿ ಬಂದಿದ್ದರು. ಸೇನಾ ಘಟಕಗಳು ಬ್ರಿಟಿಷರಿಗೆ ಕೊನೆಯ ಎಚ್ಚರಿಕೆ ನೀಡಿದವು.

'ಭಾರತದ ಬಾಡಿಗೆ ಸೈನ್ಯ ಈಗ ಬ್ರಿಟನ್ನಿನ ಬಗ್ಗೆ ನಿಷ್ಠೆ ತಳೆದಿಲ್ಲ. ಭಾರತವನ್ನು ನಿಯಂತ್ರಿಸಲು ಬೇಕಾಗುವ ಬಲಾಢ್ಯ ಸೈನ್ಯವನ್ನು ಹೊಂದಲು ಬ್ರಿಟನ್ನಿಗೆ ಸಾಮರ್ಥ್ಯವಿಲ್ಲ' ಎಂಬುದನ್ನು ಆಳುವವರು ಮನಗಂಡರು.

ಅದರಿಂದ ಬ್ರಿಟನ್ನು ಸ್ವಾತಂತ್ರ್ಯ ಘೋಷಿಸಲು ಸನ್ನಾಹ ನಡೆಸಿತು. ನೆಲದ ಪುಣ್ಯ ಫಲಿಸಿತು.

ಆದರೆ...

ಜನರ ಪಾಪ ತಿರುಗಿ ಬಿತ್ತು. ದೇಶ ಇಬ್ಭಾಗವಾಯಿತು.

ಅಜಯ ಮತ್ತು ಅವನ ಗೆಳೆಯರು, ಭಾರತದ ಸ್ವಾತಂತ್ರ್ಯಕ್ಕಾಗಿ ನೇಣುಗಂಬದ ನೆರಳಿನಲ್ಲಿ ಬದುಕಿರುವವರು, ಪಾಕಿಸ್ತಾನದ ಸೆರೆಮನೆಯಲ್ಲಿರಬೇಕಾದ ಪ್ರಮೇಯ...

ಆಕಸ್ಮಿಕವಾಗಿ ಅಜಯನ ಬಿಡುಗಡೆಯ ಸುದ್ದಿಯನ್ನು ರಂಜಾನ್ ತಂದ.

"ಭಾಯೀ, ಇಂದೋ ನಾಳೆಯೋ ನಿಮ್ಮ ಬಿಡುಗಡೆಯಾಗಬಹುದು."

ಆದರೆ ಒಂದು ದಿವಸವೂ ಅಜಯ ಕಾಯಬೇಕಾಗಿರಲಿಲ್ಲ. ಇನ್ನೊಂದು ಗಂಟೆಯೊಳಗಾಗಿಯೇ ಅವನಿಗೆ ಲಾಹೋರ್ ಸೆರೆಮನೆಯ ಬಾಗಿಲು ತೆರೆಯಿತು. ತಾನು ಜೇಲಿನಲ್ಲಿ ನೀರೆರೆಯುತ್ತಿದ್ದ ಗಿಡಗಳನ್ನು ತಾನು ಬೆಳೆಸಿದ ಮಾವಿನ

ಮರವನ್ನು ಕೊನೆಯದಾಗಿ ಅಜಯ ದೃಷ್ಟಿಸಿದ. ಮಾವಿನಮರ ಬೆಳೆದು ನಿಂತಿತ್ತು. ಶ್ರದ್ಧೆಯಿಂದ ನೀರೆರೆದು ಆತ ಬೆಳೆಸಿದ್ದ.

ಮೌನವಾಗಿ ಅಜಯ ತಾನು ಹಲವಾರು ವರುಷ ಕಳೆದ ಆ ಜೇಲನ್ನು ದಿಟ್ಟಿಸಿದ. ಸ್ವಲ್ಪಹೊತ್ತು ಹಾಗೆಯೇ ನಿಂತಿದ್ದವನು ವೇಗವಾಗಿ ಸ್ಟೇಷನ್ನಿನ ಕಡೆಗೆ ಹೊರಟ.

ಲಾಹೋರಿನಿಂದ—ನವದೆಹಲಿಗೆ!

೧೯೪೭ ರ ಆಗಸ್ಟ್ ೧೪ ರ ನಡು ಇರುಳಿನಲ್ಲಿ ರಾಷ್ಟ್ರ ಬದುಕಿನ ಅಮೃತ ಘಳಿಗೆಯನ್ನು ನಿರೀಕ್ಷಿಸಲು ಅಜಯ ಅಮಿತೋತ್ಸಾಹದಿಂದ ದೆಹಲಿಗೆ ಬಂದಿಳಿದ. ಭಾರತೀಯರ ಹೃದಯದಲ್ಲಿ ಸಂತಸದ ನವಿಲು ಕೇಕೆ ಹಾಕಿ ಕುಣಿಯುತ್ತಿತ್ತು.

ಆ ಮಹಾ ಘಳಿಗೆ ಸಮೀಪಿಸುತ್ತಿತ್ತು.

ಭಾರತದ ನೆಚ್ಚಿನ ನಾಯಕ ಜವಾಹರಲಾಲರ ಧ್ವನಿ ಗಂಭೀರವಾಗಿ ನಾಡಿನ ಎಲ್ಲಾ ಕಡೆಗೆ ಮೊಳಗಿತು.

"ಮಧ್ಯರಾತ್ರಿಯ ಘಂಟೆ ಬಾರಿಸುತ್ತಲೇ ಜಗತ್ತು ನಿದ್ರಿಸುತ್ತಿರುವ ವೇಳೆಯಲ್ಲಿ, ಭಾರತವು ಎಚ್ಚೆತ್ತು ಜೀವ ತಳೆಯುವುದು, ಸ್ವತಂತ್ರವಾಗುವುದು. ಇತಿಹಾಸದಲ್ಲಿ ಎಂದಾದರೊಮ್ಮೆ ಬರುವ ಘಳಿಗೆಯೊಂದುಂಟು. ಅಂತಹ ಘಳಿಗೆಯಲ್ಲಿ ಹಳತಿಂದ ಹೊಸತಿಗೆ ನಾವು ಪದಾರ್ಪಣಮಾಡುತ್ತೇವೆ; ಒಂದು ಯುಗ ಮುಕ್ತಾಯವಾಗುತ್ತದೆ; ದೀರ್ಘಕಾಲದಿಂದ ಅದುಮಿ ಹಿಡಿಯಲ್ಪಟ್ಟ ರಾಷ್ಟ್ರವೊಂದರಲ್ಲಿ ಆತ್ಮ ನುಡಿಯತೊಡಗುತ್ತದೆ. ಈ ಗಂಭೀರ ಗಳಿಗೆಯಲ್ಲಿ ಭಾರತದ ಹಾಗೂ ಆಕೆಯ ಜನತೆಯ ಸೇವೆಗಾಗಿ ಜೀವ ಸವೆಯಿಸಲು ಪ್ರತಿಜ್ಞೆ ಕೈಗೊಳ್ಳುವುದು ನ್ಯಾಯೋಚಿತವಾಗಿದೆ."

ಆ ಗಳಿಗೆಯೂ ಬಂದಿತು. ಮಂಗಳ ವಾದ್ಯಗಳು ಮೊಳಗಿದವು. ದಾಸ್ಯದ ಕುರುಹಾಗಿದ್ದ ಯೂನಿಯನ್ ಜಾಕ್ ಕೆಳಗಿಳಿದು ಭಾರತದ ರಾಷ್ಟ್ರಧ್ವಜ ಹಾರಾಡಿತು. ಯಾವ ಪುಣ್ಯಭೂಮಿಗಾಗಿ ಸಹಸ್ರಾರು ಜನರು ಬಲಿದಾನ ಮಾಡಿದ್ದರೋ ಅವರ ಆಶೆ ಫಲಿಸಿತು.

ಅಜಯನ ಕಣ್ಣಿನಲ್ಲಿ ಆನಂದಬಾಷ್ಪ ಹರಿಯಿತು. ತಾಯಿ ನೆಲವನ್ನು ಮುಟ್ಟಿ, ಆ ಪವಿತ್ರ ಮಣ್ಣನು ತೆಗೆದು ಆತ ಗಟ್ಟಿಯಾಗಿ ಕೂಗಿದ

'ಜೈ ಹಿಂದ್!'. ಭಾರತದ ನಾಲ್ಕು ನಿಟ್ಟಿನಿಂದಲೂ ಕೇಳಿಬರುತ್ತಿತ್ತು ಭಾರತದ ರಾಷ್ಟ್ರಗೀತೆ.

" ಜನಗಣಮನ ಅಧಿನಾಯಕ ಜಯಹೇ "

ಭಾರತ ಭಾಗ್ಯ ವಿಧಾತಾ......"

ಆ ಗೀತೆಯಲ್ಲಿ, ಭಾರತದ ಆ ಅಮರ ಗೀತೆಯಲ್ಲಿ, ಅಜಯ ತನ್ನ ದನಿಯನ್ನೂ ಕೂಡಿಸಿದ.




---

ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ ನಿಯಮಿತ, ಬೆಂಗಳೂರು